# ಗೋಕಾಕರ ಕೃತಿಗಳು

## ಕಾವ್ಯ

ಅಭ್ಯುದಯ
ಇಂದಲ್ಲ ನಾಳೆ
ಉಗಮ
ಊರ್ಣನಾಭ
ಕಲೋಪಾಸಕ
ಕಾಶ್ಮೀರ
ಕೊನೆಯ ದಿನ
ಚಿಂತನ
ತ್ರಿವಿಕ್ರಮರ ಆಕಾಶಗಂಗೆ
ತ್ರಿಶಂಕುವಿನ ಪ್ರಜ್ಞಾ ಪ್ರಭಾತ
ದ್ಯಾವಾ ಪೃಥಿವೀ
ನವ್ಯ ಕವಿತೆಗಳು
ಪಯಣ
ಪುಣ್ಯಭೂಮಿ
ಬಾಳದೇಗುಲದಲ್ಲಿ
ಭಾವರಾಗ
ಸಮುದ್ರ ಗೀತಗಳು
ಹಿಗ್ಗು

## ವಿಮರ್ಶೆ

ಇಂದಿನ ಕನ್ನಡ ಕಾವ್ಯದ ಗೊತ್ತುಗುರಿಗಳು
ಕವಿ ಕಾವ್ಯ ಮಹೋನ್ನತಿ
ನವ್ಯತೆ ಹಾಗೂ ಕಾವ್ಯ ಜೀವನ
ವಿಶ್ವಮಾನವ ದೃಷ್ಟಿ
ಸಾಹಿತ್ಯದಲ್ಲಿ ಪ್ರಗತಿ

## ಪ್ರಬಂಧ

ಚೆಲುವಿನ ನಿಲುವು
ಜೀವನ ಪಾಠಗಳು

## ನಾಟಕ

ಗೋಕಾಕರ ನಾಟಕಗಳು
ಜನನಾಯಕ
ಮುನಿದ ಮಾರಿ
ಯುಗಾಂತರ
ವಿಮರ್ಶಕ ವೈದ್ಯ

## ಪ್ರವಾಸ ಸಾಹಿತ್ಯ

ಸಮುದ್ರದಾಚೆಯಿಂದ
ಸಮುದ್ರದೀಚೆಯಿಂದ

## ಕಾದಂಬರಿ

ಸಮರಸವೇ ಜೀವನ

## ಇಂಗ್ಲಿಷಿನಲ್ಲಿ

English in India: Its present and Future
In Life's Temple
The Song of Life and Other Poems
The Poetic Approach to language
Treasury of Indo-Anglian Poetry
Bendre—Poet and Seer

# ಗೋಕಾಕರ ನಾಟಕಗಳು




ಸುರುಚಿ ಪ್ರಕಾಶನ
ಸರಸ್ವತೀಪುರಂ, ಮೈಸೂರು-9

# ಮುನ್ನುಡಿ

## ವಿಮರ್ಶಕ ವೈದ್ಯ

ಸಾಹಿತ್ಯಿಕ ಹಾಸ್ಯವನ್ನೊಳಗೊಂಡ ರೂಪಕಗಳು ನಮ್ಮಲ್ಲಿ ಕಡಿಮೆ. ಸಾಹಿತ್ಯವನ್ನೇ ವಸ್ತುವನ್ನಾಗಿರಿಸಿಕೊಂಡ ಸುಕುಮಾರ ಪ್ರಯೋಗದ ವಿಮರ್ಶೆ, ವಿಡಂಬನೆಗಳು ಜಗತ್ತಿಗೆ ಉತ್ತರ-ದಕ್ಷಿಣ ಧ್ರುವಗಳಂತಿವೆಯೆಂದು ಹೇಳಬಹುದು. ಇವುಗಳ ನಡುವೆ ಅಣಕ, ವಿದಗ್ಧತೆ, ವ್ಯಂಗ್ಯೋಕ್ತಿ, ವಿನೋದ, ಕೊಂಕುನುಡಿ ಇವೇ ಮೊದಲಾದ ಬೇರೆ ಬೇರೆ ವೃತ್ತಿಗಳು ಸುಳಿದು ಹೋಗುತ್ತವೆ. ಸಾಹಿತ್ಯದಲ್ಲಿಯಾಗಲಿ, ಜೀವನದಲ್ಲಿಯಾಗಲಿ, ನಮ್ಮ ಅಭಿಪ್ರಾಯಗಳು ಇಲ್ಲವೆ ರೀತಿಗಳು ವಿಪರೀತಕ್ಕಿಳಿದಾಗ, ಸತ್ಯದ ಆಭಾಸವನ್ನುಂಟು ಮಾಡುವಂತೆ ಪ್ರಕಟಗೊಂಡಾಗ ಹಾಸ್ಯದ ಯೋಜನೆಯಿಂದ ಸತ್ಯವನ್ನು ಎತ್ತಿಹಿಡಿದು ಭಾವವೈಪರೀತ್ಯವನ್ನು ಇಲ್ಲದಾಗಿಸುವದು ಸಾಧ್ಯವಾಗುತ್ತದೆ. ನಮ್ಮ ಇಂದಿನ ಸಾಹಿತ್ಯಿಕ ದೃಷ್ಟಿಯನ್ನು ಈ ಮಾನದಂಡದಿಂದ ಒರೆದು ನೋಡಲು ನಾನಿಲ್ಲಿ ಹವಣಿಸಿದ್ದೇನೆ.

ಸಾಹಿತ್ಯಿಕ ಪ್ರವೃತ್ತಿಗಳನ್ನೇ ದೃಶ್ಯಕಾವ್ಯದ ವಸ್ತುವಾಗಿ ಮಾಡಿಕೊಂಡು ಈ ಏಕಾಂಕ ಮುಂದುವರಿದಿದೆ. ಚಂಪೂದಿಂದ ಜಾನಪದದ ವರೆಗೆ ಬಹುತೇಕ ಎಲ್ಲ ಆಧುನಿಕ ಕಾವ್ಯಪ್ರಕಾರಗಳೂ ಪ್ರವೃತ್ತಿಗಳೂ ಇಲ್ಲಿ ಪರೀಕ್ಷೆಗೆ ಗುರಿಯಾಗಿವೆ. ಕೆಲವು ಅಣಕಗಳೂ ಇವೆ. ಅಣಕಗಳ ಮೂಲ ಕವನಗಳು ಅವರಿವರವಾದರೂ ಇಲ್ಲಿ ಬರುವ ಪಾತ್ರಗಳೆಲ್ಲ ಕಾಲ್ಪನಿಕವಾಗಿವೆ. ಒಮ್ಮೊಮ್ಮೆ ಒಂದೊಂದು ಪಾತ್ರದಲ್ಲಿ ಒಂದೆರಡು ಪ್ರವೃತ್ತಿಗಳೂ ಒಟ್ಟುಗೂಡಿರುವುದುಂಟು. ವಿನೋದ ಹಾಗು ಚಮತ್ಕಾರವೈಚಿತ್ರ್ಯ (fanasty) ಕೂಡಿ ಈ ಸುಕುಮಾರ ದೃಶ್ಯಕ್ಕೆ ಒಂದು ಹೊಸ ಕಳೆಯನ್ನು ತಂದಿವೆ.

**ವಿಮರ್ಶಕ ವೈದ್ಯವು** ಹಾಸ್ಯ-ವಿಡಂಬನೆಗಳ ದ್ವಾರವಾಗಿ ಸತ್ಯ ಹಾಗು ಔಚಿತ್ಯದ ಪಕ್ಷವನ್ನು ಸಮರ್ಥಿಸುತ್ತದೆ. ಇದು ಮುಖ್ಯತಃ ಸತ್ಯ-ಔಚಿತ್ಯಗಳ ಬೆಳಕಿನಲ್ಲಿ ಇಂದಿನ ಪದ್ಯಕಾವ್ಯದ ವಿವಿಧ ಪ್ರಕಾರಗಳನ್ನು ಪರೀಕ್ಷಿಸುತ್ತದೆ. ಯಾವ ಲೇಖಕರ ಕೃತಿಗಳಿಂದ ಇಲ್ಲಿ ಕೆಲವು ಭಾಗಗಳನ್ನು

ಆಯ್ದುಕೊಂಡಿದೆಯೋ ಅವರ ವಿಷಯದಲ್ಲಿ ನನಗೆ ಪ್ರೀತಿ-ಆದರಗಳಿವೆ ಯೆಂದು ಹೇಳಬಯಸುತ್ತೇನೆ ಎಂದು ಹಿಂದೆಯೇ ನಾನು ಬರೆದಿದ್ದೆ. ಇದು ಬರಿ ವಿನಯವಲ್ಲವೆಂಬುದನ್ನು ನನ್ನ ವಿಮರ್ಶೆಗಳನ್ನು ಓದಿದ ವಾಚಕರು ಅರಿಯದಿರಲಾರರು.

ಇಂದಿನ ಕೆಲವೊಂದು ಸಾಹಿತಿಗಳ ಕೃತಿಗಳಿಂದ ಉದಾಹರಣೆಗಳನ್ನು ಆಯ್ದುಕೊಂಡ ಮಾತ್ರಕ್ಕೆ ಅವರನ್ನು ವಿಡಂಬಿಸುವದೇ ಇಲ್ಲಿಯ ಉದ್ದೇಶವಿದೆ ಎಂದು ಯಾರೂ ತಿಳಿಯಬಾರದೆಂದು ನಾನು ಬಿನ್ನವಿಸುತ್ತೇನೆ. ವೈಯಕ್ತಿಕ ಟೀಕೆಯಿಂದ ಸಾಹಿತ್ಯಕ್ಕಾಗುವ ಹಾನಿಯು ಅಷ್ಟಿಷ್ಟೆಂದಲ್ಲ. ಉದಾಹರಣೆ ಗಳನ್ನು ಅವರಿವರ ಕೃತಿಗಳಿಂದ ಆಯ್ದುಕೊಂಡಿದ್ದರೂ, ಅವರ ಕೃತಿಗಳ ಹಾಗು ಅವರ ವಿಷಯದಲ್ಲಿ ನನಗೆ ಪ್ರೀತಿ ಆದರಗಳಿವೆಯೆಂದು ಹೇಳಬಯಸು ತ್ತೇನೆ. ಇಲ್ಲಿ ಟೀಕೆಗೆ ಪಾತ್ರವಾದುದು ಭಾವವೈಪರೀತ್ಯವು ಮಾತ್ರ. ಇಂಥ ವಿಪರೀತ ದೃಷ್ಟಿಯೂ ಪ್ರತಿಯೊಬ್ಬರಲ್ಲಿಯೂ ಅನೇಕ ಸಲ ಕಾಣಿಸಿಕೊಳ್ಳುವ ದೆಂಬುದು ಎಲ್ಲರ ಅನುಭವದ ಮಾತು. ಆದರೂ ಈ ವಿಷಯದಲ್ಲಿ ಯಾವ ತಪ್ಪು ತಿಳುವಳಿಕೆಗೂ ಅವಕಾಶ ಕೊಡಬಾರದೆಂದು ನಾನು ಇಲ್ಲಿಯ ಉದಾ ಹರಣೆಗಳನ್ನು ವಿಶೇಷತಃ ನನ್ನ ಸ್ನೇಹಿತರ ಕೃತಿಗಳಿಂದ ಆಯ್ದುಕೊಂಡಿ ದ್ದೇನೆ. ನನ್ನ ಕೃತಿಗಳೂ ಇದಕ್ಕೆ ಹೊರತಾಗಿಲ್ಲ.

" You are the top" ಎಂಬ ಆಂಗ್ಲ ಕವಿತೆಯು ಅಮೇರಿಕೆಯಲ್ಲಿ ಪ್ರಚಲಿತವಾಗಿದ್ದ ಒಂದು Broadway-song; ಅಂದರೆ ಹಾಸ್ಯಮಯ ಪ್ರೇಮಗೀತೆಯಾಗಿದೆ. ಅದನ್ನು ಇಲ್ಲಿ ಸಂದರ್ಭಾನುಸಾರವಾಗಿ ಬಳಸಿ ಕೊಂಡಿದ್ದೇನೆ. ನೀಲಕಂಠಶಾಸ್ತ್ರಿಗಳ ಚಂಪೂಕಾವ್ಯವನ್ನು ಬರೆದುಕೊಟ್ಟುದ ಕ್ಕಾಗಿ ನಾನು ಗೆಳೆಯ ಮುಗಳಿಯವರಿಗೆ ಋಣಿಯಾಗಿದ್ದೇನೆ.

*   *   *

ಇದು ಅನೇಕ ಕಡೆಗೆ ಪರಿಣಾಮಕಾರಿಯಾಗಿ ಪ್ರಯೋಗಿಸಲ್ಪಟ್ಟ ಏಕಾಂಕ ದೃಶ್ಯ.

**ಯುಗಾಂತರ**

'ಯುಗಾಂತರ'ವನ್ನು ಓದಿದ ಗೆಳೆಯರೊಬ್ಬರು: "ಇದನ್ನು 'ಹೊಸ

ಬಾಳಿನ ಸುಕುಮಾರ ಪ್ರಯೋಗ' ಎಂದು ಕರೆದಿದ್ದೀರಿ. ಇದು ಸುಕುಮಾರ ಪ್ರಯೋಗವೇನೋ ನಿಜ. ಆದರೆ ಇಲ್ಲಿ ಚಿತ್ರಿತವಾದ ಜೀವನದಲ್ಲಿ ಅಷ್ಟೊಂದು ಹೊಸದೇನಿದೆ ?" ಎಂದು ಕೇಳಿದ್ದಾರೆ. ಹೀಗಾಗಿ ಒಂದು ಹೆಸರನ್ನಿಟ್ಟ ನಾನು, ಆ ಹೆಸರಿಟ್ಟ ಕಾರಣವನ್ನು ವಿವರಿಸಬೇಕಾಗಿದೆ.

"ಯುಗಾಂತರ"ದಲ್ಲಿ ಚಿತ್ರಿತವಾದ ಬಾಳು ಯುಗ-ಯುಗಗಳ ಬಾಳೆಂಬುದು ಮೇಲೆಯೇ ಕಾಣುತ್ತದೆ. ಪ್ರೇಮ, ವಿವಾಹ, ತಾಯ್ತನ,—ಇದರಲ್ಲಿ ಒಂದು ದೃಷ್ಟಿಯಿಂದ ಹೊಸತೇನೂ ಇಲ್ಲ. ಕವಿ, ಸಮಾಜಸೇವಕ, ವಂಚಕ, ಸನಾತನಿ,—ಈ ಪ್ರಕಾರಗಳೂ ಮಾನವಜಾತಿಯಲ್ಲಿ ಯಾವಾಗಲೂ ಕಾಣಿಸಿಕೊಂಡಿವೆ. ಆದರೆ ಇದೇ ವಿಚಾರಸರಣಿಯನ್ನು ಮುಂದುವರಿಸಿದಲ್ಲಿ ಜೀವನದಲ್ಲಿ ಎಲ್ಲವೂ ಪರ್ವತದಷ್ಟು ಪುರಾತನವೆಂಬ ಸಿದ್ಧಾಂತಕ್ಕೆ ನಾವು ಬಂದು ಮುಟ್ಟುತ್ತೇವೆ. ಅಂದರೆ, ಹೀಗೆಲ್ಲ ನೋಡುವಾಗ ನಾವು 'ಸತ್' ತತ್ವಕ್ಕೆ ಇಲ್ಲವೆ ಅಕ್ಷರ ಪುರುಷನಿಗೆ ಪಟ್ಟಗಟ್ಟಿ ಭಾವನ (Becoming) ತತ್ವ ಇಲ್ಲವೆ ಕ್ಷರ ಪುರುಷನನ್ನು ಅಲಕ್ಷಿಸುತ್ತೇವೆ.

ಆದರೆ ಜೀವನವು ದತ್ತಾತ್ರೇಯನಂತೆ ತ್ರಿಮೂರ್ತಿಯಾಗಿದೆ. ಕ್ಷರ ಪುರುಷ, ಅಕ್ಷರಪುರುಷ, ಪುರುಷೋತ್ತಮ,—ಈ ತ್ರಿಕೂಟದ ಪವಾಡವು ಕಣ-ಕಣದಲ್ಲಿಯೂ ಕಾಣುತ್ತದೆ. ಚಿರಂತನತೆಯೂ ನೂತನತೆಯೂ ಅಮರತೆಯೂ ಸೃಷ್ಟಿಯ ಪ್ರತಿಯೊಂದು ಕಣದಲ್ಲಿ ಬೆರೆತುಕೊಂಡಿವೆ. ಪ್ರತಿಯೊಂದು ಯುಗದಲ್ಲಿ ಚಿರಂತನತೆ-ನೂತನತೆಗಳು ಬೆರೆಯುವ ಪ್ರಮಾಣವು ಬದಲಿಸುತ್ತದೆ. ನಾವು 'ನೂತನ' ಎಂಬ ಶಬ್ದವನ್ನು ಪ್ರಯೋಗಿಸಿದಾಗ ಒಂದು ಯುಗದ ವಿಶೇಷ ಆವರಣವನ್ನು ಅನುಲಕ್ಷಿಸಿ ಮಾತನಾಡುತ್ತೇವೆ.

ಇಂದು ಜಗತ್ತಿನಲ್ಲಿಯೇ ಒಂದು ಸಂಧಿ ಕಾಲವು ಒದಗಿ ಬಂದಿದೆ. ವಿಜ್ಞಾನದ ಅದ್ಭುತ ಪ್ರಗತಿಯಿಂದ ಮಾನವನ ಆರ್ಥಿಕ ಹಾಗೂ ಸಾಮಾಜಿಕ ಜೀವನದಲ್ಲಿ ಕ್ರಾಂತಿಯಾಗಿದೆ. ಹೀಗೆ ಹೊಸತಾಗಿ ಪ್ರಸ್ತಾಪಿತವಾದ ವಿಚಾರ ಸರಣಿಯು ಎಲ್ಲಿ ಯಾವ ಬೆಳಕಿಂಡಿಯೊಳಗಿಂದ ನೋಡಿದರೂ ಸಮತೆಯು ನೆಲೆಗೊಂಡ ಮಾನವಕುಲದೆದುರು ನಮ್ಮನ್ನು ಒಯ್ದು ನಿಲ್ಲಿಸುತ್ತದೆ. ಮಾರ್ಕ್ಸ್‌ವಾದವು ಈ ಸಮತೆಯ ಅವತಾರವನ್ನು ಬರಮಾಡಿಕೊಳ್ಳುವ ಮಾರ್ಗವೊಂದನ್ನು ಸೂಚಿಸಿರುವದಲ್ಲದೆ ಅದನ್ನು ಒಂದೆಡೆಗೆ ಕಟ್ಟಿ ನಿಂತಿದೆ.

ಹೀಗಾಗಿ ಇಂದಿನ ಯಾವದರ್ಶನವೂ ಮಾರ್ಕ್ಸ್‌ ದರ್ಶನವನ್ನು ಒಂದಿಲ್ಲೊಂದು ರೀತಿಯಿಂದ ಒಳಪಡಿಸಿಕೊಳ್ಳದೆ ಪೂರ್ಣವಾಗಲಾರದು.

ಆದರೆ ಮಾರ್ಕ್ಸ್‌ವಾದವು ಮೂಲದಲ್ಲಿ ಭೌತಿಕವಾಗಿದೆ. ಬುದ್ಧಿ ವಿಜ್ಞಾನಗಳ ಸಹಾಯದಿಂದ ಕಂಡಿರುವದೇ ಸತ್ಯವೆಂದು ಅದು ಸಾರುತ್ತದೆ. ಸಾವಿರಾರು ವರ್ಷಗಳಿಂದ ಬೆಳೆದು ಬಂದ ಅನುಭಾವದ (Mysticism) ಪರಂಪರೆಯನ್ನು ಅದು ಅಲ್ಲಗಳೆಯುತ್ತದೆ. ಬುದ್ಧಿಯಲ್ಲದೆ ಬೇರೊಂದು ಜ್ಞಾನಸಾಧನೆಯೂ ಇದೆ; ಅದೇ ಸಮಗ್ರ ಮಾನವನ ಒಳನುಡಿ (Intuition). ಅದರ ಪ್ರಮಾಣಗಳು ಬೇರೆ; ಅದು ತೆರೆಯುವ ಸೂಕ್ಷ್ಮತರ ಜೀವನದ ಮೀಮಾಂಸೆಯೂ ಇದೆ; ಎಂಬುದನ್ನು ಮಾರ್ಕ್ಸ್‌ವಾದವು ಒಪ್ಪುವದಿಲ್ಲ. ಸಂತತ ಸಂಚಲನೆಯೇ ಸೃಷ್ಟಿಯ ನಿತ್ಯನಿಯಮವೆಂದು ಸಾರಿ ಚಲನರಹಿತ ವಾದ ಸ್ಥಾಣು ಬ್ರಹ್ಮದ ಇಲ್ಲವೆ ಅಕ್ಷರ ಪುರುಷನ ಅಸ್ತಿತ್ವವನ್ನು ಮಾರ್ಕ್ಸ್‌ ವಾದವು ಅಲ್ಲಗಳೆಯುತ್ತದೆ.

ಆದರೆ ಈ ಸಂತತ ಚಲನೆಯು ಏಕೆ ? ಅದರ ತುದಿಮೊದಲೇನು ? ಎಂಬ ಪ್ರಶ್ನೆಗಳಿಗೆ ಮಾರ್ಕ್ಸ್‌ವಾದವು ಉತ್ತರ ಕೊಡುವುದಿಲ್ಲ. ಯಾಕಂದರೆ ವಿಜ್ಞಾನವೇ ಅವುಗಳ ಉತ್ತರವನ್ನು ಇನ್ನೂ ಕಂಡುಹಿಡಿದಿಲ್ಲ. ಹೀಗಾಗಿ ವಿಜ್ಞಾನದ ಅಪೂರ್ಣತೆಯೇ ಮಾರ್ಕ್ಸ್‌ವಾದವನ್ನು ಆವರಿಸಿದೆ.

ಈ ಅಪೂರ್ಣತೆಯ ಮೇಲೆ ಸಮಗ್ರ ಜೀವನದ ತಳಹದಿಯನ್ನು ಹಾಕು ವದು ಶಕ್ಯವಾಗುವದಿಲ್ಲ. ಮಾರ್ಕ್ಸ್‌ವಾದವೇ ಹೇಳಿದೆ: ಸಮತೆಯು ನೆಲೆ ಗೊಂಡ ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಸಾಂಸ್ಕೃತಿಕ ಜೀವನದ ನಿರ್ಮಾಣಕ್ಕಾಗಿ ಸರ್ವಸ್ವತಂತ್ರನಾಗಿರುವನೆಂದು. ಹೀಗಾಗಿ ಕವಿಯು ಇಂದು ಮಾರ್ಕ್ಸ್‌ವಾದ ಹಾಗು ಅನುಭಾವಗಳ ನಡುವೆ ಒಂದು ಸೇತುವೆ ಕಟ್ಟಿ ಪೂರ್ಣ ಜೀವನದ ದರ್ಶನವನ್ನು ನಿಚ್ಚಳವಾಗಿಸಬೇಕಾಗಿದೆ. ಮಾರ್ಕ್ಸ್‌ ವಾದವು ಸಾರುವ ಕ್ರಾಂತಿ,—ಕವಿಯ ದೃಷ್ಟಿಯಲ್ಲಿ ಒಂದು ದೈವಿಕ ಘಟನೆ; ವ್ಯಕ್ತಿಯನ್ನು ಪ್ರೇರಿಸುವ ಹಿಂಸೆಯಲ್ಲ. ಇಂಥ ಕ್ರಾಂತಿಯು ಬರುವದಿದ್ದರೆ ಅದನ್ನು ಯಾರೂ ತಡೆಗಟ್ಟಲಾರರು. ಮಾರ್ಕ್ಸ್‌ನೇ ಹಿಂಸೆಯನ್ನು ಬೋಧಿಸು ವದಿಲ್ಲ. ಸಮತೆಯನ್ನು ಸಾಧಿಸುವಾಗ ಹಿಂಸೆಯು ವರ್ಗಸಮರದ ವಿಧಾಯಕ ಕಾರ್ಯಕ್ರಮದಲ್ಲಿ ನಡುವೆ ತಲೆಯೆತ್ತಿದರೆ ಅದು ವ್ಯಕ್ತಿಯ ಹಾಗು ಸಮಾಜದ

ಅಪೂರ್ಣತೆಯೇ ಹೊರತು ಬೇರೆ ಏನೂ ಅಲ್ಲ.

ಆದಕಾರಣ ಕವಿಯು ಸಮತಾಸಮಾಜವನ್ನು ತನ್ನ ಧ್ಯೇಯವಾಗಿ ಸ್ವೀಕರಿಸುತ್ತಾನೆ. ಆದರೆ ಇದು ಸಾಮಾಜಿಕ ಪುನರ್ಘಟನೆಯ ವಿಷಯ ವಾಯಿತು. ವ್ಯಕ್ತಿಯ ಜೀವನದ ಪುನರ್ಘಟನೆಯೂ ಆಗಬೇಕಲ್ಲ? ಈ ಹಾದಿಯಲ್ಲಿ ವ್ಯಕ್ತಿಯ ಸಂಸ್ಕೃತಿಯೂ ಬೆಳೆಯಬೇಕು. ಮಾನವನನ್ನು ಷಡ್ರಿಪುಗಳ ಬಂಧನದಿಂದ ಸ್ವತಂತ್ರವಾಗಿಸಿ ಪ್ರೀತಿ, ಸ್ನೇಹ, ಕರುಣೆ, ಸೌಂದರ್ಯಗಳ ಹಾದಿಯನ್ನು ತುಳಿಯ ಹಚ್ಚುವದೇ ಈ ಸಂಸ್ಕೃತಿಯ ಸಾಧನಮಾರ್ಗ. ಆದಕಾರಣ ಕವಿಯು ಇದನ್ನೂ ತನ್ನ ಧ್ಯೇಯವಾಗಿ ಸ್ವೀಕರಿಸುತ್ತಾನೆ. ಆತ್ಮ, ಅಮರತೆ, ಸೂಕ್ಷ್ಮತರ ಜೀವನ,—ಇವೆಲ್ಲ ಇನ್ನೂ ಅಸಾಮಾನ್ಯರ ಅನುಭವದ ಭಾಗಗಳಾಗಿವೆ. ವಿಜ್ಞಾನಿಯು ತನ್ನ ಪ್ರಯೋಗ ಮಂದಿರದಲ್ಲಿ ಸಂತತ ಚಲನೆಯ ಮೂಲವನ್ನು ಕಂಡುಹಿಡಿಯಲು ಪ್ರಯತ್ನಿಸು ವಂತೆ ಸಂಸ್ಕೃತಿ-ಜಿಜ್ಞಾಸುವು ಆಶ್ರಮಗಳಲ್ಲಿ ಆತ್ಮ-ಅಮರತೆಗಳನ್ನು ಕುರಿತು ತನ್ನ ಪ್ರಯೋಗಗಳನ್ನು ನಡೆಸುತ್ತಾನೆ. ಸಾಮಾನ್ಯ ಮಾನವರ ದೃಷ್ಟಿ ಯಿಂದ ಸಂಚಲನೆ-ಚಿರಂತನನೆಗಳೆರಡೂ ಇನ್ನೂ ಕಾಣಬೇಕಾದ ಸತ್ಯದ ವಿಸ್ತಾರವಾಗಿವೆ.

ಆದರೆ ಕವಿಯು ಮಾರ್ಕ್ಸ್‌ವಾದದ ಸಮತಾಸಮಾಜವನ್ನು ಸ್ವೀಕರಿಸಿ ದಂತೆ ಮಾರ್ಕ್ಸ್‌ವಾದಿಗೆ ಪ್ರೀತಿ-ಸ್ನೇಹ-ಕರುಣೆ-ಸೌಂದರ್ಯಗಳಲ್ಲಿ ನೆಲೆನೆಲೆ ಯಾಗಿ ನಿಂತ ಸಂಸ್ಕೃತಿಯು ಮಾನ್ಯವಾಗಬಹುದು. ಯಾಕಂದರೆ ಇದು ಹೃದ ಯದ ಸಂಪತ್ತು. ಇದನ್ನು ಸ್ವೀಕರಿಸುವ ಪೂರ್ವದಲ್ಲಿ ಅನುಭಾವದ ಸಿದ್ಧಾಂತ ಗಳಿಗೆ ಸಹಿ ಹಾಕಬೇಕಾಗುವದಿಲ್ಲ.

ಇಂದು ಜಗತ್ತನ್ನೇ ಎದುರಿಸಿದ ಜಟಿಲ ಸಮಸ್ಯೆಗೆ ಈ ಸಮನ್ವಯವೇ ಸಮರ್ಪಕ ಉತ್ತರವಾಗಬಹುದು. ಇದರ ತಳಹದಿಯ ಮೇಲೆ ಇದಕ್ಕೂ ಉಜ್ವಲವಾದ ಸಮನ್ವಯದ ಕಾರ್ಯವು ಪ್ರಾರಂಭವಾಗಬಹುದು. ಅಂತೇ ಈ ಸಮನ್ವಯವನ್ನು ಚಿತ್ರಿಸಿ ತೋರಿಸಿರುವ ಯುಗಾಂತರವನ್ನು 'ಹೊಸ ಬಾಳಿನ ಸುಕುಮಾರ ಪ್ರಯೋಗ' ಎಂದು ಕರೆದಿದೆ.

ಇಲ್ಲಿ ಚಿತ್ರಿತವಾದದ್ದು ಒಂದು ಬೌದ್ಧಿಕ ಸಮಸ್ಯೆಯಲ್ಲ. ಉಜ್ಜೀವನದ ಒಂದು ಪರಿ. ಬೌದ್ಧಿಕ ತತ್ವವು ಆ ಜೀವನದ ಒಂದು ಭಾಗ. ಆದರೆ ಈ

ಬಾಳಿನ ಹೊಸತನವನ್ನು ಎತ್ತಿ ತೋರಿಸಲು ಆ ತತ್ವವೇ ಇಲ್ಲಿ ಹೆಚ್ಚು ಸಹಾಯಕಾರಿಯಾಗಿರುವುದರಿಂದ ಅದನ್ನು ಇಲ್ಲಿ ವಿವರಿಸಲಾಗಿದೆ.

ಕೋಸಲೇಂದ್ರನ ಸೌಂದರ್ಯ-ಕಲ್ಯಾಣಗಳ ಸಮನ್ವಯ, ಮೃಣಾಲಿನಿಯ ಎದೆ-ಮನಗಳನ್ನು ಈ ಸಮನ್ವಯವು ಕ್ರಮೇಣ ಪ್ರೀತಿಯ ಮೂಲಕ ಸೆರೆಹಿಡಿದ ವಿಧಾನ, ಕಿಶನ್ ಕಿಶೋರ ದಂಪತಿಗಳಲ್ಲಿ ಅನುಭಾವ-ಸಂಸಾರಗಳ ಎಳೆತ, ಕಾಂತಿಚಂದ್ರ ದಂಪತಿಗಳಲ್ಲಿ ಕಾರ್ಯಪ್ರಿಯತೆ ಪ್ರಬಲತೆ,—ಈ ಎಲ್ಲ ಉದ್ದೀಪನಗಳಿಂದ ಮೇಲೆ ಹೇಳಿದ ಜೀವನದ ಪರಿಯು ಇಲ್ಲಿ ರೂಪಗೊಂಡಿದೆ.

ಭಾರತವು ಈ ಸಮನ್ವಯಕ್ಕೆ ಫಲವತ್ತಾದ ಭೂಮಿಯಾಗಿದೆ. ಇಂದಿನ ಸಂಧಿಕಾಲವೇ ಯುಗಾಂತರದ ಸೂಚನೆಯನ್ನು ಕೊಡುತ್ತದೆ. ಕನ್ನಡದ ನೆಲವನ್ನೇ ಒಂದಿರಲ್ಲೊಂದು ರೀತಿಯಿಂದ ತೋರಿಸುವ ಇಂದಿನ ರಂಗಭೂಮಿಗೆ ದಿಲ್ಲಿ-ಮಾಹುಗಳ ಭೂಮಿಕೆಯನ್ನು ಇಲ್ಲಿ ಒದಗಿಸಿದೆ. ಬಳಕೆ ಮಾತಿನ ವಿವಿಧ ದೇಸಿಗಳಿಗೆ ಹೆಚ್ಚಾಗಿ ಒಳಗಾಗಿದ್ದ ಇಂದಿನ ದೃಶ್ಯ ಕಾವ್ಯಕ್ಕೆ ಇಲ್ಲಿ ಸಮಂಜಸವಾಗುವಂತೆ ಗ್ರಾಂಥಿಕ ಶೈಲಿಯನ್ನು ಒಳಪಡಿಸಿಕೊಳ್ಳಲಾಗಿದೆ. ದೃಶ್ಯಕಾವ್ಯದ ಮಿತವ್ಯಯಕ್ಕೂ ಜೀವಕಳೆಗೂ ಭಂಗ ಬರದಂತೆ ಇಲ್ಲಿಯ ಚಿತ್ರಣದ ಹವಣಿಕೆಯಿದೆ.

* * * *

**ಯುಗಾಂತರ** ೧೧೪೭ ರಲ್ಲಿ—ಅಂದರೆ ಸ್ವಾತಂತ್ರ್ಯದ ವರ್ಷದಲ್ಲಿ ರೂಪಗೊಂಡಿತು. ಹೈದ್ರಾಬಾದಿದಲ್ಲಿ ೧೯೪೭ರಲ್ಲಿ ನಾಟಕವನ್ನು ಬರೆಯುತ್ತ ಹೋದಂತೆ ಪ್ರಥಮ ಜಿಜ್ಞಾಸುಗಳ ಕೂಟದ ಗೆಳೆಯರು ಇದರ ರಂಗತಾಲೀಮನ್ನು ಪ್ರಾರಂಭಿಸಿದ್ದರು. ಆದರೆ ಅಷ್ಟರಲ್ಲಿ ನಾನು ಮೀಸನಗರಕ್ಕೆ ಹೋದ ಕಾರಣ ಅದು ಅಲ್ಲಿಯೇ ನಿಂತಿತು. ಮುಂದೆ ಧಾರವಾಡಕ್ಕೆ ಹೋದ ಮೇಲೆ ಕರ್ನಾಟಕ ಕಾಲೇಜಿನಲ್ಲಿ ಇದರ ಪ್ರಯೋಗವಾಯಿತು.

'ಸಮನ್ವಯ' ದೃಷ್ಟಿ 'ಸಾಹಿತ್ಯದಲ್ಲಿ ಪ್ರಗತಿ' ಎಂಬ ಪ್ರಬಂಧದಲ್ಲಿ ಸಾಹಿತ್ಯವನ್ನು ಕುರಿತು ಮೊದಲು ನಿಚ್ಚಳವಾಗಿ ರೂಪ ತಾಳಿತು. ಜೀವನವನ್ನು ಕುರಿತು ಮೊದಲು ನಿಚ್ಚಳವಾಗಿ ರೂಪ ಚಿಗುರಿದ್ದು **ಯುಗಾಂತರ**ದಲ್ಲಿ.

ಸ್ವಾತಂತ್ರ್ಯ ಪೂರ್ವದ ಜೀವನದ ಜಾಗೀರು ಸಂಸ್ಥಾನಗಳ ಫೈಲನ್ನು ಜನನಾಯಕ ಚಿತ್ರಿಸಿದರೆ ಸ್ವತಂತ್ರ ಭಾರತದಲ್ಲಿ ತಲೆಯೆತ್ತುವ ಸಮಸ್ಯಾ

ತ್ಮಕ ಜೀವನವನ್ನು **ಯುಗಾಂತರ** ಅಭಿವ್ಯಕ್ತಗೊಳಿಸುತ್ತದೆ. ತಂತ್ರದಲ್ಲಿಯೂ **ಜನನಾಯಕಕ್ಕಿಂತ ಯುಗಾಂತರ** ನವೀನವಾಗಿದೆ.

## ಜನನಾಯಕ

೧

೧೯೩೭ನೆಯ ಇಸ್ವಿಯ ಜ್ಯಾನುವರಿ ತಿಂಗಳಲ್ಲಿ ಪುಣೆಯ ಕರ್ನಾಟಕ ಸಂಘದ ಸದಸ್ಯರಾದ ಕೆಲವು ವಿದ್ಯಾರ್ಥಿಗಳು ಈ ನಾಟಕವನ್ನು ಪ್ರಯೋಗಿಸಿ ತೋರಿಸಿದರು. ಸಂಘದ ವಾರ್ಷಿಕೋತ್ಸವದ ಪ್ರಸಂಗದಲ್ಲಿ ಅಭಿನಯಿಸಲೆಂದೇ ಈ ನಾಟಕವನ್ನು ಬರೆಯಲಾಯಿತು. ಆಗಿನ ಮಟ್ಟಿಗೆ ನಟವರ್ಗದ ಶಿಕ್ಷಕನೂ ನಾಟಕಗೃಹದ ವ್ಯವಸ್ಥಾಪಕನೂ ಆದ ನನಗೆ ಹೊಸತಾದ ಅನುಭವ ದೊರೆಯಿತು. ತರುಣ ಸ್ನೇಹಿತರ ಉತ್ಸಾಹದಲ್ಲಿ ನನ್ನ ಶ್ರಮವೆಲ್ಲ ಮಾಯವಾಯಿತು. ಆಗ ಸುಪ್ರಸಿದ್ಧ ಕವಿಗಳಾದ ಪೀ. ಸೀ. ಅವರು ಸಂಘದ ಮಾನ್ಯ ಅತಿಥಿಗಳಾಗಿದ್ದರು. ಕನ್ನಡದ ಏಳ್ಗೆಗಾಗಿ ಪ್ರಯತ್ನಿಸುವ ಶ್ರೀ ಡಿ. ಸಿ. ಪಾವಟೆಯವರು ಅದೇ ವಿದ್ಯಾಖಾತೆಯ ಅಸಿಸ್ಟೆಂಟ್ ಡೈರೆಕ್ಟರರಾಗಿ ಪುಣೆಗೆ ಬಂದಿದ್ದರು. ಅವರೇ ಸಂಘದ ಅಧ್ಯಕ್ಷರಾಗಿದ್ದರು.

ನನಗೆ ತಿಳಿದ ಮಟ್ಟಿಗೆ ಪುಣೆಯಲ್ಲಿ ಪ್ರಯೋಗಿಸಿದ ಮೊದಲನೆಯ ಕನ್ನಡ ನಾಟಕವೆಂದರೆ ' ಜನನಾಯಕ 'ವೆಂದೇ ಹೇಳಬಹುದು. ಫರ್ಗುಸನ್ ಕಾಲೇಜಿನ ಎಂಪಿಥಿಯಟರು ಅಂದು ನಮ್ಮ ನಾಟಕಗೃಹವಾಗಿತ್ತು. ಪುಣೆಯಲ್ಲಿದ್ದ ಎಲ್ಲ ಕನ್ನಡಿಗರು ಬಂದಿದ್ದರಲ್ಲದೆ ಪ್ರಿ. ಮಹಾಜನಿ, ಪ್ರಿ. ಲಿಮಯೆ ಮೊದಲಾದ ಪ್ರಮುಖರು ಹಾಗು ಅನೇಕ ಗುಜರಾಥಿ ವಿದ್ಯಾರ್ಥಿಗಳು ಆಗಮಿಸಿದ್ದರು. ಕೂಲಿಯವರೆಂದು ನಾಟಕ ನೋಡಬೇಕು ? ' ಜನನಾಯಕ 'ದಲ್ಲಿ ಅವರ ಸಮಸ್ಯೆಯೇ ನಿರೂಪಿತವಾದ ಕಾರಣ, ಊರ ಹೊರಗೆ ' ಗುಳೇಗಟ್ಟಿ ' ಕೂಲಿಗೆಂದು ಬಂದ ಗುಳೇದಗುಡ್ಡದ ಕಡೆಯ ಅನೇಕ ಕನ್ನಡಿಗರನ್ನು ಅಂದು ನಾಟಕಕ್ಕಾಗಿ ಆಮಂತ್ರಿಸಿದ್ದೆವು ! ಎಂಪಿಥಿಯಟರನಲ್ಲಿ ಇಂಥ ಶ್ರೋತೃವೃಂದವು ಕುಳಿತದ್ದು ಇದೇ ಮೊದಲನೆಯ ಸಲವೆನ್ನಬಹುದು.

ಪುಣೆಯ ಕರ್ನಾಟಕ ಸಂಘದಲ್ಲಿ ಒಂದು ವೈಶಿಷ್ಟ್ಯವಿದೆ. ಕರ್ನಾಟಕದ ಏಕೀಕರಣವು ಇಷ್ಟರಲ್ಲಿ ಎಲ್ಲಿಯಾದರೂ ಸಾಧಿಸಿದ್ದಾದರೆ, ಅದು ಮೊದಲು ಪುಣೆಯ ನಮ್ಮ ಸಂಘದಲ್ಲಿಯೆಂದು ಹೇಳಬಹುದು. ವಾಡಿಯಾ ಹಾಗು

ಫರ್ಗ್ಯುಸನ್ ಕಾಲೇಜುಗಳಲ್ಲಿ ಉತ್ತರ ಕರ್ನಾಟಕದಿಂದ ಬಂದ ಅನೇಕ ವಿದ್ಯಾರ್ಥಿಗಳಿರುತ್ತಾರೆ. ಎಸ್. ಪಿ. ಕಾಲೇಜಿನಲ್ಲಿ ಜಮುಖಂಡಿ ಸಂಸ್ಥಾನದಿಂದ ಬಂದ ವಿದ್ಯಾರ್ಥಿಗಳ ಸಂಖ್ಯೆಯು ಕನಿಷ್ಠಪಕ್ಷಕ್ಕೆ ಐವತ್ತಿರುತ್ತದೆ. ಇದಲ್ಲದೆ ಲಾ. ಕಾಲೇಜಿಗೆ ಮೈಸೂರಿನಿಂದ ಅನೇಕರು ಬರುತ್ತಾರೆ. ಮಂಗಳೂರ ಕಡೆಯಿಂದ ಕೆಲಸದ ಮೇಲೆ ಬಂದ ಸಾರಸ್ವತರು ಕೆಲವರು ಪುಣೆಯಲ್ಲಿ ಕಂಡರೆ, ನಿಜಾಮ ಇಲಾಖೆಯಿಂದ ಬಂದ ಅನೇಕ ವಿದ್ಯಾರ್ಥಿಗಳು 'ಫರ್ಗ್ಯುಸನ್'ದಲ್ಲಿ ಇರುತ್ತಾರೆ. ಬೇರೆ ಬೇರೆ ಭಾಗಗಳಿಂದ ಬಂದ ಅನೇಕರು ಕರ್ವೆ ಯುನಿವ್ಹರ್ಸಿಟಿ, ಮೆಡಿಕಲ್ ಸ್ಕೂಲ್ ಹಾಗು ಎಗ್ರಿಕಲ್ಚರಲ್ ಕಾಲೇಜಿನಲ್ಲಿ ಕಂಡುಬರುತ್ತಾರೆ. ಹೀಗಾಗಿ ಪುಣೆಯ ಸಂಘದಲ್ಲಿ ಬಹುತರ ಕರ್ನಾಟಕದ ಎಲ್ಲ ಭಾಗಗಳ ಸಂಸ್ಕೃತಿಯ ಸಮ್ಮಿಲನವಾಗಿರುವದೆನ್ನಲು ಏನೂ ಅಭ್ಯಂತರವಿಲ್ಲ.

ಇದೆಲ್ಲ ವೈವಿಧ್ಯವು 'ಜನನಾಯಕ'ದ ಪ್ರಯೋಗದ ಸಮಯದಲ್ಲಿ ಕಂಡು ಬಂದಿತು. ಇದರಲ್ಲಿ ಕಮಿಶನರ ಪಾತ್ರ ವಹಿಸಿದವರು-ಬಳ್ಳಾರಿಯ ಕಡೆಯಿಂದ ಲಾ. ಕಾಲೇಜಿಗೆ ಬಂದ ಶ್ರೀ ರಘುಕಾಂತಾಚಾರ್ ರತ್ನಿಯವರು; ಶ್ರೀಮಂತ, ಚಿಕ್ಕಶ್ರೀಮಂತರ ಪಾತ್ರಗಳನ್ನು ವಹಿಸಿದವರು ಮೈಸೂರು ಪ್ರಾಂತದಿಂದ ಅದೇ ಸಂಸ್ಥೆಗೆ ಬಂದ ಶ್ರೀ ವಾಯ್. ನಾರಾಯಣರಾಯರು ಹಾಗು ಶ್ರೀ ಎಸ್. ನಾರಾಯಣಮೂರ್ತಿಯವರು ; ಉಳಿದವರೆಲ್ಲ ಉತ್ತರ ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ಬಂದವರು.

| | |
|---|---|
| ರಾಮಣ್ಣ | ಶ್ರೀ ಆರ್. ವಿ. ಜಾಗಿರದಾರ (ಎಸ್. ಪಿ. ಕಾ.) |
| ಸಣತಮ್ಮ | ,, ಡಿ. ಎಸ್. ಕುಲಕರ್ಣಿ (ಲಾ. ಕಾ.) |
| ಗಂಗಜ್ಜ | ,, ಜಿ. ವಿ. ಜೇರೆ (ಲಾ. ಕಾ.) |
| ಲಕುಮ್ಯಾ | ,, ಎನ್. ವಿ. ಕೌತಾಳ (ಫ. ಕಾ.) |
| ಭೀಮಣ್ಣನಾಯಕ | ,, ಎಮ್. ಕೆ. ವರಗಿರಿ (ಫ. ಕಾ.) |
| ಸುಭದ್ರಾಬಾಯಿ | ,, ಎಲ್. ಎ. ಸವಣೂರ (ಫ. ಕಾ.) |
| ಲಕ್ಷ್ಮಮ್ಮ | ,, ಪಿ. ಕೆ. ಶಿರಹಟ್ಟಿ (ಮೆಡಿಕಲ್ ಸ್ಕೂಲ) |
| ಕರಿಯ | ,, ವಿ. ಬಿ. ಹುನಗುಂದ (ಫ. ಕಾ.) |
| ಸಿದ್ರಾಮಶೆಟ್ಟಿ | ,, ಎಸ್. ಎಮ್. ತಿಪಶೆಟ್ಟಿ (ಎಗ್ರಿ. ಕಾ.) |
| ರೇವಣ್ಣ | ,, ಕೆ. ಬಿ. ಅಭ್ಯಂಕರ್ (ಫ. ಕಾ.) |

ಇದಾದ ಮೇಲೆ ಜಮುಖಂಡಿಯಲ್ಲಿ ಪ್ರಸಿದ್ಧ ವಕೀಲರಾದ ಶ್ರೀ ನರಗುಂದ ಹಾಗು ಶ್ರೀ ಆರ್. ಪಿ. ಕುಲಕರ್ಣಿಯವರ ನೇತೃತ್ವದಲ್ಲಿ ಅಲ್ಲಿಯ ನಾಟ್ಯವಿಲಾಸಿ ಸಂಘದವರು 'ಜನನಾಯಕ'ವನ್ನು ಅಭಿನಯಿಸಿ ತೋರಿಸಿದರು. ಶ್ರೀಯುತರಾದ ಡಾ. ಸವದಿ, ಕೆ. ಕೃಷ್ಣಮೂರ್ತಿ, ಪಿ. ಡಿ. ಹುಲ್ಯಾಳಕರ, ಎ. ಟಿ. ಪಾಟೀಲ, ಜಿ. ಎಚ್. ಅಳಬಾಳ, ಆರ್. ಜಿ. ಅಯಾಚಿತ್, ಎಸ್. ಪಿ. ಜೋಶಿ, ವಿ. ಜಿ. ಕುಲಕರ್ಣಿ, ವೆಂಕಣ್ಣ, ಬಾದರಾಯಣಿ, ಬಿ. ವಾಯ್. ಹೊನವಾಡ, ವಿ. ಕೆ. ದೇಶಪಾಂಡೆ, ಹಾಗು ಜಿ. ಜಿ. ಕುಲಕರ್ಣಿ ಯವರು ಮೇಲೆ ಕ್ರಮವಾಗಿ ಕಾಣಿಸಿದ ಪಾತ್ರಗಳನ್ನು ಆಗ ವಹಿಸಿದ್ದರು.

ಅಥಣಿಯ ಇಂಗ್ಲಿಷ್‌ಶಾಲೆಯ ವಾರ್ಷಿಕೋತ್ಸವದ ವೇಳೆಯಲ್ಲಿ ಸಹ ಈ ನಾಟಕದ ಪ್ರಯೋಗವಾಯಿತು. ಆಗ ಗಣ್ಯ ಸಾಹಿತಿಗಳಾದ ಶ್ರೀ ಮನೋಹರ ರಾವ್ ದೇಶಪಾಂಡೆಯವರು ಹಾಗು ನಾಟ್ಯಪ್ರೇಮಿಗಳಾದ ಶ್ರೀ ಸಂಗೋರಾಮ ರವರೂ ತಮ್ಮ ಶಿಷ್ಯವರ್ಗವನ್ನು ಈ ಪ್ರಯೋಗಕ್ಕಾಗಿ ಸಿದ್ಧಗೊಳಿಸಿದ್ದರು.

ಪ್ರತ್ಯಕ್ಷ ಪ್ರಯೋಗದಿಂದ ನನಗೆ ನಾಟ್ಯಕಲೆಯ ಬಗ್ಗೆ ಅನೇಕ ಮಾತು ಗಳು ಹೊಳೆದಿವೆ. ಅದಲ್ಲದೆ ಈ ನಾಟಕದ ಪ್ರಯೋಗದಲ್ಲಿ ಮನಸ್ಸು ಹಾಕಿದ ಸ್ನೇಹಿತರಿಂದ ಅನೇಕ ಸಲಹೆಗಳು ದೊರೆತಿವೆ. ಈ ಬಗ್ಗೆ ಮೇಲ್ಕಾಣಿಸಿದ ಎಲ್ಲ ಮಹನೀಯರಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಪುಣೆಯಲ್ಲಿ ಕೆಲವು ವರ್ಷ ನಡೆದ ಕನ್ನಡ ಸಾಲೆಯಲ್ಲಿ ಶಿಕ್ಷಕರಾಗಿದ್ದ ಶ್ರೀ ಬೀಡಿಯವರು ನಾಟಕದ ಹಸ್ತಪ್ರತಿಯೊಂದನ್ನು ತಯಾರಿಸಿ ಕೊಟ್ಟರು. ಅವರಿಂದ ದೊರೆತ ಸಹಾಯವು ನೆನೆಯತಕ್ಕುದು. ನಾಟಕದಲ್ಲಿಯ ಎರಡು 'ಪದ'ಗಳಿಗಾಗಿ ನಾನು ಶ್ರೀ ಬಾ. ಕೃ. ಲಕ್ಷ್ಮೇಶ್ವರ ಇವರಿಗೆ ಋಣಿಯಾಗಿ ದ್ದೇನೆ. ' ದುರುಳರ ಸಂಗ ' ಹಾಗು ' ಹದಗಡಕನಿಗೆ ' ಎಂಬವು ಅವರ ಪದ ಗಳು. ಕನ್ನಡ ಸಾಲೆಯ ಮಾಸ್ತರರಾಗಿ ೨೮ ವರ್ಷಗಳ ವರೆಗೆ ಕೆಲಸಮಾಡಿ, ಊರಿನಿಂದ ಊರಿಗೆ ವರ್ಗವಾಗುವ ದಿನಗಳಲ್ಲಿ ಅರಟಾಳ ಹೊಸೂರಿನಿಂದ ಹುಲಗೂರಿಗೆ ಬಂದ ಇವರು ಧಾರವಾಡ ಜಿಲ್ಲೆಯಲ್ಲಿಯ ಅನೇಕ ಹಳ್ಳಿಗಳ ನೀರು ಕುಡಿದಿದ್ದಾರೆ. ಹಳ್ಳಿಗಾಡಿನವರ ಸರಳ ಸ್ವಭಾವವನ್ನು ಬಣ್ಣಿಸಿ ಗ್ರಾಮ ಪಂಚಾಯತಿಯನ್ನು ಪೂಜೆ ಮಾಡುವ ಈ ಗಾಂಧಿ ಯುಗದಲ್ಲಿ ಇವರಿಗೆ ಗ್ರಾಮಪಂಚಾನನ ದಿವ್ಯ ದರ್ಶನವಾಗಿದೆ. ಹಳ್ಳಿಗಳಲ್ಲಿಯ ಹುಚ್ಚುತನವನ್ನೂ

ದುಷ್ಟತನವನ್ನೂ ಕಂಡು ಇವರ ಜೀವನವೆಂದರೆ ಈ ದುಃಶಕ್ತಿಗಳನ್ನು ಕಾದುವ ರಣರಂಗವಾಯಿತು. ಇವರ ಕಲಾಶಕ್ತಿಯು ಗ್ರಾಮಪಂಚಾನನನನ್ನು ವರ್ಣಿಸುವದರಲ್ಲಿ ವೆಚ್ಚವಾಗಹತ್ತಿತು. ಹಳ್ಳಿಗಳನ್ನು ಕುರಿತು ಬರೆದ ನನ್ನ ನಾಟಕಕ್ಕೆ ಇವರ ಒಂದೆರಡು ಪದಗಳನ್ನು ಬಳಿಸಿಕೊಂಡಿದ್ದೇನೆ.

೨

ಪುಣೆಯ ಕರ್ನಾಟಕ ಸಂಘದ ಸಲುವಾಗಿ 'ಜನನಾಯಕ'ವನ್ನು ಪ್ರಯೋಗಿಸಬೇಕೆಂದು ತಯಾರಿ ನಡೆದು ಮೂರು ವಾರವಾಗಿತ್ತು. ಯಾರಿಗೂ ನಟನೆಯನ್ನು ಕಲಿಸುವ ರೀತಿಯ ಗಂಧವಿರಲಿಲ್ಲ. ಆದರೂ ಬಲು ಹುರುಪಿನಿಂದ ರಂಗತಾಲೀಮು ನಡೆದಿತ್ತು. ಇನ್ನೆರಡು ದಿನಗಳ ಮೇಲೆ ಪ್ರಯೋಗವೆನ್ನುವಷ್ಟರಲ್ಲಿ ಸುಭದ್ರಾಬಾಯಿಯ ಪಾತ್ರವನ್ನು ವಹಿಸಿ ಸಂಕಟದಲ್ಲಿ ಬಿದ್ದಿದ್ದ, ಶ್ರೀ ಎಲ್. ಎ. ಸವಣೂರ, ಎಂ. ಎ. ಇವರಿಗೆ ಯೋಜಕರೊಬ್ಬರು ದೊರಕಿದರು. ಅವರೇ ಪ್ರಭಾತ ಪಿಲ್ಮ ಕಂಪನಿಯ ಸೇವೆಯಲ್ಲಿದ್ದ ಶ್ರೀ ಕುಲಕರ್ಣಿ ಎಂಬ ನಟಶ್ರೇಷ್ಠರು. ಇವರು ಕನ್ನಡಿಗರಿದ್ದು ಕಲಾಪ್ರೇಮಕ್ಕೋಸ್ಕರ ಮರಾಠಿ ವಾಕ್ಪಟಗಳಲ್ಲಿ ತಮ್ಮ ಅಭಿನಯವನ್ನು ತೋರಿಸಿ ಕನ್ನಡ ನಾಡಿನಲ್ಲಿ ತಮ್ಮ ಕಲೆಗೆ ಸಂಧಿಯೇ ಒದಗದೇ ಇರುವದು ಉಳಿದ ಎಲ್ಲ ವಿಷಯದಲ್ಲಿಯಂತೆ ನಮ್ಮ ಮುರ್ದೈವವೆಂದು ಹೇಳಬೇಕಾಗುತ್ತದೆ. ಬರ್ಬೇಜ್, ಗ್ಯಾರಿಕ್, ಕೆಂಬಲ್, ಎಲೆನ್‌ಟೆರಿ ಮೊದಲಾದ ನಟ-ನಟಿಯರ ಕಲೆಯ ಬಗ್ಗೆ ಪಾತ್ರ ವಹಿಸಿದವರೆದುರು ನಾವು ಕೇವಲ ಮಾತನಾಡುತ್ತಿದ್ದೆವು. ಕುಲಕರ್ಣಿಯವರು ಬಂದು ಒಂದು ಮಾತನ್ನು ತಿಳಿಸಿ ಹೇಳುವದಲ್ಲದೆ ಅದನ್ನು ನಟಿಸಿ ತೋರಿಸಿಬಿಡುತ್ತಿದ್ದರು. ಇವರಿಗೆ ನಾನು ನನ್ನ ನಾಟಕವನ್ನು ಓದಿ ತೋರಿಸುವಷ್ಟು ಸಹ ವೇಳೆಯಿರಲಿಲ್ಲ. ಆದರೆ ಸಂದರ್ಭದ ಮೇಲಿಂದ ನನಗಿಂತ ಹೆಚ್ಚಾಗಿ ಪಾತ್ರಗಳ ಜೀವಾಳವನ್ನು ತಿಳಿದುಕೊಂಡು ನಟರಿಗೆ ನಟನೆಯ ಮಾರ್ಗವಾಗಿ ತಿಳಿಸುತ್ತಿದ್ದರು. ನಟನೆಯ ಅ-ಬ-ಕ-ಡವನ್ನು ತಿಳಿಯದ ನಾನು ಕೆಲವೊಂದು ಕ್ರೋಧಮಯ ಸನ್ನಿವೇಶಗಳಲ್ಲಿ ಭೀಮಣ್ಣನಾಯಕನು ಗಟ್ಟಿಯಾಗಿ ತಲೆ ಹಿಡಿದುಕೊಳ್ಳಬೇಕೆಂದು ಸೂಚಿಸಿದ್ದೆನು. ಕುಲಕರ್ಣಿಯವರು ಬಂದು ಅವನ ಹಾಗು ನನ್ನ ತಲೆಯನ್ನು ಸರಿಪಡಿಸಿದರು. ಅಲ್ಲಿಯ ವರೆಗೆ ಅನೇಕ ನಟರನ್ನು ನಾನು ನೋಡಿದ್ದೆನು ; ನಾಟಕಗಳನ್ನು ಕಂಡಿದ್ದೆನು. ಆದರೆ ನಟನೆಂದರೆ ಏನೆಂಬುದು

ನನಗೆ ಕುಲಕರ್ಣಿಯವರಿಂದ ಮೊದಲು ತಿಳಿಯಿತು. ಪುಣೆಯಲ್ಲಿಯ ಪ್ರಯೋಗದ ಯಶಸ್ಸಿನಲ್ಲಿ ಕುಲಕರ್ಣಿಯವರೂ ಪಾಲುಗಾರರಾದರು. ಇಲ್ಲವೆ ಪ್ರಯೋಗದ ಯೋಜಕರಾಗಿ ಅವರು ನಮಗೂ ಯಶಸ್ಸು ತಂದುಕೊಟ್ಟರು.

೩

ದಿನಾಲು ಸಂಜೆಗೆ ನಾವು ಕೆಲವರು ಗೆಳೆಯರು ಕೂಡಿ ' ಫರ್ಗುಸನ್ ' ಗುಡ್ಡದ ಕಡೆಗೆ ತಿರುಗಾಡಲು ಹೋಗುತ್ತಿದ್ದೆವು. ಕರ್ನಾಟಕ ಸಂಘದ ಸಲುವಾಗಿ ಒಂದು ನಾಟಕವನ್ನು ಬರೆಯಬೇಕೆಂದು ಮಾತು ಹೊರಟಿತು. ಅದು ಆವಿದ್ಧಪ್ರಯೋಗವಿರಬೇಕು ; ನಾವೆಲ್ಲ ಕೂಡಿ ಅದರ ಕಥೆಯನ್ನು ತಯಾರಿಸಬೇಕು ; ಆ ಮೇಲೆ ಒಬ್ಬರು ಅದನ್ನು ಬರೆಯಬೇಕು ; ಹೀಗೆ ಮಾತು ನಡೆದಿತ್ತು. ನಾಟ್ಯಕಲೆಯ ಕೆಲವು ಸ್ಫುಟನಿಯಮಗಳನ್ನು ಮನಸ್ಸಿನಲ್ಲಿ ಹಿಡಿದು ಆ ಪ್ರಕಾರ ಒಂದು ಕೃತಿಯನ್ನು ಕಟ್ಟಬೇಕೆಂದು ಅರ್ಧ ವಿನೋದಮಯವಾಗಿ, ಅರ್ಧ ಉತ್ಸುಕತೆಯಿಂದ ನಾವು ನಿಶ್ಚಯಿಸಿದೆವು. ಅದರಂತೆ ಅನೇಕ ಕಥೆಗಳನ್ನು ಕಟ್ಟಿದೆವು. ಕಟ್ಟಿದ ಕಥೆಗಳೆಲ್ಲ ರಕ್ತದಲ್ಲಿ ತೊಯ್ದು ಬಸಿಯುತ್ತಿದ್ದವು. ಅವುಗಳನ್ನು ಕೇಳಿದ ಸಣ್ಣ ಹುಡುಗರು ಹೆದರಿ ಹೋಗಬಹುದಾಗಿತ್ತು. ಪ್ರತಿಯೊಂದು ನಾಟಕದಲ್ಲಿ ಕೆಲವು ದಿಂಡಗಳೂ ಹಲವು ಡೌಗಿಗಳೂ ಬರುತ್ತಿದ್ದವು. ಕೊಲೆಗಾರರ ಕಲ್ಪನಾಶಕ್ತಿಗಿಂತ ನಮ್ಮದು ಹೆಚ್ಚು ಭೀಕರವಾದುದೆಂದು ಕಥೆ ಕೇಳಿದವರು ಹೇಳಿದ್ದರೆ ನಮಗೆ ಆಶ್ಚರ್ಯವಾಗುತ್ತಿರಲಿಲ್ಲ. ಕೆಲವು ಸಿದ್ಧಾಂತಗಳನ್ನು ' ಮುಂಡಿ 'ಗಳಂತೆ ಅರ್ಥವರಿಯದೆ ಜೀವನದಲ್ಲಿ ಸ್ವೀಕರಿಸಿ ಅದರಂತೆ ನಡೆಯುವವರೂ ಹಾಗು ನಾಟಕವು ಹೇಗಿರಬೇಕೆಂಬುದರ ಬಗ್ಗೆ ಅನೇಕ ಪ್ರತಿಪಾದನೆಗಳನ್ನು ಓದಿ ಅವುಗಳಂತೆ ಬರೆಯಲು ಪ್ರಯತ್ನಿಸುವವರೂ ಒಂದೇ ಜಾತಿಯ ಮೂರ್ಖರೆಂದು ಆಗ ನಾವು ಸಪ್ರಮಾಣವಾಗಿ ಸಿದ್ಧಪಡಿಸಿದೆವು.

ಮುಂದೆ ಕೆಲವು ದಿನಗಳಲ್ಲಿಯೇ ನಾನು ' ಜನನಾಯಕ ' ವನ್ನು ಬರೆದೆನು. ಒಂದು ಪ್ರವೇಶವನ್ನು ಬರೆದಾಗ ಅದರ ಮುಂದಿನದು ಏನಾಗಬಹುದೆಂಬುದರ ಅರಿವು ನನಗಿರುತ್ತಿರಲಿಲ್ಲ. ನಾನು ನಾಟಕವನ್ನು ಬರೆಯುತ್ತ ಹೋದ ಹಾಗೆ ಕಥೆಯು ತನ್ನನ್ನೇ ತಾನು ಕಟ್ಟಿಕೊಂಡಿತು. ರಂಗಭೂಮಿಯ ಆವಶ್ಯಕತೆಗಳ ಕಲ್ಪನೆಯೇ ನನಗಿರಲಿಲ್ಲ. ರಂಗತಾಲೀಮು ನಡೆದ ಹಾಗೆಲ್ಲ

ಬೇಕೆನಿಸಿದಲ್ಲಿ ಹೊಸತಾಗಿ ಪ್ರವೇಶಗಳನ್ನು ಸೇರಿಸಿದೆನು. ಈ ರೀತಿಯಾಗಿ 'ಜನನಾಯಕ'ವು ಬೆಳೆದು ನಿಂತಿತು. ಇಂಥ ಬೆಳವಣಿಗೆಯ ಮೂಲಕ ಅದರಲ್ಲಿ ಕೆಲವು ವಿಶಿಷ್ಟ ಗುಣಗಳಿದ್ದಂತೆ ಕೆಲವು ಲೋಪದೋಷಗಳೂ ಸೇರಿ ಕೊಂಡಿವೆ. ಅವುಗಳ ಬಗ್ಗೆ ಮುಂದೆ ಬರೆಯುತ್ತೇನೆ. ಆದರೆ ನನ್ನ ಕೃತಿ ಗಳನ್ನು ತಿಳಿದುಕೊಳ್ಳುವ ಮನಸ್ಸಿರದಿದ್ದವರಿಗೆ ತಾಳ್ಮೆಯೂ ಇರದಿದ್ದರೆ, ಅವರು ಆ ಭಾಗವನ್ನೇ ಮೊದಲು ಓದಿ ಮುಂದೆ ಸಾಗಬಹುದು.

೪

ನಾನು ವಿಲಾಯತಿಗೆ ಹೋಗುವ ಪೂರ್ವದಲ್ಲಿ ಈ ನಾಟಕವನ್ನು ಬರೆದೆನು. ಅಂತೇ ಇದು ಉಳಿದಿದೆ. ಪಶ್ಚಿಮದಲ್ಲಿ ಇಂಥ ನಾಟಕವನ್ನು ಈಗ ಬರೆಯುವದು ಸಾಧ್ಯವಿಲ್ಲ. ಜೀವನ ಹಾಗು ಕಲಾರೀತಿಗಳ ಬಗ್ಗೆ ನನ್ನ ಕಲ್ಪನೆಗಳು ಈಗ ತುಸು ಬದಲಾಗಿವೆ. ಅಲ್ಲಿಯ ಅನೇಕ ನಾಟಕಗಳನ್ನು ನೋಡಿದವರಿಗೆ, ಈ ಪ್ರಯೋಗದಲ್ಲಿಯ ಕೆಲವು ಭಾಗಗಳು ಹಳೆಯ ತರಹ ವೆಂದು ಕಾಣುತ್ತವೆ. ಆದರೆ ನಾನು 'ಜನನಾಯಕ'ವನ್ನು ಮಾರ್ಪಡಿಸಲು ಹೋಗಿಲ್ಲ. ಮೂರಂಕಾಗಿದ್ದುದನ್ನು ನಾಲ್ಕು ಅಂಕುಗಳಾಗಿ ವಿಭಾಗಿಸಿದ್ದೇನೆ; ಅಲ್ಲಲ್ಲಿ ಒಂದೆರಡು ಪ್ರವೇಶಗಳನ್ನು ಹೊಸತಾಗಿ ಕೂಡಿಸಿದ್ದೇನೆ, ಇಷ್ಟೆ.

ಸ್ವತಃ ನಾನೇ 'ಜನನಾಯಕ'ಕ್ಕೆ ಸಂಪೂರ್ಣವಾಗಿ ಮೆಚ್ಚದಿದ್ದರೆ ಅದನ್ನು ಪ್ರಕಟಿಸುವದೇಕೆಂದು ವಾಚಕರು ಕೇಳಬಹುದು. ಆಧುನಿಕ ಷಡಕ್ಷರಿ ಕವಿಯಾಗಿದ್ದರೆ ನಾನು ಸಂತತಿಸಂಯಮನವು ಎಷ್ಟು ಕಠಿಣವೆಂಬುದನ್ನು ತಿಳಿದವರ ಬೆನ್ನು ಬೀಳುತ್ತಿದ್ದೆ. ಆದರೆ ಸಮಾಜಕ್ಕೆ ಸಮಾಧಾನ ಕಲಿಸುವ ಅನೇಕ ಮಾತುಗಳು ನನ್ನ ಬಳಿಗಿವೆ. ಕನಿಷ್ಟ ಪಕ್ಷಕ್ಕೆ ಇದರಷ್ಟು ಗುಣಗಳಿದ್ದ ನಾಟಕಗಳಾದರೂ ಈಗ ಕನ್ನಡದಲ್ಲಿ ಎಷ್ಟು ? ವಾಚಕರು ಬೆರಳೆಣಿಸಬೇಕು, ಅದು ಹೋಗಲಿ. ಶಾಲೆ-ಕಾಲೇಜುಗಳ ವಾರ್ಷಿಕೋತ್ಸವಗಳಲ್ಲಿ ತೊಂದರೆ ಯಿಲ್ಲದೆ ಅಭಿನಯಿಸಲು ಯೋಗ್ಯವಾದ ಕೃತಿಗಳು ಕನ್ನಡದಲ್ಲಿ ಎಷ್ಟು ? ಈಗ ಮಾತ್ರ ವಾಚಕರು ಹೆಬ್ಬೊಟ್ಟುಗಳನ್ನು ಎಣಿಸಬೇಕು. ಮೂರು ನಾಲ್ಕು ಸಾದಾ ಪರದೆಗಳು, ದಿನದ ಪೋಷಾಕು, ಮುದುಕಿ ವಿಧವೆಯಾಗಬಲ್ಲ ವಿದ್ಯಾರ್ಥಿ, ಹಾಗು ಮಾತಿನಗಿಂತ ಮೌನವನ್ನೇ ಹೆಚ್ಚಾಗಿ ಪಠಿಸುವ ಸುಭದ್ರೆ ಯಾಗಬಲ್ಲ ಇನ್ನೊಬ್ಬ,-ಇಷ್ಟು ಸಾಮಾನು ಹಾಗು ಜಾಣರಿದ್ದರೆ ಸಾಕು.

ಉಳಿದ ಪಾತ್ರಗಳನ್ನು ವಿದ್ಯಾರ್ಥಿಗಳೇ ಆಗಲಿ, ಪರಾರ್ಥಿಗಳೇ ಆಗಲಿ—ಯಾರೂ ವಹಿಸಬಲ್ಲರು.

'ಜನನಾಯಕ'ವನ್ನು ಇನ್ನು ಮುಂದೆ ಅಭಿನಯಿಸಲಿಚ್ಛಿಸುವವರಿಗೆ ಒಂದೆರಡು ಸೂಚನೆಗಳ ಉಪಯೋಗವಾಗಬಹುದು. ಮೂರೂವರಿ ತಾಸಿನ ಮೇಲೆ ಸಹ ಅಲುಗಾಡದೆ ಕೂಡಲು ಶ್ರೋತೃವೃಂದದ ತಯಾರಿಯಿರದ ಹೊರತು ಇದ್ದಕ್ಕಿದ್ದ ಹಾಗೆ ಇಡಿ ನಾಟಕವನ್ನು ಪ್ರಯೋಗಿಸುವ ಹವ್ಯಾಸಕ್ಕೆ ಯಾರೂ ಬೀಳಬಾರದು. ನಾಟಕದಲ್ಲಿಯ ಒಂದೆರಡು ಲಾವಣಿಗಳನ್ನು-ಪ್ರವೇಶಗಳನ್ನು ಸಹ-ಅವರು ಬಿಡಬಹುದು; ದೊಡ್ಡ ಪ್ರವೇಶಗಳನ್ನು ಸಣ್ಣವುಗಳನ್ನಾಗಿ ಮಾಡ ಬಹುದು. ನಾಟಕದ ಅಸ್ತಿತ್ವಕ್ಕೆ ಭಂಗ ಬರದಿದ್ದರಾಯಿತು; ಮತ್ತು ಇದ್ದ ದೋಷಗಳಲ್ಲಿ ಇನ್ನಿಷ್ಟು ಕೂಡಿಸದಿದ್ದರೆ ಶೀರಿತು.

ಇನ್ನೊಂದು ಸೂಚನೆಯನ್ನು ಯಾಚನೆಯೆಂದೇ ಕರೆಯುವದು ಲೇಸು. ಉದಾಹರಣಾರ್ಥವಾಗಿ, 'ತುಳಸಿ' ಎಂಬ ದೃಶ್ಯವನ್ನು ಓದುಗರಿಗಾಗಿ ನಾನು ಬರೆದೆನು; ಇಲ್ಲವೆ ಪ್ರೌಢ ಪ್ರೇಕ್ಷಕರಿಗಾಗಿ. ಆದರೆ ಒಂದು ಶಾಲೆ ಯಲ್ಲಿಯ ಕೆಲವು ವಿದ್ಯಾರ್ಥಿಗಳು ತಮ್ಮ ವಾರ್ಷಿಕೋತ್ಸವದ ನಿಮಿತ್ತವಾಗಿ 'ತುಳಸಿ' ಯೆಂಬ ದೃಶ್ಯವನ್ನು ಪ್ರಯೋಗಿಸಿದರೆಂದು ವೃತ್ತಪತ್ರಗಳಲ್ಲಿ ನಾನು ಓದಿದೊಡನೆ ನನ್ನೆದೆಯು ತಣ್ಣಗಾಯಿತು. ಶಾಲೆಯ ಹುಡುಗರನ್ನು ಬೈಯ್ದು ಮುಚ್ಚುವದಿರಲಿ: ಜನರು ಬಂದು ನನ್ನನ್ನು ಕಚ್ಚಿದ್ದರು ಸಹ ನನಗೆ ಆಶ್ಚರ್ಯ ವೆನಿಸುತ್ತಿರಲಿಲ್ಲ. 'ತುಳಸಿ'ಯ ಅರ್ಥವನ್ನು ಸರಿಯಾಗಿ ತಿಳಿದುಕೊಂಡಲ್ಲಿ ಮೂರುವರ್ಷದ ಹುಡುಗರು ಅದನ್ನು ಆಡಿದರೂ ಅಭ್ಯಂತರವಿಲ್ಲ. ಆದರೆ ಅವರು ತಿಳಕೊಂಡಿರುವರೇನೆಂಬುದನ್ನು ಮೊದಲಾಗಿ ನಾನು ಮನಗಾಣಬೇಕು. ಅದಕ್ಕಾಗಿಯೇ ಈ ಬಿನ್ನಹ: ಇದನ್ನು ಪ್ರಯೋಗಿಸಲಿಚ್ಛಿಸುವವರು ನನ್ನ ಸಮ್ಮತಿಯನ್ನು ಪಡೆದರೆ ನೆಟ್ಟಗಾಗುವದೆಂದು.

'ಜನನಾಯಕ'ವನ್ನು ಯಾರೂ ಆಡಬಹುದು. 'ಆಬಾಲವೃದ್ಧ'ರ ರುಚಿಗೆ ಸರಿ ಹೋಗುವಂತೆ ಅದನ್ನು ಬರೆದದ್ದಾಗಿದೆ. ಯೋಗ್ಯರಾದ ನಟರಿದ್ದಲ್ಲಿ, ಎಲ್ಲರ ಮನಸ್ಸನ್ನು ಈ ನಾಟಕವು ರಂಜಿಸುವದು. ಹಾಗೆ ರಂಜನೆಯನ್ನು ಹೊಂದದೆ ಇದ್ದವರು ಮೂರು ತಾಸನ್ನು ವ್ಯರ್ಥವಾಗಿ ಕಳಕೊಂಡಂತೆ ಅಲ್ಲವೆ ?

*

೫

ಇನ್ನು 'ಜನನಾಯಕ'ದ ಬಗ್ಗೆ ಬರೆಯೋಣ. ಇಲ್ಲಿಯ ಮುಖ್ಯ ವಸ್ತುವು ಪ್ರತೀಕಾರ. ಶಕ್ತಿವ್ಯಕ್ತಿಗಳ ನಡುವೆ ಚಿರಂತನವಾಗಿ ನಡೆದ ಕಲಹ ವನ್ನು ಚಿತ್ರಿಸಲು ನಾನು ಮಾಡಿದ ಇನ್ನೊಂದು ಹವಣಿಕೆಯಿದು. ಇದರಲ್ಲಿ ನಮ್ಮ ಸಮಾಜವನ್ನೇ ಹಿನ್ನೆಲೆಯಾಗಿ ಇಟ್ಟುಕೊಂಡಿದ್ದೇನೆ. ಸೊಕ್ಕಿದ ಆಳರಸ ರೊಡನೆ,-ದಾಸ್ಯವೃತ್ತಿಯಲ್ಲಿದ್ದರೂ ಎದೆಗಾರಿಕೆಯಿದ್ದ ಪ್ರಜೆಗಳು, ಸಂಸ್ಥಾನಾಧಿ ಪತಿಗಳೊಡನೆ ಸಂಸ್ಥಾನಗಳ ಜನರು, ಜಾಗೀರದಾರರೊಡನೆ ಜಾಗೀರಿನ ಹಳ್ಳಿಯ ಜನರು,-ಇವರೆಲ್ಲರ ಕಲಹದಲ್ಲಿ ಒಂದೇ ಒಂದು ಮಾತು ಎದ್ದು ಕಾಣುತ್ತದೆ: 'ಹಿಂತುಳಿದು' ಮುಂತುಳಿದು ಬರುವ ದಬ್ಬಾಳಿಕೆಯನ್ನು, ಮೇರೆವರಿದು ಬರುವ ಸ್ವಾತಂತ್ರ್ಯವು ಎದುರಿಸುವ ರೀತಿ. ಸ್ವಾತಂತ್ರ್ಯದ ಈ ಸಮಸ್ಯೆಯನ್ನು ಚಿತ್ರಿಸಲು ನಾನು ಜಾಗೀರುಗಳ ಕಥಾವಸ್ತುವನ್ನು ಆಯ್ದು ಕೊಂಡಿದ್ದೇನೆ. ಆದರೆ ಸಮಸ್ಯೆಯ ವ್ಯಾಪಕರೂಪವು ಯಾವಾಗಲೂ ನನ್ನ ಲಕ್ಷ್ಯದಲ್ಲಿದೆ.

ಪುಣೆಯಲ್ಲಿ ನಾಟಕವನ್ನು ನೋಡಿ ಸಂತೋಷಿಸಿದ ನನ್ನ ಸ್ನೇಹಿತ ರೊಬ್ಬರು ಸಂಶಯ ತಂದುಕೊಂಡು ಒಂದು ಪ್ರಶ್ನೆ ಕೇಳಿದರು: 'ರಂಗಭೂಮಿಯ ಮೇಲೆ ಪರಿಣಾಮಕಾರಿಯಾಗುವದು ನಿಜ. ಆದರೆ ಹೀಗೆ ಸಂಭವಿಸುವದುಂಟೆ?' ಎಂದು. ನಾನೇನು ಆದ ಸಂಗತಿಗಳನ್ನು ಎದುರಿಗಿಟ್ಟುಕೊಂಡು ಬರೆದವನಲ್ಲ; ಆಗಬಹುದಾದ ಸಂಗತಿಗಳನ್ನು ಕಲ್ಪಿಸಿದ್ದೆನು, ಅಷ್ಟೆ. ಆದರೂ ಇಂಥ ಸಂಗತಿ ಗಳು ಸಂಭವನೀಯವೆಂದು ಹೇಳಿ ಅವರನ್ನು ಸಮಾಧಾನಗೊಳಿಸಿದೆನು- ಆದರೆ ಮರುದಿವಸ ಒಂದು ವಿಚಿತ್ರ ಸಂಗತಿಯು ಘಟಿಸಿತು. ಅಂದಿನ 'ಸಂಯುಕ್ತ ಕರ್ನಾಟಕದಲ್ಲಿ '—' ಯ ನಿವಾಸಿಗಳ ಗೋಳು' ಎಂಬ ತಲೆಕಟ್ಟಿನ ಕೆಳಗೆ ಅಲ್ಲಿಯ-ಜಾಗಿರದಾರರಿಂದ ನಡೆದ ಅನ್ಯಾಯಗಳನ್ನು ವರ್ಣಿಸಿ ಅಲ್ಲಿಯ ನಿವಾಸಿಗಳು ಕಮಿಶನರರ ಕಡೆಗೆ ಕಳಿಸಿದ ಅರ್ಜಿಯ ಸಾರಾಂಶವನ್ನು ಕೊಡ ಲಾಗಿತ್ತು. ಅದನ್ನು ನೋಡಿ ನನಗೆ ಮಿತಿಮೀರಿ ಆನಂದವಾಯಿತು. ಕೂಡಲೆ ಅದರ 'ಕಟಿಂಗ್' ದೊರಕಿಸಿ ನನ್ನ ಸ್ನೇಹಿತರಿಗೆ ಕೊಟ್ಟೆನು. ಒಬ್ಬ ಕಾದಂಬರಿ ಕಾರನು ಕಾದಂಬರಿಯನ್ನು ಬರೆಯುತ್ತಿರುವಾಗ ಆತನು ಆ ಕಾಲ್ಪನಿಕ ವ್ಯಕ್ತಿ ಗಳ ಜೀವನವನ್ನು ಕಲ್ಪಿಸುತ್ತ ಹೋದಂತೆ ಸಮೀಪದ ಊರಲ್ಲಿದ್ದ ಕೆಲವರ

ಜೀವನವು ಮಾರ್ಪಡುತ್ತ ಹೋಯಿತೆಂದು ಎ. ಇ. ಬರೆದಿದ್ದಾನೆ. ಸಂಯುಕ್ತ ಕರ್ನಾಟಕದಲ್ಲಿಯ ಅರ್ಜಿಯನ್ನು ನೋಡಿ ನಾನು ನಾಟಕವನ್ನು ಬರೆಯಲಿಲ್ಲ. ಅದೇ ರಂಗಭೂಮಿಗೆ ಬಂದು ಅಚ್ಚಾಗದ ನನ್ನ ನಾಟಕದ ಬಗ್ಗೆ—ಯ ನಿವಾಸಿಗಳು ಕೇಳಿರಲೂ ಇಲ್ಲ. ಆದಕಾರಣ ಇಲ್ಲಿ ಮೂರು ಮಾತುಗಳು ಮಾತ್ರ ಶಕ್ಯವಾದುವು : (೧) ನಾನು ನಾಟಕವನ್ನು ಬರೆಯುತ್ತ ಹೋದ ಹಾಗೆ 'ಅಂತರಃ ಕೋಪಿ ಹೇತು'ವು ಕಾರ್ಯಕ್ಕೆಸಗಿ—ಯ ನಿವಾಸಿಗಳ ಮನಸ್ಸನ್ನು ಮಾರ್ಪಡಿಸುತ್ತ ಹೋಗಿರಬೇಕು. ಇದು ನಿಜವೆಂದು ಸಿದ್ಧಪಡಿಸಿ ವಾಙ್ಮಯದ ವಿಷಯದಲ್ಲಿ ರಾಷ್ಟ್ರಭಕ್ತರಿಗಿರುವ ಉದಾಸೀನತೆಯನ್ನೂ ಕೀಳುಭಾವನೆಯನ್ನೂ ನಾನು ಕಿತ್ತೊಗೆಯಬಹುದಾಗಿತ್ತು. ಆದರೆ ಹೀಗೆ ಮಾಡಿದರೆ ಆ ಊರ ಜಾಗಿರದಾರರು ನನ್ನ ಮೇಲೆ ಸಿಟ್ಟಾಗಿ ಕೆಲಸ ನಡಿಸಬಹುದಲ್ಲ ? ಹೊರಗೆ ಹೋಗುವ ದೆವ್ವವನ್ನು ಕರೆದುಕೊಂಡಂತಾಗಿರಬಾರದು! (೨) 'ಅಂತರಃ ಕೋಪಿ ಹೇತು'ವು ಒಂದೇ ವೇಳೆಯಲ್ಲಿ ಬೇರೆ ಬೇರೆ ಕಡೆಗೆ ಒಂದೇ ಮನೋವೃತ್ತಿಯನ್ನು ಬಿಂಬಿಸುವ ಕೃತಿಗಳನ್ನು ಬಳಕೆಗೆ ತರುವದರಲ್ಲಿ ಉದ್ಯುಕ್ತವಾಗಿರಬಹುದು. ಅರ್ಜಿಯ ಮಹಾಸಭೆಯ ಪ್ರವೇಶವನ್ನು ಬರೆಯಲು ನಾನು ಕೈಹಾಕಿದಾಗ-ಲ್ಲಿ ಅಂತಹದೇ ಸಭೆಯು ಕೂಡಿರಬೇಕು ! ಶಾಸ್ತ್ರಜ್ಞರು ಇಂಥ ಶಕ್ತಿಯ ಅಸ್ತಿತ್ವವನ್ನು ಒಪ್ಪುತ್ತಾರೆಂಬುದನ್ನು ನಾವು ಲಕ್ಷ್ಯದಲ್ಲಿಡಬೇಕು. (೩) ಮನುಷ್ಯಬುದ್ಧಿಯನ್ನೂ ಪ್ರಪಂಚದ ವ್ಯವಹಾರವನ್ನೂ ಪೂರ್ಣವಾಗಿ ತಿಳಿದ ಸಾಹಿತಿಯು ಸಾಂಗತಿಕ ಸೃಷ್ಟಿಯ ತಿರುಳನ್ನೇ ಚಿತ್ರಿಸುವದರಿಂದ ಅವನು ಕಾಣಿಸಿದಂತಹ ಸಂಗತಿಗಳು ಆಗಿದ್ದರೆ, ಇಲ್ಲವೆ ಆಗುವವಿದ್ದರೆ ಆಶ್ಚರ್ಯವಲ್ಲ. ಈ ಮಾತಿನ ಮೇಲಿಂದ ಸಾಹಿತ್ಯಕ್ಕೂ ರಾಷ್ಟ್ರಸೇವೆಗೂ ಇರುವ ನಿಕಟಸಂಬಂಧವು ತಿಳಿದು ಬರುತ್ತದೆ. ರಾಷ್ಟ್ರದ ಜೀವಿತವನ್ನು ಸೊಗಸಾಗಿಸಬಲ್ಲ ಕೈವಾಡವು ಸಾಹಿತಿಯಲ್ಲಿದೆ. ಈ ಕಡೆಯ ಮಾತಿನ ಪ್ರಭಾವವು ಮೊದಲಿನದರಷ್ಟೇ ವರ್ಚಸ್ವಿಯಾಗಿದೆ. ವೈಯಕ್ತಿಕ ಜೀವನವನ್ನು ಸಾಹಿತಿಯ ಕಲ್ಪನಾಶಕ್ತಿಯು ಮೇಲೆ ಹೇಳಿದ ವಿಶಿಷ್ಟರೀತಿಯಲ್ಲಿ ಮಾರ್ಪಡಿಸಲಿ ಇಲ್ಲವೆ ಮಾರ್ಪಡಿಸದಿರಲಿ, ವ್ಯಕ್ತಿಗಳ ಸಮುದಾಯವಾದ ರಾಷ್ಟ್ರದ 'ಜೀವನವನ್ನು ಅದು ನಿಶ್ಚಯವಾಗಿ ರೂಪಕ್ಕೆ ತರುವದು. ರಾಜಕಾರಣಪಟುವು ಒಂದು ಸರಕಾರದ ವಿರುದ್ಧವಾಗಿ ಇಲ್ಲವೆ ಒಬ್ಬ ಜಾಗಿರದಾರರನ್ನು ಎದುರಿಸಿ ಕೆಲಸ ನಡಿಸುತ್ತಾನೆ. ಆದರೆ

ಕವಿಯ ಮೇಲೆ ಎಲ್ಲ ಸರಕಾರಗಳ ಹಾಗು ಎಲ್ಲ ಜಾಗೀರದಾರರ ಸಿಟ್ಟಿರುತ್ತದೆ, ಏಕೆಂದರೆ ಅವನು ದಬ್ಬಾಳಿಕೆಯ ಬೇರನ್ನೇ ಹಿಡಿದು ಅಲ್ಲಾಡಿಸುತ್ತಾನೆ, ಕವಿಯ ಈ ಸಫಲತೆಯನ್ನರಿಯದ ರಾಜಕಾರಣಪಟುಗಳು ಅವನನ್ನು ಕಣ್ಣು ಕಿಸಿದು ನೋಡುತ್ತಾರೆ.—ಈಗ ಕಾರ್ಯಶಕ್ತರು, ಬೇಕು, ಕನಸಿಗರಲ್ಲವೆಂದು ಸಾರುತ್ತಾರೆ. ಆದರೆ ಸಂಕುಚಿತ ಕರ್ಮಕಾಂಡದಲ್ಲಿ ಹಗಲುರಾತ್ರಿಗಳನ್ನು ಕಳೆಯುವವರಿಗೆ ಇದರ ಮರ್ಮವೆಂತು ತಿಳಿಯಬೇಕು ? ಮೊದಲು ಕಾಣಿಸಿದ ಮಾತು ನಿಜವೋ ಅಲ್ಲವೋ ದೇವರಿಗೆ ಗೊತ್ತು. ಆದರೆ ಕೊನೆಯ ಮಾತಿನ ಸತ್ಯತೆಯ ಬಗ್ಗೆ ಎಂಥ ವೆಂಕನಿಗೂ ಸಹ ಸಂಶಯವಿರಲಾರದು.

೬

ಈ ನಾಟಕವು ಸುಖಾಂತವಿರಬೇಕೊ ಇಲ್ಲವೆ ದುಃಖಾಂತರವಿರಬೇಕೊ ಎಂಬುದರ ಬಗ್ಗೆ ಅನೇಕ ಚರ್ಚೆಗಳಾಗಿವೆ. ಪುಣೆಯಲ್ಲಿ ನಾಟಕವನ್ನು ನೋಡಿದ ಅನೇಕರು ಇದು ಸುಖಾಂತವಿದ್ದರೆ ನೆಟ್ಟಗಾಗುತ್ತಿತ್ತೆಂದರು. ಆದರೆ ಯಾವಾಗಲು ನಗುತ್ತಿರುವ ಕರಿಯನಿಗೆ-ಕರಿಯನಾಗಿ ಉತ್ತಮವಾಗಿ ಅಭಿನಯಿಸಿದ ಶ್ರೀ ಹುನಗುಂದರಿಗೆ—ಕೊನೆಯ ಪ್ರವೇಶದಲ್ಲಿ ಅಳಲು ಬಾರದಿದ್ದುದರಿಂದ ಪ್ರೇಕ್ಷಕರ ಊಹೆಯು ಹಾಗಾಗಿರಬೇಕೆಂದು ನಾನು ತಿಳಿದಿದ್ದೇನೆ. ಜಮಖಂಡಿಯಲ್ಲಿ ಅಭಿಪ್ರಾಯವು ಸ್ವಲ್ಪ ಬೇರೆಯಾಗಿದೆ. ರುದ್ರದೃಶ್ಯಗಳೇ ಈಗಿನ ಕಾಲದಲ್ಲಿ ನಮಗೆ ಬೇಡವೆಂದು ಅಲ್ಲಿ ಕೆಲವರ ಮತವಾಗಿದೆ. ' ಜನನಾಯಕ ' ವಂತೂ ಜನರನ್ನು ತೀರ ಹಣ್ಣು ಮಾಡುವದೆಂದು ಅವರ ಅನುಭವಕ್ಕೆ ಬಂದಿದೆ. ಹಾಗಾದರೆ ರುದ್ರದೃಶ್ಯಗಳು ಯಾವಾಗ ಬೇಕಾಗಬಲ್ಲವೆಂಬುದೇ ಪ್ರಶ್ನೆಯಾಗಿದೆ. ಸುಖದಲ್ಲಿದ್ದಾಗ ಜನರಿಗೆ ದುಃಖದ ನೆನಪು ಬೇಡ ; ದುಃಖದಲ್ಲಿದ್ದಾಗ ತಮ್ಮ ನಿಜಸ್ಥಿತಿಯ ಪ್ರತಿಬಿಂಬ ಬೇಡ ; ರುದ್ರದೃಶ್ಯಗಳು ಜನರಿಗೆ ಸೇರುವದಾದರೂ ಎಂದು ? ಆವಿದ್ಧ ಮೊದಲಾದ ಪ್ರಯೋಗಗಳನ್ನು ಭರತನಾಟ್ಯಶಾಸ್ತ್ರದಲ್ಲಿ ಉಲ್ಲೇಖಿಸಿರುವಾಗ, ರುದ್ರನಾಟಕಗಳು ಭಾರತೀಯ ಸಂಸ್ಕೃತಿಗೆ ಅಪರಿಚಿತವೆಂದು ಹೇಳುವದಾದರೂ ಹೇಗೆ ? ಜೋರು ಜುಲುಮೆ ಮಾಡದ ಹೊರತು ಜನರು ಕಷ್ಟಸಹಿಸುವುದಿಲ್ಲ ; ಆದರೆ ಹಾಗೆ ಮಾಡದ ಹೊರತು ಅವರು ಕಲಿಯುವದೂ ಇಲ್ಲ.

'ಫರ್ಗುಸನ್' ಕಾಲೇಜಿನ ಪ್ರಿನ್ಸಿಪಾಲರಾದ ಡಾ. ಮಹಾಜನಿಯವರು

ಈ ನಾಟಕವನ್ನು ನೋಡಿದ ಕೂಡಲೆ ಒಂದು ಯೋಗ್ಯ ಪ್ರಶ್ನೆ ಎತ್ತಿದರು. ಅವರು ಕನ್ನಡ ನಾಟಕವನ್ನು ನೋಡಿದ್ದೆಂದರೆ ಇದೇ ಮೊದಲು ; ಅದೂ ಶ್ರೀ ಪಾವಟೆಯವರು ಮೇಲಿಂದ ಮೇಲೆ ತಿಳಿಸಿ ಹೇಳುತ್ತಿದ್ದ ಕಾರಣ, ಪ್ರಿ. ಮಹಾಜನಿಯವರಿಗೆ ನಾಟಕವು ಅರ್ಥವಾಯಿತು. ಅವರು ಹೇಳಿದ್ದು ಹೀಗೆ : ನಾಟಕವು ತೇಜಸ್ವಿಯಾಗಿದೆ; ಅದರಲ್ಲಿಯ ಕ್ರಮಬದ್ಧತೆ ಹಾಗು ಸ್ವಭಾವ ನಿರೂಪಣೆಗಳು ಸ್ತುತ್ಯವಾಗಿವೆ : ಆದರೆ ನಾಯಕನ ಆಕಸ್ಮಿಕ ಮರಣವು ಉಚಿತವಾದುದೆ ? ಆತನು ಸಾಯುವದಕ್ಕಿಂತ ಉಳಿದಿದ್ದರೆ ನಾಟಕದಲ್ಲಿಯ ಸಂಭವನೀಯತೆಯು ಹೆಚ್ಚುತ್ತಿದ್ದಿಲ್ಲವೆ ? ತಮ್ಮ ಈ ಅಭಿಪ್ರಾಯವನ್ನು ತಮ್ಮದೇ ಆದ ಒಂದು ಸೌಜನ್ಯದ ರೀತಿಯಲ್ಲಿ ಪ್ರಿ. ಮಹಾಜನಿಯವರು ಹೇಳಿದರು. ' ನಾನು ಗಣಿತಜ್ಞ, ನನ್ನ ಅಭಿಪ್ರಾಯವನ್ನು ನೀವು ಲೆಕ್ಕಕ್ಕೆ ಹಿಡಿಯಬಾರದು,' ಎಂದು ಗೆರೆಯೆಳೆದರು. ಆದರೆ ' ಶಾಕುಂತಲ 'ದ ಸವಿಯನ್ನರಿತು ಲೇಖನ ದ್ವಾರವಾಗಿ ವಾಚಕರಿಗೆ ಅದನ್ನು ತಿಳಿಸಿಕೊಡಬಲ್ಲ ಈ ಮಹನೀಯರ ಅಭಿಪ್ರಾಯವು ಮಾರ್ಮಿಕವಾಗಿದೆಯೆಂಬುದು ಓದುಗರಿಗೆ ತಿಳಿದಿರಲು ಸಾಕು.

ಆಗ ನಾನು ನಾಟಕದ ಕೊನೆಯನ್ನು ವಿಮರ್ಶಾತ್ಮಕವಾಗಿ ವಿವೇಚಿಸಬೇಕಾಯಿತು. ದೈವಜನ್ಯ ರುದ್ರರೂಪಕ (Tragedy of fate) ಹಾಗು ಸ್ವಭಾವಜನ್ಯ ರುದ್ರರೂಪಕ (Tragedy of character) ಗಳೆಂದು ಎರಡು ಪ್ರಕಾರಗಳಿರುತ್ತವೆ. ಶೇಕ್ಸಪಿಯರನ 'ರೋಮಿಯೊ ಮತ್ತು ಜುಲಿಯಟ್' ಎಂಬುದು ಮೊದಲಿನ ತರಹ; 'ಹ್ಯಾಂಲೆಟ್' ನಾಟಕವು ಎರಡನೆಯ ತರಹದ್ದಾಗಿದೆ. ಸ್ವಭಾವದ ವಿಲಕ್ಷಣ ರೀತಿ ಹಾಗು ಅದಕ್ಕೆ ಎದುರಾಳಿಯಾಗಿ ಬರುವ ಪ್ರಸಂಗಗಳ ವೈಚಿತ್ರ್ಯ,–ಇವುಗಳ ಮಿಲನದಿಂದ ಜೀವನವು ರುದ್ರಮಯವಾಗುತ್ತದೆ. ಕೇವಲ ಸ್ವಭಾವ ಇಲ್ಲವೆ ಪ್ರಸಂಗದ ವೈಚಿತ್ರ್ಯದಿಂದ ಸಹ ದುರಂತವು ಒದಗಿರಬಹುದು ; ಇಲ್ಲವೆ ಎರಡರಲ್ಲಿ ಒಂದು ಪ್ರಮುಖವಾಗಿ ನಾಟಕದಲ್ಲಿ ತೋರಿಸಲ್ಪಡಬಹುದು. ರೋಮಿಯೊ ನಾಟಕದಲ್ಲಿ 'ಗ್ರಹಪೀಡಿತ ಪ್ರೇಮಯುಗಲ'ವನ್ನು ತೋರಿಸುವದೇ ಮುಖ್ಯೋದ್ದೇಶವಾದ ಕಾರಣ ಶೇಕ್ಸಪಿಯರನು ದೈವ ದುರ್ವಿಲಾಸವನ್ನೇ ಹೆಚ್ಚು ಮನದಟ್ಟಾಗುವಂತೆ ತೋರಿಸಿದ್ದಾನೆ. ಅದೇ ಹ್ಯಾಂಲೆಟ್ ನಾಟಕದಲ್ಲಿ ನಾಯಕನ ವ್ಯಕ್ತಿತ್ವವೇ ಮುಖ್ಯ

ವಾಗಿ ಚಿತ್ರಿತವಾಗಿದೆ. ಇವೇ ಮೊದಲಾದ ಮಾತುಗಳಿಂದ ಮಹಾಜನಿಯವರಿಗೆ ಸಮಾಧಾನವಾದಂತೆ ಕಂಡಿತು.

ಆದರೆ ನನಗೆ ಸಮಾಧಾನವಾಗಲಿಲ್ಲ. ಮನೆಗೆ ಹೋಗಿ ಮತ್ತೆ ವಿಚಾರ ಮಾಡಿದೆ. ಯಾವ ನಾಟಕದಲ್ಲಿಯೇ ಆಗಲಿ, ಮರಣವು ಆಕಸ್ಮಿಕ ಘಟನೆಯೆಂದು ಮಾತ್ರ ಬರಬಹುದಲ್ಲವೆ? ಇನ್ನೊಂದು ಕ್ಷಣದಲ್ಲಿ ಜೂಲಿಯಟ್ಟಳು ಮೂರ್ಛೆ ತಿಳಿದೇಳುತ್ತಿದ್ದಳು; ಅಷ್ಟರಲ್ಲಿಯೇ ರೋಮಿಯೋನು ಅವಳನ್ನು ನೋಡಿ, ಮೃತಪಟ್ಟಳೆಂದು ತಿಳಿದು ವಿಷ ಕುಡಿದು ಜೀವಕೊಟ್ಟ. ಎಚ್ಚತ್ತ ಮೇಲೆ ರೋಮಿಯೋನು ಸತ್ತಿರುವದನ್ನು ನೋಡಿ ಜೂಲಿಯಟ್ಟಳು ತನ್ನನ್ನು ಕೊಂದುಕೊಂಡಳು. ನಾಟ್ಯಲೋಕದಲ್ಲಿ ಪ್ರತ್ಯಕ್ಷ ಸೃಷ್ಟಿಕರ್ತನಾದ ನಾಟಕಕಾರನು ಒಂದು ಕ್ಷಣದ ಬಗ್ಗೆ ಇಷ್ಟೇಕೆ ಕೃಪಣನಾದನು? ಹ್ಯಾಂಲೆಟ್ಟನು ನಿತ್ಯದ ಪ್ರಾರ್ಥನೆಯಲ್ಲಿ ತೊಡಗಿದ ಕಕ್ಕನನ್ನು ಕೊಂದೇಕೆ ಬಿಡಲಿಲ್ಲ? ಇಲ್ಲವೆ ಲೇಅರ್ಟೀಸನ ವಿಷದೂಷಿತ ಖಡ್ಗವು ತಗಲುವ ಪೂರ್ವದಲ್ಲಿಯೇ ಹ್ಯಾಂಲೆಟ್ಟನು ಅವನನ್ನೇಕೆ ಕೊಂದುಬಿಡಲಿಲ್ಲ? ಹಾಗೆ ಮಾಡಿಸಿ ಶೇಕ್ಸಪಿಯರನು ಹ್ಯಾಂಲೆಟ್ಟನನ್ನು ರಾಜಾಧಿರಾಜನನ್ನಾಗಿ ಮಾಡಿಬಿಡಬಹುದಿತ್ತಲ್ಲ? ಕೋರ್ಡಿಲಿಯಾಳನ್ನು ಶೂಲಕ್ಕೇರಿಸುವದರಲ್ಲಿ ಒಂದು ಕ್ಷಣ ವಿಲಂಬವಾಗಿದ್ದರೆ ಆಕೆಯ ಜೀವ ಉಳಿಯುತ್ತಿತ್ತು; ಅಂತೇ ಆಕೆಯ ತಂದೆಯಾದ ಲಿಯರ್ ರಾಜನೂ ಉಳಿಯುತ್ತಿದ್ದ. ಆದರೆ ನಾಟಕದಲ್ಲಿ ಅವರು ಸಾಯುವದಿತ್ತು. ಅಂತೇ ಶೇಕ್ಸಪಿಯರನು ಕಥೆಯ ಪೂರ್ವಪ್ರಕಾರಗಳನ್ನು ಬದಲಿಸಿ ವಿಲಂಬವನ್ನು ಮಾಡಿಸಿಬಿಟ್ಟ.

ಇದೆಲ್ಲದರ ಅರ್ಥವಿಷ್ಟು: ಮರಣವೇ ಆಕಸ್ಮಿಕವಾಗಿದೆ. 'ಗೃಹೀತ ಇವ ಕೇಶೇಷು' ಎಂಬ ಮಾತು ಈ ಆಕಸ್ಮಿಕತೆಯನ್ನು ಸಿದ್ಧಪಡಿಸುತ್ತದೆ. ನಾಟಕದಲ್ಲಿ ಸಹ ಮರಣವು ತನ್ನ ಸ್ವಭಾವವನ್ನು ಕಳೆದುಕೊಳ್ಳುವದಿಲ್ಲ. ಸಂಸ್ಕೃತ ನಾಟಕಗಳಲ್ಲಿ ದೇವಾಗಮನದಿಂದ ಕೊನೆಯ ಪ್ರವೇಶದಲ್ಲಿ ಸಂಭವಿಸಿದ ಸುಖವು ಎಷ್ಟು ಅಸಂಭವನೀಯವಾಗಿದೆಯೋ, ಅಷ್ಟೇ ಆಂಗ್ಲ ರುದ್ರನಾಟಕಗಳಲ್ಲಿ ಕೊನೆಯ ಪ್ರವೇಶದಲ್ಲಿಯ ಮರಣವು ಅಸಂಭವನೀಯವಾಗಿದೆ. ಆದಕಾರಣ ಇಂಥ ಪ್ರವೇಶಗಳನ್ನು ಪರೀಕ್ಷಿಸುವ ಪ್ರಮಾಣವೇ ಬೇರೆಯಾಗಿದೆ. ಜೀವನದಲ್ಲಿಯ ದೈವಜನ್ಯ ಸಂಕಟಗಳನ್ನು ಹಾಗು ಅಕಾರಣ ದುಃಖಗಳನ್ನು ಚಿತ್ರಿಸ

ಲೆಂದು ಇಂಥ ಮರಣಗಳ ಸಂಪ್ರದಾಯವನ್ನೊಂದು ನಾಟಕಪದ್ಧತಿಯಲ್ಲಿ ಸ್ವೀಕರಿಸಿದ್ದಾರೆ. ಜೀವನದಲ್ಲಿ ಇಂಥ ಆಕಸ್ಮಿಕ ಆಪತ್ತುಗಳು ಒದಗಿಬರುವ ವೆಂಬುದೇ ಈ ಪದ್ಧತಿಯ ಬುಡಕ್ಕೆ ನಿಂತ ತತ್ವವಾಗಿದೆ. ಈ ಪದ್ಧತಿಯನ್ನು ಯೋಗ್ಯವಾಗಿ ಉಪಯೋಗಿಸುವದು ನಾಟಕಕಾರರನ್ನು ಕೂಡಿದೆ; ಜನರ ಮನಸ್ಸಿನಲ್ಲಿ ಬಿಂಬಿಸುವಂತೆ ತೋರಿಸುವದು ನಟನನ್ನು ಕೂಡಿದೆ. ಇವರಿಬ್ಬರು ತಮ್ಮ ಕೈವಾಡವನ್ನು ಚೆನ್ನಾಗಿ ಪಳಗಿಸಿದಲ್ಲಿ ಸಂಭನನೀಯತೆ-ಅಸಂಭವನೀ ಯತೆಗಳ ಪ್ರಶ್ನೆಯೇ ಏಳುವದಿಲ್ಲ.

ಭೀಮಣ್ಣನಾಯಕನನ್ನು ಕೊಂದೇ ತೀರಬೇಕೆಂದು ನನ್ನ ಹಟವಿಲ್ಲ; ಆದರೆ ಅದು ನಿಶ್ಚಯವಾಗಿ ದೈವದ ಹಟವೆಂದು ಮಾತ್ರ ಹೇಳಬಲ್ಲೆ. ಜೀವನ ದಲ್ಲಿ ಇಂಥ ಸಂಗತಿಗಳು ಸಂಭವಿಸುತ್ತವೆ. ಭೀಮಣ್ಣನಾಯಕನಿಗೆ ತಾಯಿ ಹಾಗು ಹೆಂಡತಿಯ ಮೇಲೆ ನಿರ್ವ್ಯಾಜವಾದ ಪ್ರೇಮವಿತ್ತು. ಅದರಂತೆ ಜನ ಸೇವೆಯನ್ನು ಮಾಡಬೇಕೆಂಬ ಹಂಬಲವಿತ್ತು. ಅವನು ಮನೆಯಲ್ಲಿದ್ದರೂ ಸರಿ ಸುಭದ್ರಾಬಾಯಿಯ 'ಲಲ್ಲೆವಾತಿನ ಪ್ರೇಮರಾಶಿ' ಯೇ ಅವನ ಸರ್ವಸ್ವ ವಾಗುತ್ತಿತ್ತು. ಮನೆ ಬಿಟ್ಟು ಹೊರಗೆ ಹೋದರೆ,-ಜನತಾಜನಾರ್ದನನ ರುದ್ರಸ್ವರೂಪವೇ ಅವನ ಆರಾಧ್ಯವಸ್ತುವಾಗುತ್ತಿತ್ತು. ನಾಟಕವು ಸುರು ವಾಗುವ ಪೂರ್ವದಲ್ಲಿ ನಾಯಕನು ಎರಡನ್ನೂ ಮೇಳವಿಸಿಕೊಂಡು ಬಂದ. ಆದರೆ ಎರಡರಲ್ಲಿ ಒಂದನ್ನು ಸ್ವೀಕರಿಸಬೇಕಾದ ಸ್ಥಿತಿಯು ಕೂಡಲೆ ಬಂದೊದ ಗಿತು. ಆಗ ನಾಯಕನು ಮನೆಯನ್ನು ಹಿಡಿದು ಜನವನ್ನು ಬಿಟ್ಟ; ಇಂಚ ಲಾಪುರವೇ ಅವನಿಗೆ ಪ್ರೇಮಾಗರವಾಯಿತು. ಆದರೆ ಬೇವಿನಹಳ್ಳಿಯ ಕೂಗು ಮರೆಯುವದೆ? ಅಲ್ಲಿಯ ಅನ್ಯಾಯವನ್ನು ಕೇಳಿ ನಾಯಕನ ಇನ್ನೊಂದು ಆದರ್ಶವು ಮತ್ತೆ ಜಾಗೃತವಾಗುತ್ತದೆ. ಅಂದಿನಿಂದ ನಾಯಕನ ಮನಸ್ಸಿನಲ್ಲಿ ಇಬ್ಬಣವಾಗುತ್ತದೆ. ಇಂಚಲಾಪುರ-ಬೇವಿನಹಳ್ಳಿಗಳ ನಡುವಿನ ಅವನ ಹಾಯ್ದಾಟವೇ ಇದಕ್ಕೆ ಸಾಕ್ಷಿಯಾಗಿದೆ. ಮುಂದೆ ಅವನು ಜನತೆಯ ಸ್ವಾತಂತ್ರ್ಯವನ್ನು ಗಳಿಸಿ ಪ್ರೇಮವನ್ನು ನಿರ್ವಿಘ್ನವಾಗಿ ಅನುಭವಿಸಬೇಕೆಂದು ಮರಳಿದಾಗ,-ಹೆಂಡತಿಯನ್ನು ಬಿಟ್ಟು ಅವನು ಪರಲೋಕಕ್ಕೆ ತೆರಳಬೇಕಾಗು ತ್ತದೆ! ಇಂಚಲಾಪುರದಲ್ಲಿ ದೊರೆಯುವ ಪ್ರೇಮವೇ ಆದರ್ಶವಾಗಬಹುದು. ಬೇವಿನಹಳ್ಳಿಯ ಕಹಿಯನ್ನು ಕಿತ್ತೊಗೆಯುವದೇ ಧ್ಯೇಯವಾಗಬಹುದು.

ಮನೆಯನ್ನು ಗೆದ್ದವರೂ ಉಂಟು; ಮಾರನ್ನು ಗೆದ್ದವರೂ ಉಂಟು. ಆದರೆ ಮನೆ-ಮಾರನ್ನು ಕೂಡಿಯೇ ಗೆದ್ದವರು ತೀರ ವಿರಳ.

'ಇಂದಿನ ಬಾಳಿನ ಬಯಕೆಯದೊಂದಿದೆ,
ಮುಂದಿನ ಯುಗದಲಿ ಫಲಿಸುವದು!'

ಎಂಬಂತೆ ಎರಡು ಆದರ್ಶಗಳನ್ನು ಕೂಡಿಯೇ ಗೆಲ್ಲುವದು ಮುಂದಿನ ಯುಗದ ಸಾಹಸವಾಗಿದೆ. ಭೀಮಣ್ಣನಾಯಕನು ಪ್ರೇಮದ ನಿಜಸ್ವರೂಪವನ್ನು ಸಹ ಕಂಡಿದ್ದ. ಆದರೆ ಅದನ್ನು ಹೊಂದಿಕೊಂಡಿರಲು ಅವನಿಗೆ ಆಯುಷ್ಯವಿರಲಿಲ್ಲ. ಜೀವಿತದ ಅಲ್ಪಾವಧಿಯಲ್ಲಿ ನಾವು ಮೆಚ್ಚಿದ ಎಲ್ಲ ಧ್ಯೇಯಗಳನ್ನು ಹೇಗೆ ಸಾಧಿಸಬೇಕೆಂಬುದೇ ಇಂದಿನ ಪ್ರಶ್ನೆಯಾಗಿದೆ. ಅದಕ್ಕೆಂದೇ ಭೀಮಣ್ಣನಾಯಕನ ದುರಂತವು ಇದನ್ನು ರುದ್ರನಾಟಕವನ್ನಾಗಿ ಮಾಡುವದು.

ಒಂದು ವೇಳೆ ಹೀಗೆ ಹೇಳಬಹುದು: ಒಂದು ಗಳಿಗೆಯಲ್ಲಿ ಕಂಡ ಪ್ರೇಮವೂ ಒಂದು ಯುಗದಲ್ಲಿ ಕಂಡದ್ದೂ ಒಂದೇ. ಹೀಗಿದ್ದಾಗ ನಾಯಕನು ಎರಡೂ ಆದರ್ಶಗಳನ್ನು ಸಾಧಿಸಿದನೆಂದೇಕೆ ಹೇಳಬೇಡ! ಈ ದೃಷ್ಟಿಕೋನದಿಂದ ನೋಡಿದಲ್ಲಿ ಲಕ್ಷ್ಮವ್ವ-ಸುಭದ್ರಾಬಾಯಿಯವರ ಸಲುವಾಗಿ ನಾಟಕವು ರುದ್ರಮಯವಾಗುತ್ತದೆ. ಅವರ ಜೀವಿತವನ್ನು ಒಂದೇ ಧ್ಯೇಯವು ತುಂಬಿರುತ್ತದೆ-ವಾತ್ಸಲ್ಯ ಇಲ್ಲವೆ ಪ್ರೇಮ. ಅದೆಲ್ಲ ಬರಿದಾದಾಗ ಅವರೇನು ಮಾಡಬೇಕು? ಒಂದು ಒಳ್ಳೆಯ ಕೆಲಸದ ಮೂಲಕ ವಿಧಿಯು ಅವರಿಗೆ ಈ ದೈವವನ್ನು ತಂದಿದ್ದು ಇನ್ನಿಷ್ಟು ವಿಷಾದಕರವಾಗಿದೆ.

೭

ಜನನಾಯಕನಾಗುವ ಯೋಗ್ಯತೆಯು ಯಾರದು? ಈ ಪ್ರಶ್ನೆಯನ್ನು ನಾಟಕದಲ್ಲಿ ಸಾಕಷ್ಟು ಚರ್ಚಿಸಿದೆಯೆಂದು ಈಗ-ಪ್ರಸ್ತಾವನೆಯನ್ನು ಬರೆಯುತ್ತಿರುವಾಗ— ನನಗೆನಿಸಹತ್ತಿದೆ. ಇದು ಹಣಮಪ್ಪದೇಸಾಯಿಯಂತಹ ಮದಾಂಧರ ಹಾರಿಕೆಯಲ್ಲವೆಂಬುದು ನಾಟಕದಿಂದ ಸಿದ್ಧವಾಗುತ್ತದೆ. ಸಣ ತಮ್ಮನು ಎಣಿಕೆಯಾಚೆಗಿದ್ದ ನೀಚ,- ಲೋಕದಲ್ಲಿದ್ದ ಪಾಪಶಕ್ತಿಯೆಲ್ಲ ಮೂರ್ತಿಮಂತವಾಗಿ ಬಂದವನು. ಇಂಥವನು ಜಗತ್ತಿನಲ್ಲಿರಲು ಸಹ ಯೋಗ್ಯನಲ್ಲ.

ಇನ್ನು ಚಿಕ್ಕ ಶ್ರೀಮಂತರ ರೀತಿ ಬೇರೆ. ಒಳ್ಳೆಯ ವಿಲಾಸಿಯಾತ.

ಸಮಾಜದಲ್ಲಿ ಕೆಟ್ಟ ಹೆಸರಾಗದೆ ತನಗೆ ಸಾಕಷ್ಟು ದುಡ್ಡು ಸಿಕ್ಕರೆ ಸಾಕು ; ತನ್ನ ಉಪಭೋಗ್ಯ ವಸ್ತುಗಳನ್ನು ಬಿಟ್ಟು ಉಳಿದ ಪ್ರಪಂಚವೆಲ್ಲ ನಾಶವಾದರೂ ಅವನಿಗೆ ದುಃಖವೆನಿಸುವದಿಲ್ಲ. ಕಮಿಶನರನಲ್ಲಿ ಜನತೆಯ ಮನವನ್ನು ತಿಳಿವ ಬುದ್ಧಿಯಿದೆ, ನಿಷ್ಪಕ್ಷಪಾತವಿದೆ, ಆಡಳಿತದ ಪದ್ಧತಿಯೊಂದಿದೆ. ಆದರೆ ಹಿಂದುಸ್ಥಾನವು ಅವನ ದೇಶವಲ್ಲ ! ತನ್ನ ದೇಶದ ಜನರಿಗೆ ಸಾಕಷ್ಟು ಸಂಪತ್ತಿಯನ್ನು ದೊರಕಿಸಿಕೊಡುವದೇ ಅವನ ಕೆಲಸವಾಗಿದೆ. ವೇಳೆಯುಳಿದಾಗ ಮಾತ್ರ ಆತನು ಭಾರತದಲ್ಲಿಯ ನ್ಯಾಯಾನ್ಯಾಯಗಳ ವಿಚಾರವನ್ನು ಮಾಡಬಹುದು.

ಜನನಾಯಕತ್ವವನ್ನು ರಾಮಣ್ಣನಂಥವರ ಮೇಲೆ ಆರೋಪಿಸಿದರೆ ಯೋಗ್ಯವಾಗಬಹುದೆ ? ಇದು ಕಷ್ಟಕರವಾದ ಪ್ರಶ್ನೆ. ಅವರು ಜನನಾಯಕರಿಗೆ ಯೋಗ್ಯ ಸಲಹೆಗಾರರು ಮಾತ್ರ ಆಗಬಲ್ಲರೆಂದು ಹೇಳಬಹುದು-ಶಿವಾಜಿಗೆ ರಾಮದಾಸರಿದ್ದಂತೆ : ಇಲ್ಲವೆ ಹುಕ್ಕಬುಕ್ಕರಿಗೆ ವಿದ್ಯಾರಣ್ಯರಿದ್ದರಂತೆ. ದುಷ್ಟದಂಡನೆಯನ್ನು ರಾಮಣ್ಣನವರು ಬೋಧಿಸಬಹುದು ; ಆದರೆ ಅದಕ್ಕಾಗಿ ಅವರು ಕೈಯೆತ್ತುವದು ಅಸಂಭವನೀಯವಾಗಿದೆ.

ಹಾಗಾದರೆ ಇನ್ನುಳಿದವರಾರು ? ಲಕ್ಕಣ್ಣೊಡೆಯರು ಶ್ರೇಷ್ಠ ಜನನಾಯಕರು. ಅಧಿಕಾರ-ಸಂಪತ್ತುಗಳಿದ್ದಾಗ ಸಹ ಅವರು ಜನರ ಪ್ರೀತಿಯನ್ನು ಸಂಪಾದಿಸುವದರಲ್ಲಿಯೇ ಮುಕ್ತಿಯನ್ನು ಕಂಡರು. ಇವರೊಬ್ಬ ವಿಭೂತಿಗಳು. ಇಂಥವರ ಆಡಳಿತದಲ್ಲಿ ವಿಲಕ್ಷಣವಾದ ದೇಶೋನ್ನತಿಯಾಗುತ್ತದೆ. ಆದರೆ ಅವರು ಸಿಕ್ಕುವದು ವಿರಳ. ಒಮ್ಮೊಮ್ಮೆ ಸಿಕ್ಕಿದಾಗ, ಲಕ್ಕಣ್ಣೊಡೆಯರಂತೆ ಅಧಿಕಾರವಂತರಾಗುವದಿರಲಿ,—ಅಧಿಕಾರಮದದ ವಿರುದ್ಧ ಬಡಿದಾಡಿ ಅವರು ಸಾಯಬೇಕಾಗುತ್ತದೆ. ಭೀಮಣ್ಣನಾಯಕನು ಇದೇ ರೀತಿಯಾಗಿ ಸತ್ತನು. ವಿಭೂತಿಗಳು ಹೀಗೆ ಕಳೆದು ಹೋದಾಗ ಅವರ ಪರಿವಾರದಲ್ಲಿದ್ದ ಪ್ರಾಮಾಣಿಕರಿಗೆ ಜನನಾಯಕತ್ವವು ಪ್ರಾಪ್ತವಾಗುತ್ತದೆ. ' ಇನ್ನು ಮುಂದೆ ಜನನಾಯಕನಾರು ?' ಎಂದು ನಾಟಕದ ಕೊನೆಯ ಪ್ರವೇಶವು ಮುಗಿದಾಗ ಕೇಳಿದರೆ, 'ಸಿದರಾಮಸೆಟ್ಟರು' ಎಂದು ಉತ್ತರ ಬರುತ್ತದೆ. ಸಿದರಾಮಸೆಟ್ಟರಿಗೆ ಜಾತಿಯ ಭೂತ ಬಡೆದುಕೊಂಡಿಲ್ಲ. ಸ್ವಾರ್ಥದ ಬ್ರಹ್ಮರಾಕ್ಷಸವು ಅವರನ್ನು ನುಂಗಿಲ್ಲ. ಸುಳ್ಳಿನ ಸುಂಟರಗಾಳಿಯಾಗಲಿ ಚಾಡಿಯ ಉಚ್ಚಾಟನೆಯಾಗಲಿ, ಅವರನ್ನು ಸೋಂಕಿಲ್ಲ. ಗುಣಗ್ರಾಹಿತ್ವವೂ ಸೌಜನ್ಯವೂ ಆದರ್ಶವಾದಿತ್ವವೂ ಸೆಟ್ಟರಲ್ಲಿ

ಮನೆಮಾಡಿಕೊಂಡಿವೆ. ನಾಳಿನ ಕರ್ನಾಟಕದಲ್ಲಿ ಒಂದು ವೇಳೆ ವಿಭೂತಿಗಳಿಲ್ಲದಿದ್ದರೂ ನಡೆದೀತು! ಸಿದರಾಮಸೆಟ್ಟರಂತಹ ಜನನಾಯಕರಿದ್ದರು ಸಹ ನಿರಾಶೆಪಡುವ ಕಾರಣವಿಲ್ಲ.

೮

ನಾಟಕದಲ್ಲಿ ಒಂದು ರಚನಾಕ್ರಮವಿದೆಯೆಂದಾಗ ಓದುಗರಿಗೆ ಅದರರ್ಥವು ಸಹಸಾ ಗೊತ್ತಾಗುವದಿಲ್ಲ. ಲೇಖಕನು ಚಕ್ರವ್ಯೂಹವನ್ನು ರಚಿಸುವದರಲ್ಲಿ ಮಾತ್ರ ಸಂತೋಷ ಹೊಂದುವದಿಲ್ಲ. ತನ್ನಲ್ಲಿದ್ದ ಭಾವನೆಗಳನ್ನು ಅವನು ವ್ಯಕ್ತಪಡಿಸುತ್ತ ಹೋದ ಹಾಗೆ ನಾಟಕಕ್ಕೆ ಒಂದು ರಚನಾಕ್ರಮವು ಬರುತ್ತದೆ —ಆತ್ಮದೊಡನೆ ಬೆಳೆದ ದೇಹದಂತೆ. ಇನ್ನೊಬ್ಬರ ಕೃತಿಯನ್ನು ವಿಮರ್ಶಿಲು ಹೊರಟಂತೆ ನನ್ನ ನಾಟಕವನ್ನೇ ನಾನು ಈ ಪ್ರಸ್ತಾವನೆಯನ್ನು ಬರೆಯುತ್ತ ಹೋದಹಾಗೆ ವಿಮರ್ಶಿಸಹತ್ತಿದ್ದೇನೆ. ಇದರಲ್ಲಿ ಬರೆಯುತ್ತ ಹೋದ ಮಾತುಗಳು ನನಗೆ ಇದೀಗ ಹೊಳೆಯುತ್ತ ಬಂದಿವೆ. ಇವುಗಳನ್ನೆಲ್ಲ ಮೊದಲು ವಿಚಾರಮಾಡಿ ನಾನು ನಾಟಕವನ್ನು ಬರೆಯಲಿಲ್ಲ.

ಮೊದಲನೆಯಂಕಿನಿಂದ ಮೂರನೆಯಂಕಿನ ಕೊನೆಯ ವರೆಗೆ ದೇಸಾಯರ ಪ್ರಾಬಲ್ಯವು ಇದ್ದೇ ಇರುತ್ತದೆ. ನಾಯಕರ ಹಾಗೂ ಅವರ ಪಂಗಡದ ಶಕ್ತಿಯು ಇವರಿಂದಾದ ಅನ್ಯಾಯಗಳನ್ನು ಎದುರಿಸುವದರಲ್ಲಿ ಮಾತ್ರ ವೆಚ್ಚವಾಗುತ್ತದೆ. ನಾಯಕ-ಸೆಟ್ಟರ ಮಾನವನ್ನು ದೇಸಾಯಿ-ಸಣತಮ್ಮರು ಕೂಡಿ ಕಳೆಯುತ್ತಾರೆ. ಸಣತಮ್ಮನು ಗಂಗಜ್ಜನ ಸಂಸಾರವನ್ನು ಮಣ್ಣುಗೂಡಿಸುತ್ತಾನೆ. ಮುಂದೆ ಕಾರಭಾರಿಯಾಗುತ್ತಾನೆ. ನಾಯಕರ ಪಂಗಡವು ಇಂಚಲಾಪುರದ ವರೆಗೆ ಹಿಮ್ಮೆಟ್ಟುತ್ತದೆ.

ಆದರೆ ಮತ್ತೆ ಬದಲಾವಣೆಗೆ ಪ್ರಾರಂಭವಾಗುತ್ತದೆ. ಮೇಲಿಂದ ಮೇಲೆ ಬೇವಿನಹಳ್ಳಿಗೆ ಹೋಗುವ ಪ್ರಸಂಗಗಳು ನಾಯಕನಿಗೆ ಬರುವವಲ್ಲದೆ ಮುಂದೆ ಅಲ್ಲಿ ಅವನು ನಿರಾತಂಕವಾಗಿ ಇರಬಹುದಾದ ಕಾಲವೂ ಬರುತ್ತದೆ. ಸಮಾಧಿಯ ಬಳಿಯಲ್ಲಾದ ಸಭೆ. ಗಂಗಜ್ಜನಲ್ಲಿ ಪ್ರಬಲವಾದ ಸೇಡಿನ ಹವ್ಯಾಸ, ಚಿಕ್ಕಶ್ರೀಮಂತರ ಬರವು, ಕಮಿಶನರರ ವಿಚಾರಣೆ, ಅವರ ತೀರ್ಪು,-ಇವೆಲ್ಲ ಕಾರಣಗಳಿಂದ ದೇಸಾಯರ ಪಂಗಡವು ಕರಗಿಹೋಗುತ್ತದೆ. ಅದರಲ್ಲಿ ಕಟ್ಟ ಕಡೆಗೆ ಒಬ್ಬರೇ ಉಳಿಯುತ್ತಾರೆ-ಸೆರೆಮನೆಯಲ್ಲಿ ಸಿಕ್ಕುಬಿದ್ದ ಸಣತಮ್ಮ. ಆದರೆ

ಸಣತಮ್ಮನೇ ನಾಟಕದಲ್ಲಿಯು ಮೂಲ ಪಾಪಗ್ರಹವಾಗಿದ್ದಾನೆ. ಕೆಟ್ಟುದೆಲ್ಲ ಹುಟ್ಟಿದ್ದು ಅವನಿಂದ. ಅವನು ಮಾಡಿದ ಕರ್ಮವೇ ಬಲವಂತವಾಗಿ, ಗಂಗಜ್ಜ ನಲ್ಲಿ ಮೂರ್ತಿಮಂತವಾಗಿ, ಅವನ ನಾಶಕ್ಕೆ ಕಾರಣವಾಗುತ್ತದೆ. ಆದರೆ ಕೆಟ್ಟುದರೊಡನೆ ಒಳ್ಳೆಯದೂ ಅಳಿಯುತ್ತದೆ. ಭೀಮಣ್ಣ ನಾಯಕ ಸಾಯಲು ಕಾರಣವೇನಿತ್ತು ? ಆದರೆ ಕೆಡಕು ಹಾಕಿದ ಹೊಂಚಿನಲ್ಲಿ ಕೆಡಕಿನ ಕೇಡಾಗು ವದಲ್ಲದೆ ಒಳ್ಳೆಯದೂ ಹಾಳಾಗುವದು. 'The waste of virtue and the wreck of vice' ಎಂದು ಬ್ರ್ಯಾಡ್ಲೆ ಹೇಳಿದ ಮಾತು ಎಲ್ಲ ರುದ್ರ ರೂಪಕಗಳ ಅಡಿಗಲ್ಲಾಗಿದೆ. ಒಳ್ಳೆಯದೆಲ್ಲ ವಿನಾಕಾರಣ ಹಾಳಾಗುವ ದೇಕೆಂಬುದು ಇಡಿ ವಿಶ್ವದಲ್ಲಿ ಒಡೆಯದ ಒಗಟವಾಗಿದೆ. ಪ್ರತಿಭಾವಂತರು ಚಿಕ್ಕ ವಯಸ್ಸಿನಲ್ಲಿ ತೀರುತ್ತಾರೆ. ಹರಿಶ್ಚಂದ್ರನಂಥ ಪುಣ್ಯವಂತರನ್ನು ಶನಿಯು ಮಿತಿಮೀರಿ ಕಾಡುತ್ತಾನೆ. ಪುಣ್ಯವಂತರಿಗೆ ನಿರಂತರ ಯಾತನೆ, ಅಪಜಯ; ಪಾಪಿಗಳಿಗೆ ಐಶ್ವರ್ಯ, ಜಯ. ಜಗತ್ತಿನ ನಿಯಮವು ಹೀಗೆ ವಿಚಿತ್ರವಾದು ದನ್ನು ಕಂಡು ಮನಸ್ಸು ತಲ್ಲಣಗೊಳ್ಳುತ್ತದೆ.

ಆದರೆ ಒಂದು ಸಮಾಧಾನವಿದೆ. ಬ್ರ್ಯಾಡ್ಲೆ ಹೇಳಿದಂತೆ 'The inward is all'—ಮನುಷ್ಯನ ಸದ್ಗುಣಗಳೇ ಸಂಪತ್ತಾಗಿವೆ. ಪುಟಕ್ಕೆ ಹಾಕಿದ ಚಿನ್ನದಂತೆ ಯಾತನೆಗೀಡಾದ ಸದ್ಗುಣಿತ್ವವು ಹೆಚ್ಚು ಹೆಚ್ಚು ಶುದ್ಧ ವಾಗಿ ಜನರಿಗೆ ಇನ್ನಿಷ್ಟು ಎದ್ದು ಕಾಣುತ್ತದೆ. ಇಂಥ ಸದ್ಗುಣಮಣಿಗಳು ಜಗತ್ತಿನಲ್ಲಿರುವುದೇ ನಮಗೆಲ್ಲ ಆಶಾಜನಕವಾಗಿದೆ. ಸೃಷ್ಟಿಕ್ರಮದಲ್ಲಿ ಎಂತಹ ಅನ್ಯಾಯವಿದ್ದರೇನು,-ಭೀಮಣ್ಣನಂತಹ ಸದ್ಗುಣಿಗಳನ್ನೂ ಅದು ಕೊಡುವ ದಲ್ಲವೆ ? ಅಲ್ಲದೆ ಅವರಲ್ಲಿ ಇದ್ದ ಬಿದ್ದ ದೋಷಗಳು ಯಾತನೆಯ ಪುಟಕ್ಕೆ ಸಿಕ್ಕು ಮಾಯವಾಗಿ ಅವರ ಹೃದಯವು ಇನ್ನಿಷ್ಟು ನಿರ್ಮಲವಾಗುವದಿಲ್ಲವೆ ?

ಒಟ್ಟಿನ ಮೇಲೆ ಬೇರೆ ಬೇರೆ ತರಹದ ಕಲಹಗಳು ಇಲ್ಲಿ ಚಿತ್ರಿತವಾಗಿವೆ. ದಾಂಪತ್ಯಜೀವನ ಹಾಗು ಜನಜೀವನಗಳ ಆಕರ್ಷಣಕ್ಕೆ ಸಿಕ್ಕು ಗಾಸಿಗೊಂಡ ಭೀಮಣ್ಣ, ಭೀಷ್ಮನಂತೆ ಪಾಂಡವರ ಕಡೆಗೆ ಒಲವಿದ್ದರೂ ಕೌರವರಿಗಾಗಿ ಬಲವನ್ನು ಉಪಯೋಗಿಸಿದ ರಾಮಣ್ಣ,-ಇವರು ಒಳತೋಟಿಯ (Inner conflict) ಎರಡು ಪ್ರಕಾರಗಳನ್ನು ನಿದರ್ಶನಕ್ಕೆ ತರುತ್ತಾರೆ. ದೇಸಾಯರ ಪಾರ್ಟಿ ಹಾಗು ನಾಯಕರದು,-ಬೇವಿನಹಳ್ಳಿ ಮತ್ತು ಇಂಚಲಾಪುರ-ಇವು

ಗಳ ನಡುವಿನ ಸಂಘರ್ಷಣವು ನಾಟಕದಲ್ಲಿಯ ಹೊರತೋಟಿಯನ್ನು ಸೂಚಿಸುತ್ತದೆ. ಕೆಡಕು ಹಾಗು ಒಳ್ಳೆತನದ ನಡುವೆ ಸಾರ್ವತ್ರಿಕವಾಗಿ ನಡೆಯುವ ಕಲಹವೂ ಇಲ್ಲಿ ರೂಪಗೊಂಡಿದೆ.

ಪುಣೆಯಲ್ಲಾದ ಪ್ರಯೋಗಕ್ಕೆ ತೆರೆಯೆದ್ದೊಡನೆ ನಾನು ಸೂತ್ರಧಾರನಾಗಿ ಇಂಗ್ಲಿಷಿನಲ್ಲಿ ಭಾಷಣ ಮಾಡಿದ್ದೆ. ಶ್ರೀ ಬೇಂದ್ರೆಯವರು ಸೂತ್ರಧಾರನ ಮಿತ್ರರಾಗಿ ' ಪ್ರಾಕೃತ 'ದಲ್ಲಿ-ಅಂದರೆ ಕನ್ನಡದಲ್ಲಿ-ಮಾತನಾಡಿದರು. 'ನಿಜವಾದ ಸ್ವಾರಸ್ಯವು ಇಲ್ಲಿಯ ದಾಂಪತ್ಯಜೀವನದ ಚಿತ್ರಗಳಲ್ಲಿದೆ ; ಜಾಗೀರಿನ ಸಮಸ್ಯೆಯಲ್ಲಿ ಜೀವಕಳೆಗಿಂತ ಮಾತು ಬಹಳವಾಗಿದೆ ' ಎಂದು ಆಗ ಅವರು ಅಭಿಪ್ರಾಯಪಟ್ಟರು. ಅಭಿಪ್ರಾಯವನ್ನೂ ನಾಟಕವನ್ನೂ ಕೂಡಿಯೆ ಓದುಗರ ಮುಂದಿಟ್ಟದೆ, ಅವರೇ ಇದೆಲ್ಲದರ ಪರೀಕ್ಷೆ ಮಾಡಬೇಕು. ವೈಯಕ್ತಿಕ ಹಾಗು ಸಾರ್ವಜನಿಕ ಜೀವನವನ್ನು ಮೇಳವಿಸಿ ಅವುಗಳ ಪರಸ್ಪರ ಸಂಬಂಧವನ್ನು ತೋರಿಸುವದು ಇಲ್ಲಿಯ ನನ್ನ ಪ್ರಯತ್ನವಾಗಿದೆ.

ಸುಭದ್ರಾಬಾಯಿ ಹಾಗು ಸಣತಮ್ಮರ ಸ್ವಭಾವನಿರೂಪಣೆಗೆ ಇನ್ನಿಷ್ಟು ಅವಕಾಶವು ಸಿಕ್ಕಬೇಕಾಗಿತ್ತೆಂದೂ 'ಸ್ವಗತ' ಗಳಿಂದ ಅದನ್ನು ಸಾಧಿಸಬಹುದಾಗಿತ್ತೆಂದೂ ಒಬ್ಬ ಸ್ನೇಹಿತರು ಅಭಿಪ್ರಾಯಪಟ್ಟರು. ಆದರೆ ಇಲ್ಲಿ 'ಸ್ವಗತ' ಗಳನ್ನು ಆದಷ್ಟುಮಟ್ಟಿಗೆ ಉಪಯೋಗಿಸಬಾರದೆಂದು ನನ್ನ ಅಪೇಕ್ಷೆಯಿತ್ತು. ಅಲ್ಲದೆ ಹೊಸದಾಗಿ ಸೇರಿಸಿದ ಕೆಲವು ಪ್ರವೇಶಗಳಲ್ಲಿ ಆ ಉದ್ದೇಶವು ತಕ್ಕ ಮಟ್ಟಿಗೆ ಸಾಧಿಸಿದೆಯೆಂದು ನಾನು ತಿಳಿದಿದ್ದೇನೆ.

ಈ ನಾಟಕದ ಬಗ್ಗೆ ಇನ್ನೊಂದು ಮಾತನ್ನು ಹೇಳಬೇಕಾಗಿದೆ. ಹೊಸ ನಾಟಕಗಳನ್ನು ಬರೆಯಲು ಎರಡು ಹಾದಿಗಳಿವೆ : (೧) ಇಂದಿನ ರಂಗಭೂಮಿಯ ಮೇಲೆ ಬಳಕೆಯಲ್ಲಿದ್ದ ಮಾದರಿಗಳನ್ನು ಹಿಡಿದುಕೊಂಡು ಅವಕ್ಕೆ ಸಾಹಿತ್ಯದ ಸಂಸ್ಕಾರವನ್ನು ಕೊಟ್ಟು ಪಂಡಿತ-ಪಾಮರ ರಂಜಕವಾಗುವಂತೆ ಮಾಡುವದು. ಇದು ಶೇಕ್ಸಪಿಯರನ ರೀತಿ. (೨) ವಿದೇಶೀಯ ಮಾದರಿಗಳನ್ನು ಎದುರಿಗಿಟ್ಟುಕೊಂಡು ನಮ್ಮ ರಂಗಭೂಮಿಯ ಮೇಲೆ ಪ್ರಚಲಿತವಿದ್ದ ಪ್ರಯೋಗಗಳನ್ನು ಲಕ್ಷ್ಯಕ್ಕೆ ತಾರದೆ ತೀರ ಹೊಸವೆಂದು ಒಡೆದು ಕಾಣುವ ಪ್ರಕಾರಗಳನ್ನು ರೂಢಿಗೊಳಿಸಲು ಪ್ರಯತ್ನಿಸುವದು. ಇದು ಬೆನ್‌ಜಾನ್ಸನ್ನನ ರೀತಿ.

ಕನ್ನಡದಲ್ಲಿ ಇಂದು ಬಹುತೇಕ ಎರಡನೆಯ ಹಾದಿಯ ಮೇಲೆ ಪ್ರಯತ್ನಗಳು ನಡೆದಿವೆ. ಅಂತೇ ನಮ್ಮ ಹೊಸ ನಾಟಕಗಳೆಲ್ಲ ಅಮೆಚ್ಯೂರರ ಸೊತ್ತಾಗಿವೆ. ಕಂಪನಿಗಳ ರಂಗಭೂಮಿಯ ಮೇಲೆ ಅವುಗಳಿಗೆ ಪ್ರವೇಶವಿಲ್ಲ. ಇದನ್ನೆಲ್ಲ ಲಕ್ಷ್ಯದಲ್ಲಿಟ್ಟು ಆದಷ್ಟುಮಟ್ಟಿಗೆ ಮೊದಲು ಜನಮನವನ್ನು ಮುಟ್ಟಲೆಂದು ಇಲ್ಲಿ ಪ್ರಯತ್ನ ಮಾಡಿದೆ. ಇಷ್ಟರಿಂದಮಾತ್ರಕ್ಕೆ ಇವರು ತಾವು ಶೇಕ್ಸಪಿಯರರೆಂದು ತಿಳಿದುಕೊಂಡಾರೆಂದು ಆರೋಪಿಸಲು ಹತ್ತು ಲೆಕ್ಕಣಿಕೆಗಳು ಸಿದ್ಧವಾಗುವದನ್ನು ನಾನು ಬಲ್ಲೆ. ಆದರೆ ಶೇಕ್ಸಪಿಯರನ ರೀತಿಯಿಂದ ಮಾತ್ರಕ್ಕೆ ಅವನ ಪ್ರತಿಭೆಯೆಂದಂತಾಗಲಿಲ್ಲ. ಒಂದು ರೀತಿಗೆ ಅವನ ಹೆಸರು ಕೊಟ್ಟಿದೆ : ಇಷ್ಟೆ. ಮೇಲಾಗಿ ಶೇಕ್ಸಪಿಯರರೆಂದು ಕರೆಯಿಸಿಕೊಳ್ಳುವದರಲ್ಲಿ ಕೀರ್ತಿಯಿದೆಯೆಂದು ನಾನು ಭಾವಿಸಿಲ್ಲ. ಶೇಕ್ಸಪಿಯರನಲ್ಲಿ ಎಷ್ಟು ದೋಷಗಳಿವೆಯೆಂಬುದು ಅವನ ಕೃತಿಗಳನ್ನು ಓದಿದವರಿಗೇ ಗೊತ್ತು. ಕನ್ನಡದಲ್ಲಿ ಈ ವರೆಗೆ ವಿಶೇಷವಾಗಿ ಬಳಕೆಯಾಗದ ಒಂದು ರೀತಿಯನ್ನು ಹಿಡಿದು ಅದನ್ನು ನನ್ನ ಶಕ್ತ್ಯನುಸಾರವಾಗಿ ಉಪಯೋಗಿಸಿದ್ದೇನೆಂದು ಮಾತ್ರ ಇಲ್ಲಿ ಹೇಳಬಯಸುವೆನು.

ಕಮೀಶನರ್, ದೇಸಾಯಿ, ಸೇಡು ತೀರಿಸುವ ಗಂಗಜ್ಜ,-ಇವೇ ಮೊದಲಾದ ಪಾತ್ರಗಳು ನಮ್ಮ ಕಂಪನಿಗಳ ಪ್ರೀತಿಯವೆಂದು ಎಲ್ಲರೂ ಬಲ್ಲರು. ಪದವೀಧರರಿಗೆ ಇಂಥ ಪಾತ್ರಗಳು ಹಳೆಯ ಮಾದರಿಯವೆಂದು ಕಾಣುವವೆಂಬ ಅಂಜಿಕೆಯಿದ್ದರೂ ಅವನ್ನು ಇಲ್ಲಿ ಉಪಯೋಗಿಸಿದೆ. ಕರಿಯ, ಚಿಕ್ಕ ಶ್ರೀಮಂತ, ಸೆಟ್ಟಿ,-ಇವರ ಬಗ್ಗೆ ಇದನ್ನೇ ಹೇಳಬಹುದು. ರಂಗಭೂಮಿಯ ಮೇಲಿನ ಪಾತ್ರಗಳನ್ನು ಸ್ವೀಕರಿಸಿ ಅವುಗಳಿಗೆ ಸಾಹಿತ್ಯ ಸಂಸ್ಕಾರವನ್ನು ಕೊಟ್ಟಿದೆ. ಹಾಡುಗಳ ಬದಲು ಇಲ್ಲಿ ಲಾವಣಿ, 'ಪದ'ಗಳನ್ನಿಟ್ಟಿದೆ. ಅಂತೂ ಹಳೆಯದಕ್ಕೆ ಬಾಧೆ ಬರದ ಹಾಗೆ ಅದಕ್ಕೆ ಹೊಸತನ್ನು ಕೂಡಿಸಿ ಪಂಡಿತ-ಪಾಮರರೆಮರಿಗೆ ಈ ಕೃತಿಯನ್ನು ಇಟ್ಟಿದ್ದೇನೆ. ಇಲ್ಲಿ ಅನುಕರಿಸಿದ ಮಾದರಿಯು ಹಳೆಯದಿದ್ದರೂ ಆ ಮಾದರಿಯಲ್ಲಿ ಇದೊಂದು 'ಮಾದರಿಯ' ನಾಟಕವಾಗಬೇಕೆಂದು ಪ್ರಯತ್ನಪಟ್ಟಿದ್ದೇನೆ.

* * *

ಈ ನಾಟಕವನ್ನು ಬರೆದು ಪ್ರಯೋಗಿಸಿ ೩೪ ವರ್ಷಗಳಾದವು. ದ್ವಿತೀಯ ಮುದ್ರಣಕ್ಕೆಂದು ಮತ್ತೆ ನಾಟಕವನ್ನೋದಿದಾಗ ಅದರ ಬಗ್ಗೆ ನನಗೆ

ಅಭಿಮಾನವೆನಿಸಿದೆ. ಅಲ್ಲಲ್ಲಿ ಆಲಂಕಾರಿಕ ಶೈಲಿಯನ್ನು ವಜಾ ಮಾಡಿದೆ. ಇಲ್ಲದಿದ್ದರೆ ಇದ್ದ ನಾಟಕ ಇದ್ದ ಹಾಗೆಯೇ ಇದೆ.

ಜ್ಯಾನುವರಿ ೧೯೩೭ ರಲ್ಲಿ ಪ್ರಯೋಗಿಸಿದ ಈ ನಾಟಕದ ಮುದ್ರಣ ಕ್ಕಾಗಿ ನವೆಂಬರ್ ೧೯೩೮ ರಲ್ಲಿ ನಾನು ಮುನ್ನುಡಿಯನ್ನು ಬರೆದೆ. ಈ ಅವಧಿ ಯಲ್ಲಿ ನಾನು ಇಂಗ್ಲಂಡಿಗೆ ಹೋಗಿ ಮರಳಿ ಬಂದಿದ್ದೆ. ಆ ಹೊಸ ಹುಮ್ಮಸ್ಸೆಲ್ಲ ಮುನ್ನುಡಿಯಲ್ಲಿ ಕಾಣಿಸಿಕೊಂಡಿದೆ. ಮರಳಿದ ಮೇಲೆ ಇದು ನನ್ನ ಪ್ರಥಮ ದೀರ್ಘಲೇಖನವೆಂದರೂ ಸಲ್ಲುವದು.

ಸಂಸ್ಥಾನಗಳ ಹಾಗು ಸಂಸ್ಥಾನಿಕರ ಪ್ರಶ್ನೆ ಈಗ ಸುಮಾರು ಇಪ್ಪತ್ತು ವರ್ಷಗಳಿಂದ ಮರೆತ ಪ್ರಶ್ನೆಯಾಗಿದೆ. ಆದರೆ ಪಾಳೆಗಾರರ ಯುಗ ಇನ್ನೂ ತನ್ನ ದಬ್ಬಾಳಿಕೆಯನ್ನು ನಡೆಯಿಸುತ್ತಿದ್ದಾಗ ಪ್ರಜಾಪ್ರಭುತ್ವ ಹೇಗೆ ತಲೆ ಯೆತ್ತಲು ಧಡಪಡಿಸಿತೆಂಬುದು ಇಲ್ಲಿ ಚಿತ್ರಿತವಾಗಿದೆ. ಪಾಳೆಗಾರಿಕೆಯ ದರ್ಪ ಸಾಮ್ರಾಜ್ಯಶಾಹಿಗಿಂತ ಅಸಹನೀಯವಾಗಿತ್ತು.

'ಸೆಳವು' ಎಂಬ ನನ್ನ ಮೊದಲಕಾಲದ ಕವಿತೆಯಲ್ಲಿ ಶಕ್ತಿ-ವ್ಯಕ್ತಿಗಳ ಸಂಘರ್ಷ ಚಿತ್ರಿತವಾಗಿದೆ. ಆದರೆ ಅದು ಬಹುತೇಕ ಆಂತರಿಕ ಜಗತ್ತಿಗೆ ಸಂಬಂಧಿಸಿದ್ದು. ವಿಲಾಯತಿಗೆ ಹೋಗುವ ಪೂರ್ವದಲ್ಲಿಯೂ ಸಾಮಾಜಿಕ ಪ್ರಶ್ನೆ ನನ್ನ ಹಲಕೆಲವು ಕೃತಿಗಳಲ್ಲಿ ತಲೆಯೆತ್ತಿತ್ತು. 'ಇಜ್ಜೋಡು' ಮೊದಲಾದ ಕೃತಿಗಳಂತೆ ಈ ನಾಟಕವೂ ಅದಕ್ಕೆ ಪ್ರಮುಖ ಅಭಿವ್ಯಕ್ತಿ ಯನ್ನಿತ್ತಿದೆ.

'ಗಿಳಿಯ ಲಾವಣಿ' ನಾನು ಬರೆದ ಒಂದು ಒಳ್ಳೆಯ ಭಾವಗೀತ. ಇದು ಒಂದು ಕವನ ಸಂಗ್ರಹದಲ್ಲಿಯೇ ಬರಬೇಕಾಗಿತ್ತು. ಇದು ಹಾಗು 'ಭಣಾ ಭಣಾ' ಲಾವಣಿ ಇಲ್ಲಿ ಸಮಾವೇಶವಾಗಿದ್ದರಿಂದ ಬೇರೆ ಸಂಗ್ರಹಗಳಲ್ಲಿ ಸೇರಿಸಲಾಗಲಿಲ್ಲ. ಗಿಳಿಯದು ಸ್ವತಂತ್ರ ಭಾವಗೀತ. 'ಭಣಾ ಭಣಾ' ಲಾವಣಿ ನಾಟಕದ ಅಂಗವಾಗಿ ಬಂದದ್ದು.

## ಮುನಿದ ಮಾರಿ

'ಮುನಿದ ಮಾರಿ' ಎಂಬ ಈ ಏಕಾಂಕ 'ತುಳಸಿ' ಎಂಬ ಹೆಸರಿನಿಂದ ಸುಮಾರು ೩೫ ವರ್ಷಗಳ ಹಿಂದೆ 'ಕೋಲ್ಮಿಂಚು' ಎಂಬ ಏಕಾಂಕ ಸಂಗ್ರಹ ದಲ್ಲಿ ಪ್ರಸಿದ್ಧವಾಯಿತು.

ಒಂದು ವಿಶೇಷ ಕಾಂತಿಯುಳ್ಳ ಸ್ವಭಾವಗ್ರಹಣ ಹಾಗೂ ಸನ್ನಿವೇಶ ಪ್ರಜ್ಞೆ ಇಲ್ಲಿ ಪ್ರಕಟವಾಗಿದೆ. ಮಾತೂ ಬೀಸಾಗಿ ಬಂದಿದೆ. ಸ್ತ್ರೀಯು ರಾಕ್ಷಸಿಯಾದರೆ ಹೇಗಿರಬಲ್ಲಳೆಂಬುದು ಇಲ್ಲಿ ಸ್ಪಷ್ಟವಾಗಿದೆ. ತಾಯಿಯಂತೆ ಮಗಳು. ಮಗಳು ತಂದೆಯ ಮರಣಕ್ಕೆ ಒಂದು ರೀತಿಯಿಂದ ಕಾರಣಳಾದಳು. ಮುಂದೆ ಕಾದಲನನ್ನೂ ಹೀಗೆಯೇ ಮುರಿಯುತ್ತಾಳೆಂಬ ಸೂಚನೆ ಏಕಾಂಕದಲ್ಲಿದೆ. ನಾನು ಕಂಡ ಒಂದು ಕನಸಿನಿಂದ ಈ ಏಕಾಂಕ ರೂಪಗೊಂಡಿತೆಂದು ಕಾಣುತ್ತದೆ.

ಈ ಏಕಾಂಕದ ಜಗತ್ತನ್ನು ಪಾಪಜೀವಿಗಳೇ ತುಂಬಿದ್ದಾರೆ. ಒಳಿತೆಂಬುದು ಇಲ್ಲಿ ರಾಮಣ್ಣನಂತೆ ಮುಂಡೆಯ ಹುಣ್ಣಾಗಿ ಬಿದ್ದು ಹೋಗುತ್ತದೆ. ಪಾಪಜೀವಿಯಾದ ನಾರಾಯಣರಾಯನ ಮಾತಿನಲ್ಲಿ ವಿಚಿತ್ರ ವಿದಗ್ಧತೆ ತುಂಬಿದೆ.

'ಜನನಾಯಕ' ನಾಟಕದ ಸಾಂಪ್ರದಾಯಿಕ ಮಾದರಿಗೆ ಸಾಹಿತ್ಯಿಕ ಸಂಸ್ಕಾರವನ್ನು ಕೊಡಲು ಹವಣಿಸಿದರೆ ಇಲ್ಲಿ 'ಆಧುನಿಕ' ಸಾಮಾಜಿಕ ಪ್ರಯೋಗಗಳ ಮಾದರಿಗೆ ಒಂದು ಹೊಸ ತಿರುವನ್ನು ಕೊಟ್ಟಿದೆ.

ಬೆಂಗಳೂರು–೬ ವಿ. ಕೃ. ಗೋಕಾಕ್

೨೭–೧೨–೧೯೭೦

## ಪರಿವಿಡಿ

# ಪಾತ್ರಗಳು

ಡಾ. ದಿನಕರರಾಯರು

| | | |
|---|---|---|
| ಭೀಮಣ್ಣ | .... | ಅವನ ಕಂಪೌಂಡರ |
| ನೀಲಕಂಠಶಾಸ್ತ್ರಿಗಳು | .... | ಚಂಪೂಕಾರರು |
| ಕೊಳ್ಳಿ ಮಾಸ್ತರರು | .... | 'ಅಪಹರಣ' ಕರ್ತೃಗಳು |
| ಪಾಯಪ್ಪ | .... | ಹಳ್ಳಿಯ ಕವಿ |
| ಏಕಾಂಬರರಾಯ | .... | 'ರಾಗಧ್ವನಿ' ಪ್ರಚಾರಕ |
| ಅಭಿನವ ಚಾಃಸರರು | .... | .... .... |
| ಕಿಶೋರ ಕವಿ | .... | ಅನುಭಾವಿ |
| ಶರಣೇಂದ್ರ ಕವಿ | .... | ಪ್ರಚಾರಕಾವ್ಯನಿಪುಣ |
| ರೇಡಿಯೋದ ಮೇಲೆ ಭಟ್ಟಾರಕರು | | ನಾಟಕಕಾರರು |
| ವಾಮನ | .... | ಚಹದಂಗಡಿಯ ಮಾಣಿ |
| ರೇಡಿಯೋದ ಮೇಲೆ | | |
| ಊಹಾಪೋಹರಾಯರು | .... | ವ್ಯುತ್ಪತ್ತಿ ಶಾಸ್ತ್ರಜ್ಞರು |

ಕುಂಡಲಿನೀ ಕವಿಗಳು, ಮೊಹರಮ್ ಹುಲಿ,

ಝೇಂಡಾ ಹಿಡಿಯುವವ, ಗೆಜ್ಜೆ ಹಿಡಿಯುವವ.

ಸ್ಥಳ : ಡಾ. ದಿನಕರರಾಯನ ಆಫೀಸು.

ವೇಳೆ : ಒಂದು ದಿನ ಮುಂಜಾನೆ ೧೧ ಗಂಟೆಯಿಂದ

ಸಂಜೆಯ ೫ ಗಂಟೆಯ ವರೆಗೆ.

---

# ದೃಶ್ಯ

[ಏಕೀಕೃತ ಕರ್ನಾಟಕದ ವಿಶಾಲವಾದ ನಗರವೊಂದರಲ್ಲಿ ಬಾಕೀಕೃತರ ಬೀದಿಗೆ ಹೊಂದಿದ, "ಡಾ. ದಿನಕರರಾವ ಡಿ. ಎಲ್. ಸಿ. (ರಶಿಯಾ)" ಎಂಬ ದೊಡ್ಡ ಪಾಟಿಯುಳ್ಳ ಕಟ್ಟಡದೊಳಗೆ ತನ್ನ ಕೋಣೆಯಲ್ಲಿ ಡಾ. ದಿನಕರರಾಯನು ಕುರ್ಚಿಯ ಮೇಲೆ ಕೂತಿರುತ್ತಾನೆ. ಅವನ ಟೇಬಲ್ಲಿನ ಮೇಲೆ ರಾವುಗನ್ನಡಿಯ ತುಣುಕುಗಳು, ಒಂದೆರಡು ಲೋಲಕುಗಳು, ಸಾದಾ ಕನ್ನಡಿಗಳೊಂದೆರಡು ಹಾಗು ಸೂರ್ಯಕಾಂತ ಶಿಲೆಗಳಿರುತ್ತವೆ. ಅಲ್ಲದೆ "*How to be*" ಎಂಬ ಮಾಲೆಯ ಎಲ್ಲ ಗ್ರಂಥಗಳು—*How to be a Humourist, How to be an Iconoclast, How to be a Lyric Poet* ಮೊದಲಾದುವು ಇರುತ್ತವೆ. ಆದರೆ ಇವುಗಳಿಂದ ಎದ್ದು ಕಾಣುವ *How not to be* ಗ್ರಂಥಮಾಲೆಯ *How not to be a Literary Scapegoat, How not to be a Dramatist, How not to be a Novelist* ಮೊದಲಾದ ಗ್ರಂಥಗಳೂ ಮೇಜನ್ನು ಅಲಂಕರಿಸಿರುತ್ತವೆ. ಸಮೀಪದಲ್ಲಿಯೇ ಗೋಡೆಗೆ ಆನಿಸಿದ್ದ ಕಪಾಟಿನಲ್ಲಿ ಹಿಂದೂಸ್ಥಾನದ ಎಲ್ಲ ಭಾಷೆಗಳ ಶಬ್ದಕೋಶಗಳೂ, ಯುರೋಪಿನ ಮುಖ್ಯ ಭಾಷೆಗಳ ಶಬ್ದಕೋಶಗಳೂ ಇವೆ. ಅಲ್ಲದೆ ಪ್ರಾಸದ ಕೋಶಗಳು, ಪಡೆನುಡಿಗಳ ಸಂಗ್ರಹಗಳು, ಗಾದೆಯ ಮಾತಿನ ಉದ್ಗ್ರಂಥಗಳು, *The Standard Elocutionist, Encycopaedia Britanica, The World's Book of Knowledge, All Knowledge in a nut-shell, A Little Knowledge Is a Bomb-shell, The Map of the Universe* ಮೊದಲಾದ ಜ್ಞಾನಕೋಶಗಳಿವೆ. ಇನ್ನೊಂದು ಮಹತ್ವದ ಗ್ರಂಥವೆಂದರೆ, ರಸ್ಯಾ ದೇಶದ ಗ್ರಂಥಕಾರನೊಬ್ಬನು ಬರೆದ ವಿಮರ್ಶೆಯ ಇತಿಹಾಸ, (೧) ಕಲ್ಲೊಗೆಯುವ ಕಾಲದ ವಿಮರ್ಶೆ, (೨) ಆಯುಧಗಳನ್ನು ಝಳಪಿಸುವ ಕಾಲದ ವಿಮರ್ಶೆ, (೩) ದುಡ್ಡು ಕೊಡುವ ಕಾಲದ ವಿಮರ್ಶೆ, (೪) ದುಡ್ಡೇ ದೊಡ್ಡಪ್ಪನೆಂಬ ಕಾಲದ ವಿಮರ್ಶೆ (೫) ದುಡ್ಡು ಕಸಿಯುವ ಕಾಲದ ವಿಮರ್ಶೆ : ಹೀಗೆ ವಿಮರ್ಶೆಯ ಇತಿಹಾಸವನೊಳ್ಳಗೊಂಡ ಐದು ಪುಸ್ತಕಗಳಿವೆ.

ಇನ್ನೊಂದು ಸಣ್ಣ ಕಪಾಟಿದೆ. ಅದರಲ್ಲಿ ರಸಸಿದ್ಧಿಗೆ ಕವಿಗಳನ್ನೊಯ್ದು ಮುಟ್ಟಿಸಬಲ್ಲ ಅನೇಕ ಔಷಧಗಳಿವೆ. ದ್ರಾಕ್ಷಾರಸ, ಬೀಅರ, ಪೋರ್ಟ, ವಿಸ್ಕಿ ಮಧು,

ಓಪಿಯಮ್, ವರ್ಧಾನೀರಾ, ಗಾಂಜಾ, ತಮಾಕುಪತ್ರ, ನಶ್ಯದ ಪುಡಿ, ನೀಲಗಿರಿ ಎಣ್ಣೆ, ಚಿರೂಟು,—ಇವುಗಳನ್ನೆಲ್ಲಾ ಕಾಜಿನ ಕಪಾಟಿನಲ್ಲಿ ಜತನದಿಂದ ಕಾಯ್ದಿಟ್ಟಿವೆ. ಪ್ರಸಂಗ ಬಂದರೆ ಉಪಯೋಗವಾಗಲೆಂದು ಕ್ಲೋರೋಫಾರ್ಮ, ಸ್ಮೆಲಿಂಗ ಸಾಲ್ಟ್; ಹಾಗೂ ಲಾ:ಫಿಂಗ್ ಗ್ಯಾಸ್—ಇವುಗಳ ವ್ಯವಸ್ಥೆಯನ್ನೂ ಮಾಡಲಾಗಿದೆ.

ಗೋಡೆಗಳ ಮೇಲೆ ಅನೇಕ ಪ್ರಸಿದ್ಧ ವಿಮರ್ಶಕರ ಛಾಯಾಚಿತ್ರಗಳಿವೆ. ಒಂದು ಗೋಡೆಯ ಮೇಲೆ ಪ್ಲೇಟೋ, ಎರಿಸ್ಟಾಟಲ್, ಡಾಂಟೆ, ಬಾ:ಯಲೊ, ಲೆಸಿಂಗ, ಕ್ರೋಚೆ ಮೊದಲಾದವರ ಚಿತ್ರಗಳಿದ್ದರೆ ಇನ್ನೊಂದರ ಮೇಲೆ ಚಾ:ಸರ, ಸಿಡ್ನಿ, ಬೆನ್ ಜಾ:ನ್ಸನ್, ಡ್ರಾಯಡನ್, ಜಾ:ನ್‌ಸನ್, ಕೋಲರಿಜ್, ಆರ್ನೋಲ್ಡ್, ರಿಚರ್ಡ್ಸ್ನ ಮೊದಲಾದವರು ಕಂಡುಬರುತ್ತಾರೆ. ಮೂರನೆಯ ಗೋಡೆಯನ್ನು ಟಾ:ಲಸ್ಟಾ:ಯ್, ಗಾ:ರ್ಕಿ ಮೊದಲಾದ ರಶಿಯನ್ ಪ್ರಭೃತಿಗಳಿಗೆ ಮೀಸಲಾಗಿಟ್ಟಿದೆ. ನಾಲ್ಕನೆಯದರ ಮೇಲೆ ಮೆದುಳು, ಕಶೇರುಕಾರಜ್ಜು, ಬ್ರಹ್ಮರಂದ್ರ, ಹೃತ್ಕಮಲ,—ಇವುಗಳ ಆಕೃತಿಗಳನ್ನೂ ವಿವಿಧ ಯೋಗಮುದ್ರೆಗಳ ಮಾದರಿಯನ್ನು ತೂಗುಹಾಕಿದೆ. ಇದೇ ಗೋಡೆಯ ಮೇಲೆ ನೃಪತುಂಗ, ಪಂಪ, ರಾಘವಾಂಕ, ಕನಕದಾಸ, ಸರ್ವಜ್ಞ ಮೊದಲಾದ, ಪ್ರಸಿದ್ಧ ಕನ್ನಡಿಗರ ಭಾವಚಿತ್ರಗಳಿವೆ. ಪ್ರೇಕ್ಷಕರ ಎದುರಿಗಿನ ಗೋಡೆಯ ಕೆಳಗೆ ಒಂದು ಉದ್ದವಾದ ಸೋಫಾ, ಒಂದು ಕುರ್ಚಿ ಇದೆ. ಇವುಗಳ ಹತ್ತಿರ ಒಂದು ರೇಡಿಯೋ ಇಟ್ಟಿದ್ದಾರೆ.

ಸಮೀಪದಲ್ಲಿಯೇ ದಿನಕರರಾಯನ ಕಂಪೌಂಡರನಾದ ಭೀಮಣ್ಣನಿದ್ದಾನೆ. ಭೀಮಣ್ಣನೂ ದಿನಕರರಾಯನೂ ಲಂಗೋಟಿ ಗೆಳೆಯರು. ಇಂದು ಭೀಮಣ್ಣನು ಮಾಸಿದ ಧೋತರ ಕೋಟು ಟೊಪ್ಪಿಗೆಗಳನ್ನು ಧರಿಸಿ, ದಿನಕರರಾಯನು ಉತ್ತಮ ರೇಶ್ಮೆ ಸೂಟಿನಲ್ಲಿದ್ದರೆ,—ಅವರವರ ಹಣೆಬರಹವೇ ಅದಕ್ಕೆ ಕಾರಣ. ಭೀಮಣ್ಣನೂ ಕುರ್ಚಿಯ ಮೇಲೆ ಕುಳಿತಿದ್ದಾನೆ. ಅವನು ಕುಳಿತಲ್ಲಿಯೇ ಗೋಡೆಗೆ ಒಂದು ದೊಡ್ಡ ಪಾಟಿಯಿದೆ.

ತೆರೆಯು ಮೇಲೆದ್ದಾಗ ಭೀಮಣ್ಣನು ಪಾಟಿಯ ಕಡೆಗೆ ನೋಡುತ್ತಿರುತ್ತಾನೆ. ದಿನಕರರಾಯನು *The Critic's Dicta* ಎಂಬ ಮಾಸಿಕದಲ್ಲಿ ಅಚ್ಚಾದ ತನ್ನ ಲೇಖನವನ್ನು ಓದುತ್ತ ಕುಳಿತಿರುತ್ತಾನೆ.]

ದಿನಕರ—(ಭೀಮಣ್ಣನ ಕಡೆಗೆ ಮಾಸಿಕವನ್ನು ಮುಂದೆ ಮಾಡಿ) ಇಲ್ಲಿ ನೋಡು ಭೀಮು! ಕಲೆಯನ್ನು ಕುರಿತು ನಾನು ಬರೆದ ಲೇಖನವು ಅಚ್ಚಾಗಿ

ಬಂದಿದೆ. ಕಲೆಯ ಬಗ್ಗೆ ಜಗತ್ತಿನಲ್ಲಿ ಇನ್ನೂವರೆಗಿದ್ದ ವಿಚಾರಗಳನ್ನೇ ಇದು ಬುಡಮೇಲಾಗಿ ಮಾಡುವದು!

ಭೀಮು—ಅದೇನೋ, ನನಗೆ ಗೊತ್ತಿಲ್ಲ, ಮಹಾರಾಯ. ನನಗೆ ಕಲೆಯೂ ಗೊತ್ತಿಲ್ಲ; ನೆಲೆಯೂ ಗೊತ್ತಿಲ್ಲ. ನೀನು ಡಾಕ್ಟರನಾಗಿದ್ದರೆ ನಾನು ಕಂಪೌಂಡರು. ಇಷ್ಟೊಂದು ನನಗೆ ಗೊತ್ತು. ಅಷ್ಟೊಂದು ಒದರಿ ಹೇಳುತ್ತೀ, ಏನು ಬರೆದಿದ್ದೀ ಆ ಮಾಸಿಕದಲ್ಲಿ?

ದಿನಕರ—ಏನೆಂದರೇನು? ಹೊಸ ಸಿದ್ಧಾಂತವನ್ನೇ ಸ್ಥಾಪಿಸಿದ್ದೇನೆ. ಶೇಕ್ಸಪಿಯರನು ಕಲೆಯ ಬಗ್ಗೆ ಹೇಳಿದ, ಭೀಮೂ! *Holding up the miror to Nature;"* ಸೃಷ್ಟಿಯ ಮುಖಕ್ಕೊಯ್ದು ಕನ್ನಡಿಯನ್ನು ಹಿಡಿಯುವುದೇ ಕಲೆಯ ಕೆಲಸವಂತೆ! ಇಕಾ, ಈ ಕನ್ನಡಿಯನ್ನು ತೊಗೊ. ಇದರಲ್ಲಿ ನಿನ್ನ ಮೋರೆಯನ್ನು ನೋಡಿಕೋ. ಅದರಲ್ಲೇನು ಕಾಣುತ್ತದೆ?

ಭೀಮು—(ನೋಡಿಕೊಂಡು) ಎಲ! ನಾನು ಲುಕಿಂಗ ಗ್ಲಾಸನ್ನೇ ಕಂಡಿಲ್ಲವೆಂದು ಮಾಡೀಯೇನು? ಅದರಲ್ಲಿ ಕಾಣೋದೇನು, ಹೋಳೀಹುಣ್ಣಿಮೆಯೊಳಗೆ ಕೂಡಿಸಿದ ಹುಲುಗಾಮನಂಥ ನನ್ನ ಮುಖ. ಮತ್ತೇನು?

ದಿನಕರ—(ಕನ್ನಡಿಯನ್ನು ಇಸಗೊಂಡು) ಹಾ! ನಾ ಹೇಳುವದೂ ಅದನ್ನೇ! ಬರಿ ಕನ್ನಡಿಯನ್ನು ಹಿಡಿದರೆ ಸೌಂದರ್ಯವೆಲ್ಲಿಂದ ಬಂತು? ಅಸ್ಫುಟವಾಗಿದ್ದ ಸೌಂದರ್ಯವನ್ನು ಸ್ಫುಟಗೊಳಿಸಲು ಒಮ್ಮೊಮ್ಮೆ—ಇದೋ! ನೋಡು! ರಾವುಗನ್ನಡಿಯನ್ನು ಹಿಡಿಯಬೇಕು. (ಭೀಮೂನ ಮೋರೆಗೆ ಹಿಡಿಯುತ್ತಾನೆ.) ಸಕಲ ಬ್ರಹ್ಮಾಂಡನಾಯಕನಾದ ಸೂರ್ಯನಾರಾಯಣನ ಗೋಲವನ್ನೇ ಬಿಂದುವಾಗಿಸಿ, ಅಸಾಧ್ಯವಾದ ಪ್ರಕಾಶದಿಂದ ಅಪೂರ್ಣತೆಯನ್ನೆಲ್ಲ ಇದೋ! ಈ ಸೂರ್ಯಕಾಂತ ಶಿಲೆಯಂತೆ—ಸುಟ್ಟುಬಿಡಬೇಕು. ಇಲ್ಲಿ ನೋಡು—(ಲೋಲಕವನ್ನೆತ್ತಿ) **ಲೋಲಕದಂತಿರಬೇಕು ಕಲೆ!** ಜಗತ್ತನ್ನೆಲ್ಲ ಬಣ್ಣ ಬಣ್ಣವಾಗಿಸಿ ತೋರಿಸಬೇಕು. ಇಕಾ, ನಿನ್ನ ಮೋರೆಯನ್ನೇ ಈ ಲೋಲಕದೊಳಗಿಂದ ನೋಡುತ್ತೇನೆ. ಈಗ ನೀನು ಹೋಳೀಹುಣ್ಣಿಮೆಯ ಹುಲುಗಾಮನಲ್ಲ, ಕಾಮನ ಬಿಲ್ಲಿನ ಕಾಮ, ಮನ್ಮಥ. ಇದರಂತೆ ಕಲೆಯು

ಪ್ರಪಂಚವನ್ನು ದಿವ್ಯವಾಗಿಸಬೇಕು !

ಭೀಮು—ಇದೇ ಏನು ನಿನ್ನ ಸಿದ್ಧಾಂತ ! ನೀನು ಲೋಲಕವನ್ನು ಹಿಡಿದರೂ ಅಷ್ಟೇ ; ರಾವುಗನ್ನಡಿಯನ್ನು ಹಿಡಿದರೂ ಅಷ್ಟೇ. ನನ್ನ ಸುಟ್ಟ ಕಪಿಮೋರೆ, ಕಪಿಮೋರೆಯಾಗಿಯೇ ಉಳಿಯುತ್ತದೆ.

ದಿನಕರ—ಅಲ್ಲ, ಭೀಮೂ ! ನೀನು ಹೇಳುವುದು ವಾಸ್ತವವಾದ. ಅದಕ್ಕೂ ಕಲೆಯಲ್ಲಿ ಸ್ಥಾನವಿದೆ. ನಾನು ಮಾತನಾಡುವದು ಕಲೆಯ ವಿಧಾನಗಳ ಬಗ್ಗೆ. ಇದ್ದುದನ್ನು ಇಲ್ಲದಾಗಿಸುವದೂ, ಇಲ್ಲದಿರುವದನ್ನು ಇರುವಂತೆ ಮಾಡುವದೂ ಕವಿಯ ಕರ್ತವ್ಯಗಳಲ್ಲೊಂದಾಗಿದೆ.

ಭೀಮು—ಇಲ್ಲಿ ನೋಡು ! ದಿನಕರ, ಒಣರಗಳೆ ಏಕೆ ? ಈಗ ನಮ್ಮಲ್ಲಿ ಬಡತನವಿದೆ. ಅದನ್ನು ಇಲ್ಲದಾಗಿಸೋಣ. ನಮ್ಮ ಕಿಸೆಯಲ್ಲಿ ದುಡ್ಡಿಲ್ಲ. ಅದು ಅಲ್ಲಿ ಝಣಗುಟ್ಟುವಂತೆ ಮಾಡೋಣ. ಇಲ್ಲಿ ನೋಡು, ನೀನು ಹೇಳಿದ ಬೋರ್ಡು ತಯಾರಾಗಿದೆ.

ದಿನಕರ—(ಶಾಂತವಾಗಿ ಟೇಬಲ್ಲಿನ ಮೇಲೆ ಕೈಯೂರಿ ಕುಳಿತು) ಇನ್ನೂ ನಿನಗೆ ಹೇಳುವವನಿದ್ದೆ. *Kaleidoscope* ನಂತೆ ಕಲೆಯ ಪ್ರಕಾರಗಳು ಅನಂತವಾದವು ; ಚಲಚ್ಚಿತ್ರಗಳಂತೆ ರೂಪಧ್ವನಿಗಳನ್ನಲ್ಲದೆ ಚೇತನವನ್ನು ಕೊಡುವ ಸಂಜೀವಿನಿಯೇ ಕಲೆಯು. ಇರಲಿ, ಓದು ಏನು ಬರೆದಿದ್ದೀ ?

ಭೀಮು—(ಓದುತ್ತ)

## ಚಿಕಿತ್ಸೆಗೆ ಫೀ

| | | |
|---|---|---|
| ಮುಖ್ಯ ಮಾತು | : | ಇಲ್ಲಿ ಮಾಫಿ ಸುತರಾಂ ಇಲ್ಲ. |
| ಭಾವಗೀತಾ ಚಿಕಿತ್ಸೆ | : | ೧೦ ರೂಪಾಯಿ |
| ಪ್ರಬಂಧ ಚಿಕಿತ್ಸೆ | : | ೧೦ ” |
| ನಾಟಕಾವಲೋಕನ | : | ೫೦ ” |
| ಕಲೋಪಾಸಕನ ಮಸ್ತಕ ಪರೀಕ್ಷೆ | : | ೭೫ ರೂ. |
| ಕಲೋಪಾಸಕನ ಸಮಗ್ರ ಪರೀಕ್ಷೆ | : | ೧೦೦ ರೂ. |

ದಿನಕರ—ಅಡ್ಡಿ ಇಲ್ಲ. ಎಲ್ಲರಿಗೂ ಕಾಣುವಂತೆ ಹೊರಗಿಟ್ಟುಬಿಡು. ಇಕಾ ಇನ್ನೊಂದು ಮಾತು. ಕವಿಗಳೆಂದರೆ ದುಡ್ಡಿಲ್ಲದ ಜಾತಿ. ನಾನು

ವಿಮರ್ಶಕ ವೈದ್ಯ ; ನೀನು ಉಪವೈದ್ಯ. ನಿನ್ನ ಕೋಣೆಯನ್ನು ದಾಟಿ ಬರದ ಹೊರತು ನನ್ನ ಆಫೀಸಿನಲ್ಲಿ ಅವರಿಗೆ ಪ್ರವೇಶವಿಲ್ಲ. ಕೈಯಲ್ಲಿ ಫೀ ಬಂದಾಗ ಮಾತ್ರ ಅವರನ್ನು ಒಳಗೆ ಬಿಡಬೇಕು ನೋಡು !

ಭೀಮು—ಅದು ನನಗೆ ಗೊತ್ತಿಲ್ಲೆಂದು ತಿಳಿದ್ಯಾ ! ನಿನ್ನ ಹೊಟ್ಟೆ-ನಿನ್ನ ಹೊಟ್ಟೆಯೊಳಗಿದ್ದ ನನ್ನ ಹೊಟ್ಟೆ—ಇವೆರಡಕ್ಕೂ ಸಲ್ಲಬೇಕಾದ ಹಣವನ್ನು ಕೈಯಲ್ಲಿಡದ ಹೊರತು,—ಕವಿಯಿರಲಿ, ಕಪಿಯಿರಲಿ—ಯಾರನ್ನೂ ಒಳಗೆ ಬಿಡುವುದಿಲ್ಲ. ಆದರೆ ಇದೆಲ್ಲ ವ್ಯವಹಾರ ಹೌದೋ ಅಲ್ಲೋ ನನಗೆ ಸಂಶಯವಿದೆ. ಅಲ್ಲ, ನೀನೇ ನೋಡು. ಹೊಟ್ಟೆಗಾಗಿ ದುಡಿಯುವದನ್ನು ಬಿಟ್ಟು ಜನರು ಕವಿತೆಗಳನ್ನೇಕೆ ಬರೆಯುತ್ತಾರೆ ? ಒಂದು ವೇಳೆ ಅಪ್ಪಿತಪ್ಪಿ ಬರೆದರೆ—ನಿನ್ನ ಕಡೆಗೆ ಚಿಕಿತ್ಸೆಗೇಕೆ ಬರುತ್ತಾರೆ ?

ದಿನಕರ—ಅಲ್ಲೋ. ಪೆದ್ದ ! ಕಲ್ಲಿಗೆ ಹೇಳಿ ಹೇಳಿ ಹೌಪೆನಿಸಬಹುದು. ನಿನ್ನ ಸಂಗತಿ ಕಠಿಣ. ವಕೀಲರೆಂದರೆ,—ಕೀಲವಿಲ್ಲದ ಗಾಲಿಯಂತಾಗಿದ್ದಾರೆ. ಡಾಕ್ಟರಾಗಬೇಕೆಂದರೆ,—ಪ್ಲೇಗು, ಪಿಡುಗು, ಗುದ್ದವ್ವನಬೇನೆ, ಮಾರಿಕಾ,—ಎಲ್ಲ ರೋಗಗಳೂ ದೇಶದಲ್ಲಿ ಕಡಿಮೆಯಾಗುತ್ತಬಂದವು. ಮಾಸ್ತರನಾಗಬೇಕೆಂದರೆ,—ಮಾಸ್ತರರ ಸಂಖ್ಯೆಯೇ ಹುಡುಗರಿಗಿಂತ ಹೆಚ್ಚಾಗಿ ಬೆಳೆದಿದೆ. ಅಂದಮೇಲೆ ಕಲಿತವರ ಹೊಟ್ಟೆ ಹೇಗೆ ತುಂಬ ಬೇಕು ? ಹೀಗೆ ಚಿಂತೆಯಲ್ಲಿ ಬಿದ್ದಾಗ—ಕರ್ನಾಟಕದಲ್ಲಿ “ಬರುತಿದೆ ! ಸುಗ್ಗಿ ಬರುತಿದೆ ! ಸಾಹಿತ್ಯದ ಸುಗ್ಗಿ ಬರುತಿದೆ !!” ಎಂದು ಒಂದೆಡೆಗೆ ಓದಿದೆನು. ಆಗ ಝುಗ್ಗನೆ ಮನಸ್ಸಿನಲ್ಲಿ ಹೊಳೆಯಿತು : ಸಾಹಿತ್ಯದಲ್ಲಿ ವಸಂತಮಾಸವು ಬರುವದೆಂದರೆ,—ದೇಶಕ್ಕೆ ಪ್ಲೇಗು ಬಂದಂತೆ. ಪ್ಲೇಗು ಬಂದಾಗ ಡಾಕ್ಟರರು ಧನ್ಯರಾಗುವರಂತೆ. ಸಾಹಿತ್ಯದ ಮಧುಮಾಸವು ಬಂದಾಗ ವಿಮರ್ಶಕರು ಧನ್ಯರಾಗುವರಂತೆ. ಅದಕ್ಕಾಗಿ ಬಿ. ಎ. ಆಗಿದ್ದ ನಾನು ಇದ್ದ ಬಿದ್ದ ಆಸ್ತಿಯನ್ನೆಲ್ಲ ಮಾರಿ ರಸ್ಯಾದೇಶಕ್ಕೆ ಹೋಗಿ *Doctor of Literary Criticism* ‘ವಿಮರ್ಶಾಶಾಸ್ತ್ರಜ್ಞ’ ನೆಂಬ ಡಿಗ್ರಿ ಸಂಪಾದಿಸಿಕೊಂಡು ಬಂದೆ. ಅಲ್ಲಿಯ ಸಮತಾವಾದವನ್ನೂ ಕಲಿತೆನೆನ್ನು. ಆದರೆ ಹಿಂದೂಸ್ಥಾನದಲ್ಲಿ ಅದನ್ನು ಆಚರಿಸುವುದು

ಹೇಗೆ? ಶ್ರೀಮಂತರಂತೆ ಎಲ್ಲರೂ ಶ್ರೀಮಂತರಾಗಬೇಕೇ ಹೊರತು ಬಡವರಂತೆ ಎಲ್ಲರೂ ಬಡವರಾಗಬಾರದು. ಅದಕ್ಕಾಗಿ ಇಲ್ಲಿ ಪ್ರಾಕ್ಟೀಸ್ ಮಾಡಬೇಕೆಂದು ನಿಶ್ಚಯಿಸಿ ನಿನಗೆ ತಿಳಿಸಿದೆ. "ಬರುವರು, ಬರುವರು!" ಎಂದು ವರ್ತಮಾನ ಪತ್ರಗಳಲ್ಲಿಯೂ, ಶಾಲೆಗೆ ಹೋಗುವ ಹುಡುಗರ ಹಣೆಯ ಮೇಲೂ, ಆಕಾಶಬುಟ್ಟಿಯಂತಹ ವಿಮಾನಗಳ ತಳಕ್ಕೂ ಬರೆಯಿಸಿದೆ, ಹೀಗೆ ನನ್ನ ಆಗಮನವು ಕರ್ನಾಟಕದಲ್ಲೆಲ್ಲ ಡಾಣಾ ಡಂಗುರವಾಗಿದೆ. ಇನ್ನೇನು? ನನಗೂ ನಿನಗೂ ಪುರಸತ್ತಿಲ್ಲದಂತೆ ಕೆಲಸ ಬರುವದು ಭೀಮೂ!

ಭೀಮು—ಅದೆಲ್ಲ ನಿಜ, ದಿನಕರ. ಆದರೆ ಜನರಿಗೆ ನಿನ್ನ ವಿದ್ವತ್ತೆಯ ಅನುಭವ ಬಂದು ಅವರಿಗೆ ನಿನ್ನ ಕೈಗುಣದ ಬಗ್ಗೆ ಖಾತ್ರಿಯಾಗದ ಹೊರತು....

ದಿನಕರ—ಛೀ ಮಳ್ಳೇ! ಸಾಕು ಮಾಡು. ಇಂದು ಮೊದಲನೆಯ ದಿನ. ಚಿಕಿತ್ಸೆಯನ್ನು ನಾನು ಪುಕ್ಕಟೆಯಾಗಿಟ್ಟ ಕಾರಣವೇನು? ಇಂದು ನನ್ನ ಸಲಹೆಯನ್ನು ಪಡೆಯಲು ಬಂದವರೆಲ್ಲ ನನ್ನ ಜಾಹೀರಾತುಗಳಿಂದು ತಿಳಿ.

ಭೀಮು—(ಗಡಿಬಿಡಿಯಿಂದೆದ್ದು) ದಿನಕರ, ಒಬ್ಬ ಕವಿಗಳು ಇತ್ತ ಕಡೆಗೇ ಬರುತ್ತಿರುವರು. ಪರಮ ಪಂಡಿತರಾದ ನೀಲಕಂಠ ಶಾಸ್ತ್ರಿಗಳವರು. ನಿನ್ನಂತ ಮ್ಲೇಂಛನ ಕಡೆಗೆ ಬರುವರೇಕೋ ಕಾಣೆ.

ದಿನಕರ—ನಾನೇಕೆ ಮ್ಲೇಂಛ? *I am a Vaishnava of the first water*. ಮಠಗಳಲ್ಲಿಯೂ ಅಗ್ರತೀರ್ಥವೇ ನನ್ನದು!

ಭೀಮು—ಇರಲಿ ಬಿಡೋ, ತುರುಕ! ಹೀಗೆ ಬನ್ನಿರಿ, ಶಾಸ್ತ್ರಿಗಳೇ! ನಮಸ್ಕಾರ! (ನಮಸ್ಕರಿಸುತ್ತಾನೆ.)

(ಶಾಸ್ತ್ರಿಗಳು ನೀಲಿ ಶಾಲನ್ನು ಹೊತ್ತು ಧೋತರವನ್ನುಟ್ಟಿರುತ್ತಾರೆ. ಹಣೆಯಲ್ಲಿ ಭವ್ಯವಾದ ಅದ್ವೈತೀ ಗಂಧವಿದೆ. ಕೈಯಲ್ಲಿ ಪುರಾಣದ ಗಂಟಿನಂತೆ ಕಟ್ಟಿದ ಮಹಾ ಗಂಟಿನಲ್ಲಿ ಅವರ ಕಾವ್ಯಗಳ ಹಸ್ತಪ್ರತಿಗಳಿವೆ.)

ಶಾಸ್ತ್ರಿಗಳು—(ಬಂದು) ದೀಘಾರ್ಯುಷೀ ಭವ! ಅಲ್ಲೋ ಡಾಕ್ಟರ ಸಾಹೇಬರೆಲ್ಲಿ?

ಭೀಮು—ಇಲ್ಲೇ ಇದ್ದಾರೆ ಶಾಸ್ತ್ರಿಗಳೇ! ಇದೇನು? ಕೈಯಲ್ಲಿ ಕಿಷ್ಕಿಂಧಾ

## ಪ್ರವೇಶ ೪

(ಬನಸಿಲಾಲನ ಬಂಗಲೆಯ ತೋಟದಲ್ಲಿ ಬನಸಿಲಾಲನು ಪೋಪಟಲಾಲನಿಗೆ ಜೋರಾಗಿ ಮಾತನಾಡುತ್ತಿರುತ್ತಾನೆ.)

ಬನಸಿಲಾಲ—ಹೋಗು, ಹೊರಟುಹೋಗು ! ನೀನು ಬಂದಮೇಲೆ ಬರಿ ಅಪಶಕುನಗಳು ನನ್ನ ಬೆನ್ನುಹತ್ತಿವೆ. ಲೊಚ್‌ಲೊಚ್ ನುಡಿಯುವ ಹಲ್ಲಿಗಳೇ ನಿನ್ನ ಕಿಸೆಯಲ್ಲಿ ತುಂಬಿವೆ. ಹಾದಿಯಲ್ಲಿ ಅಡ್ಡಗಟ್ಟುವ ಬೆಕ್ಕುಗಳ ತಂಡವನ್ನೇ ನೀನು ಸಾಕಿದ್ದೀ ! ಬರಿ ಎಡಕಟ್ಟುವ ಕಾಗೆಗಳನ್ನೇ ನೀನು ದಿಲ್ಲಿಯ ತುಂಬಿ ಹಾರಿಬಿಟ್ಟಿದ್ದೀ ! ಹೇಳಿದ ಒಂದು ಕೆಲಸವನ್ನೂ ಮಾಡಲಾರಿ. ಮೇಲೆ ಈ ಕೆಟ್ಟ ಕಾಲ್ಗುಣ ಬೇರೆ, ಇನ್ನು ನೀನು ನನ್ನ ಬೆನ್ನು ಕಟ್ಟಬೇಡ. ನಾನೂ ನಿನ್ನ ಹೊಟ್ಟೆ ಹಿಡಿಯಲಾರೆ !

ಪೋಪಟಲಾಲ (ಬಟ್ಟೆ ಸಾವರಿಸಿಕೊಳ್ಳುತ್ತ ಎದುರಿಗಿಟ್ಟಿದ್ದ ಟ್ರಂಕನ್ನು ಎತ್ತಿ) ಹೊರಡಲು ನಾನು ಒಂಟುಗಾಲ ಮೇಲೆ ಸಿದ್ಧ, ಮಾಮಾಜಿ. ನಮ್ಮ ನಮ್ಮ ದೈವವನ್ನು ನಾವೇ ಕಂಡುಕೊಳ್ಳಬೇಕು. ಇನ್ನೊಬ್ಬರು ನಮ್ಮನ್ನು ಎಷ್ಟೆಂತ ನೋಡಿಕೊಂಡಾರು ! ಆದರೆ ನನ್ನನ್ನು ಕವಿಯೆಂದು ಮಾತ್ರ ಹೊರಗೆ ಹಾಕಬೇಡಿರಿ. ನೀವು ಕವಿಯಾಗಿದ್ದೀರಿ ! ಹಲ್ಲಿ, ಬೆಕ್ಕು, ಕಾಗಿ, ನವ್ಯಕಾವ್ಯದ ಈ ಮಹತ್ವದ ಚಿತ್ರಮಾಲೆಯನ್ನು ನೀವು ಮಾರ್ಮಿಕವಾಗಿ ಉಪಯೋಗಿಸುತ್ತೀರಿ !

ಬನಸಿಲಾಲ....ಏನೆಂದುಕೊಂಡಾದರೂ ಹೋಗು. ಈ ಮನೆ ಬಿಟ್ಟು ತೊಲಗಿದರೆ ಸಾಕು. ನಿನ್ನೊಡನೆ ಬಂದ ವಿಧಿಯೂ ಹೊರಗೆ ಹೋದೀತು ! ನೀನು ಹೋದ ಮೇಲೆ ಅಂಗಳಕ್ಕೆಲ್ಲ ತಳಿ ಹೊಡಿಸುತ್ತೇನೆ. ಇಡಿ ಮನೆಯನ್ನೆಲ್ಲ ಸಾರಿಸಲುಹೇಳುತ್ತೇನೆ. ಬಾಗಿಲುಗಳಿಗೆಲ್ಲ ತಳಿದೋರಣ ಕಟ್ಟಿಸುತ್ತೇನೆ. ನೀನು ಹೋದ ಮೇಲೆ ಬರಲಿರುವ ಸುದೈವವನ್ನು ಮಹಾದ್ವಾರದಲ್ಲಿ ನಿಂತು ಸ್ವಾಗತಿಸುತ್ತೇನೆ.

ಪೋಪಟಲಾಲ—(ಟ್ರಂಕು ಕೆಳಗಿಟ್ಟು) ಹೋಗುತ್ತೇನೆ ಬಿಡಿರಿ ! ಆದರೆ ನನ್ನಿಂದಾದ ತಪ್ಪಾದರೂ ಏನು, ಮಾಮಾಜಿ ?

ಬನಸಿಲಾಲ—ತಪ್ಪೇನು ! ಕೇಳಲು ನಾಚಿಕೆ ಬರುವದಿಲ್ಲವೆ ? ಈ ಮನೆಯೊಳಗೆ ನೀನು ಕಾಲಿಟ್ಟ. ಅನಾಯಾಸವಾಗಿ ಕಿಸೆಯಲ್ಲಿ ಬೀಳುವ

ಅನಾಥಾಶ್ರಮದ ಅಧ್ಯಕ್ಷಪದವು ನನ್ನ ಕೈಯಿಂದ ಜಾರಿ ಆ ಕಾಂತಿ ಚಂದ್ರನ ಪದರಿನಲ್ಲಿ ಬಿದ್ದಿತು! ಹರಿಜನ ಸಂಘವನ್ನು ಕಾರ್ಯದರ್ಶಿ ಯಾಗಿ ನೀನು ಹೊಕ್ಕಿ! ಗೆದ್ದಲಿ ಹತ್ತಿದ ಕಟ್ಟಿಗೆ ಪೆಟ್ಟಿಗೆಯಂತೆ ಅದು ನಾಮಶೇಷವಾಯಿತು. ಕವಿಗೋಷ್ಠಿಯಲ್ಲಿ ಕವಿತೆ ಓದುವೆನೆಂದು ಹೇಳಿ ಎದ್ದು ನಿಂತಿ. ಅಲ್ಲಿ ಮೂರ್ಛೆ ಬಂದು ನೀನು ಬಿದ್ದು ದಿಲ್ಲಿಯ ತುಂಬ ನನ್ನ ಮನೆತನದ ಬದ್ನಾಮಿಯಾಯಿತು. ಆ ಮೃಣಾಲಿನಿಗೆ ಒಂದು ಪತ್ರ ಕೊಟ್ಟು ಬಾರೆಂದರೆ ಆಕೆಯೊಡನೆ ಸಲಿಗೆ ಬೆಳಿಸಹೋಗಿ ಕಪಾಳಕ್ಕೆ ಹೊಡಿಸಿಕೊಂಡು ಬಂದಿ!

ಪೋಪಟಲಾಲ—(ಗಾಬರಿಯಾಗಿ) ಅದೂ ನಿಮಗೆ ಗೋತ್ತಾಗಿದೆಯೆ?

ಬನಸಿಲಾಲ—ಆಗದೆ ಏನು? ಮಾಹುವಿಗೆ ಹೋಗುವ ಮುಂದೆ ಹೆಚ್ಚಿನ ಹೆಣ್ಣುಮಗಳು ಇವನ್ನು ನನಗೆ ತಿಳಿಸಿ ಬೆದರಿಕೆ ಹಾಕಿ ಹೋದಳು. ದಿಲ್ಲಿಯ ತುಂಬ ಹೇಳಲಿಲ್ಲ. ಅದೇ ನನ್ನ ಪುಣ್ಯ!

ಪೋಪಟಲಾಲ—(ಟ್ರಂಕು ಎತ್ತಿ) ಇನ್ನು ನಾನು ಹೊರಡುತ್ತೇನೆ. ಇನ್ನು ಇಲ್ಲಿರುವದು ಸಾಧ್ಯವಿಲ್ಲ. ಮಾಮಾಜಿ! ಕರುಣೆ ಬಂದು ಸಹ ಇನ್ನು ನೀವು ನನಗೆ ಇಲ್ಲಿರೆಂದು ಹೇಳಬೇಡಿರಿ. ನಿಮ್ಮ ಮಾತನ್ನು ನಾನು ಮನ್ನಿಸಲಾರೆ. ಇದೋ! ನಾನು ಹೊರಟೇಬಿಟ್ಟೆ!

ಬನಸಿಲಾಲ—(ತಿರಸ್ಕಾರದಿಂದ ನಕ್ಕು) ಶತಮೂರ್ಖಾ! ನಿನಗೆ ಇರೆಂದು ಒತ್ತಾಯಪಡಿಸುವಷ್ಟು ವ್ಯವಹಾರಶೂನ್ಯ ನಾನೆಂದು ತಿಳಿದೆಯಾ? ನಾಳೆ ಘಟನಾಕೂಟದ ಪೂರ್ವಪೀಠಿಕೆಯಾದ ಅಸೆಂಬ್ಲಿಯ ಚುನಾವಣೆಗಳು ಬಂದಿವೆ. ನೀನಿಲ್ಲಿದ್ದೀಯೆಂದೇ ಪಾರ್ಲಮೆಂಟರಿ ಬೋರ್ಡಿನಿಂದ ಆಗಬೇಕಾದ ನನ್ನ ಆಯ್ಕೆ ತಡೆದುನಿಂತಿದೆ, **ಮೊದಲು ನೀನು** ದಾರಿಹಿಡಿ. ಆಗ ನನ್ನ **ಪೀಡಾ ಪರಿಹಾರವಾದೀತು!**

ಪೋಪಟಲಾಲ—(ಸ್ವಾಭಿಮಾನದಿಂದ) ಮಾಮಾಜಿ! ನಿಮ್ಮ ಯಶಸ್ಸಿಗೆ ನಾನೇಕೆ ಅಡ್ಡಬರಲಿ! ನೀವು ಅಸೆಂಬ್ಲಿಗೆ ಆರಿಸಿ ಬನ್ನಿರಿ. ಘಟನಾಕೂಟದ ಸದಸ್ಯರಾಗಿರಿ. ನಿಮ್ಮಂಥ ಸ್ವಾರ್ಥಿಗಳೂ ದುಷ್ಟರೂ ತುಂಬಿರುವ ಈ ದೇಶದಲ್ಲಿ ನಾಳೆ ನೀವು ಮಂತ್ರಿಯಾಗಿ ಮುಂದೆ ಪ್ರಧಾನ ಮಂತ್ರಿಯಾದರೂ ಆಶ್ಚರ್ಯವಿಲ್ಲ. ಹಳ್ಳಿಯಲ್ಲಿ ಬೆಳೆದ ನನ್ನನ್ನು

ನೀವಾಗಿಯೇ ದಿಲ್ಲಿಗೆ ಕರೆದುಕೊಂಡು ಬಂದಿರಿ. ಈಗ ನೀವಾಗಿಯೇ ಅದಾವುದೋ ಕುರುಡ ನಂಬಿಕೆಯ ನಿಮಿತ್ತ ನನ್ನನ್ನು ಹೊರಗೆ ಹಾಕುತ್ತಿದ್ದೀರಿ. ನಾನು ಕೆಲವು ತಪ್ಪು ಮಾಡಿರಬಹುದು. ಆದರೆ ನಾನು ನಿಮ್ಮಂತೆ ಪಾಪಿಷ್ಠನಲ್ಲ. ಸ್ವಾಭಿಮಾನಿಯಾದವನಿಗೆ ನೆಲವೇ ನೆಲೆ, ಮುಗಿಲೇ ಮನೆ ಮಾಳಿಗೆ. ದಿಲ್ಲಿಗೆ ಬಂದ ನಾನು ಇನ್ನು ದಿಲ್ಲಿಯನ್ನು ಬಿಟ್ಟು ಕದಲುವದಿಲ್ಲ. ಇಲ್ಲಿಯೇ ಇದ್ದು ನಾನು ನಿಮ್ಮ ದೌಲತ್ತು ನೋಡುತ್ತೇನೆ. ನೀವು ನನ್ನ ಹಿಕಮತ್ತು ನೋಡಿರಿ!

(ಹೋಗುತ್ತಾನೆ.)

ಬನಸಿಲಾಲ—ಹಳ್ಳಿಯಿಂದ ಬಂದ ಪಿಳ್ಳಿ! ಇದರ ಮಾತೆಷ್ಟು! ಆರ್ಭಟವೆಷ್ಟು!

(ನೋಡುತ್ತ ನಿಲ್ಲುತ್ತಾರೆ. ತೆರೆ.)

---

## ಪ್ರವೇಶ ೫

[ಹಳೆಯ ದಿಲ್ಲಿ ಸ್ಟೇಶನಿನಲ್ಲಿ ಒಂದನೆಯ ತರಗತಿಯ ವಿಶ್ರಾಂತಿಗೃಹ.
ಕಿಶನ್‌ಕಿಶೋರ-ರುಕ್ಮಿಣಿದೇವಿ, ಕಾಂತಿಚಂದ್ರ-ರೋಹಿಣಿದೇವಿ
ಹಾಗೂ ಕೋಸಲೇಂದ್ರ-ಮೃಣಾಲಿನಿಯರು
ಅಲ್ಲಿ ಕುಳಿತಿದ್ದಾರೆ.]

ರೋಹಿಣಿದೇವಿ—ಯುದ್ಧ ಮುಗಿದರೂ ಈ ರೇಲ್ವೆ-ಆಲಸ್ಯ ಮುಗಿಯ ಲೊಲ್ಲದು. ಗಾಡಿ ವಿಲಂಬ ಎಷ್ಟೆಂದು ತಿಳಿಯಲು ಆಳು ಕಳಿಸಿದೆವು. ಸರಿ ಎನ್ನುತ್ತ ಅವನು ತಿರುಗಿ ಬಂದ. ಆಗ ಸ್ಟೇಶನಿಗೆ ಎಲ್ಲರೂ ಬಂದೆವು. ಒಂದೂವರೆ ಗಂಟೆಯಾಯಿತು. ಇಲ್ಲೇನಿದೆ ? ಬ್ರಿಟಿಶ್ ಸಾಮ್ರಾಜ್ಯ ದಲ್ಲಿ ಎಂದೂ ಅಸ್ತನಾಗದಿದ್ದ ಸೂರ್ಯನ ಉದಯಾಸ್ತಗಳೇ ಈಗ ಅನಿಶ್ಚಿತವೆಂದು ತೋರುತ್ತದೆ. ನಾವು ತಮ್ಮನ್ನು ಉಳಿದ ಕೆಲಸಗಳಿಂದ ತಡೆಹಿಡಿದಿಲ್ಲವಷ್ಟೇ ?

ಕಿಶನ್‌ಕಿಶೋರ—ಛೀ ! ಛೀ ! ತಾವು ನಮ್ಮನ್ನು ನೋಡದೆ ಹೋಗಿದ್ದರೆ ಭೆಟ್ಟಿಯ ಸಂಧಿಯೇ ತಪ್ಪುತ್ತಿತ್ತು.

ರೋಹಿಣಿದೇವಿ—ಗ್ಯಾಂಗ್‌ವೇನಲ್ಲಿ ಮೊದಲು ಮೃಣಾಲಿನಿ ಕಂಡಳು. ಕಾಂತಿ ಚಂದ್ರರ ಆರೈಕೆಗೆ ಬರುವದಾಗಿ ವಚನ ಕೊಟ್ಟು ಐದಾರು ದಿನಗಳಲ್ಲಿ ತಿರುಗಿ ಬರುವೆನೆಂದು ಹೇಳಿದ ಮೃಣಾಲಿನಿಯನ್ನು ಒಮ್ಮೆ ಚನ್ನಾಗಿ ಮಾತನಾಡಿಸಬೇಕು ಎಂದುಕೊಂಡೆ. ಅಷ್ಟರಲ್ಲಿ ಕೋಸಲೇಂದ್ರ ಬಾಬು ಗಳು ಕಂಡರು. ತಮ್ಮನ್ನೂ ನೋಡಿದೆ. ಮಾಹುವಿನಿಂದ ಇಂಥ ಬೇಸಿಗೆ ಯಲ್ಲಿ ತಾವು ತಿರುಗಿ ಬರಬಹುದೆಂದು ನನಗೆನಿಸಿರಲಿಲ್ಲ. ಅಲ್ಲಿ ಎಲ್ಲವೂ ಸುಖವಾಗಿತ್ತೇ ?

ರುಕ್ಮಿಣಿದೇವಿ—ದೇವರ ದಯೆಯಿಂದ ಎಲ್ಲವೂ ಸುಖಕರವಾಗಿ ಮುಕ್ತಾಯ ವಾಯಿತು. ಮೃಣಾಲಿನಿ ನಿಮಗೆ ಹೇಳಿದ ಹಾಗೆ ಬೇಗನೇ ತಿರುಗಿ ಬರುತ್ತಿದ್ದಳೋ ಏನೋ. ನಾವೇ ಕೆಲವು ದಿನ ಆಕೆಯನ್ನು ತಡೆದು ನಿಲ್ಲಿಸಿದೆವು. ಈಗ ತಾವು ಹೋಗುವದೆಲ್ಲಿಗೆ ?

ರೋಹಿಣಿದೇವಿ—ಮಥುರೆಗೆ ಹೊರಟಿದ್ದೇನೆ.

ಕಿಶನ್ ಕಿಶೋರ—ಯಾಕೆ, ಕಾಂತಿಚಂದ್ರಜಿ! ತಾವು ಬಹಳ ಸೊರಗಿದ್ದೀರಲ್ಲ?

ರುಕ್ಮಿಣಿದೇವಿ—ಹೌದು. ನಾನೂ ಕೇಳಬೇಕೆಂದಿದ್ದೆ.

ರೋಹಿಣಿದೇವಿ—(ಸಣ್ಣ ಮೋರೆ ಮಾಡಿ) ಅವರ ಪ್ರಕೃತಿಯ ಸಲುವಾಗಿಯೇ ನಾವು ಈಗ ಮಥುರೆಗೆ ಹೊರಟಿದ್ದು. ಮುಂದೆ ಕೆಲವು ದಿನ ನೈನಿ ತಾಲಕ್ಕೆ ಹೋಗಬೇಕೆಂದಿದ್ದೇವೆ.

ಕಾಂತಿಚಂದ್ರ—ಕಿಶನ್ ಕಿಶೋರಜಿ! ತಮ್ಮೆದುರಿಗೆ ಸತ್ಯವನ್ನು ಹೇಳುವ ದಾದರೆ, ದಿಲ್ಲಿಯು ನನ್ನನ್ನು ನೆಲಕ್ಕುರುಳಿಸಿದೆ. ಬಹಳ ಉತ್ಸಾಹ ದಿಂದ ನಾನು ಇಲ್ಲಿಗೆ ಬಂದೆ. ಆದರೆ ಆ ಬನಸಿಲಾಲ........

ಕಿಶನ್ ಕಿಶೋರ—ಓಹೋ!

ಕಾಂತಿಚಂದ್ರ—ಅವನು ನನ್ನನ್ನು ಹಿಂಡಿ ಹಿಪ್ಪೆ ಮಾಡಿದ. ಈಗ ದಿಲ್ಲಿಗಿಂತ ಮಥುರೆಯೆ ಒಳಿತೆಂದು ತಿರುಗುತ್ತಿದ್ದೇವೆ. (ವಿಷಾದದಿಂದ ನಕ್ಕು) ಕೋಸಲೇಂದ್ರಬಾಬು ನನಗೊಂದು ಔಷಧ ಹೇಳಿದ್ದಾರೆ. ಇನ್ನು ಅದನ್ನು ಸಾಧಿಸಬೇಕಾಗಿದೆ.

ಕಿಶನ್ ಕಿಶೋರ—(ನಗುತ್ತ) ಹೀಗೋ! ಕೋಸಲೇಂದ್ರನು ತಮಗೆ ಯಾವ ಔಷಧ ಹೇಳಿದ?

ಕಾಂತಿಚಂದ್ರ— ಸಂಪತ್ತು-ಅಧಿಕಾರ-ಕೀರ್ತಿಗಳನ್ನು ದಾಟಿ ಒಂದು ಆನಂದ ವಿದೆಯಂತೆ. ಇನ್ನು ಅದನ್ನು ಸಾಧಿಸಬೇಕು.

ಕೋಸಲೇಂದ್ರ—(ನಗುತ್ತ) ಆದರೆ ಕಾಂತಿಚಂದ್ರಜಿ! ಇದಕ್ಕಾಗಿ ದಿಲ್ಲಿಯನ್ನು ತ್ಯಜಿಸಬೇಕೆಂದು ನಾನು ಹೇಳಿಲ್ಲವಲ್ಲ? ಈಗ ಬೇಕಾದರೆ ಒಂದೆರಡು ತಿಂಗಳು ಹೋಗಿ ನೈನಿತಾಲದಲ್ಲಿ ವಿಶ್ರಮಿಸಬಹುದು. ಆದರೆ ತಮ್ಮಂಥ ಕಾರ್ಯಶಾಲಿಗಳನ್ನು ದಿಲ್ಲಿಯು ಹೀಗೆ ಕಳೆದುಕೊಳ್ಳಲಾರದು.

ರೋಹಿಣಿದೇವಿ—ಪಿಶ್! ಇದೇನು ಹೇಳುತ್ತೀರಿ, ಕೋಸಲೇಂದ್ರಬಾಬು! ದಿಲ್ಲಿಗೆ ಎರವಾಗಬಾರದೆಂದು ನಾವು ವಿಶ್ವಪ್ರಯತ್ನ ಮಾಡಿದೆವು. ಆದರೆ ಈಗ ದಿಲ್ಲಿಯೇ ನಮ್ಮನ್ನು ಹೊರದೂಡುತ್ತಿದೆ. ನಾವು ಯಾರಿಗೂ ಬೇಕಾಗಿಲ್ಲ. ಮೃಣಾಲಿನಿಯನ್ನು ನಾನು ಮಗಳಂತೆ ನೋಡುತ್ತೇನೆ. ತಾಯಿಯನ್ನು ಕಳೆದುಕೊಂಡ ಆಕೆಯೂ ನನ್ನನ್ನು ಪ್ರೀತಿಸುತ್ತಾಳೆ. ಆದರೆ ಆ ಮಾರ್ಕ್ಸ ತತ್ವಗಳಲ್ಲಿ ನನಗೆ ಶ್ರದ್ಧೆ ಇರಬೇಕಲ್ಲ? ಅದಕ್ಕಾಗಿ

ಆಕೆಗೂ ನಾನು ಬರ್ಷಣವಾಗಿದ್ದೇನೆ! ಅಲ್ಲವೆ, ಮೃಣಾಲಿನಿ! (ಮೃಣಾಲಿನಿ ಉತ್ತರ ಕೊಡಲು ಹಿಂದೆ ಮುಂದೆ ನೋಡುವದನ್ನು ಕಂಡು) ಇಷ್ಟೇಕೆ ಸುಮ್ಮನಿದ್ದೀ! ಇದೆಲ್ಲಿಯ ಮೌನವ್ರತ?

ಕೋಸಲೇಂದ್ರ—(ನಗುತ್ತ) ಅತ್ತೆ-ಮಾವಂದಿರೆದುರಿಗೆ ಮಾತನಾಡಲು ಆಕೆ ನಾಚುತ್ತಾಳೆ.

ಕಾಂತಿಚಂದ್ರ
ರೋಹಿಣಿದೇವಿ } (ಆಶ್ಚರ್ಯದಿಂದ) ಅತ್ತೆ-ಮಾವಂದಿರು? ಯಾರು? ಮದುವೆ ಎಂದಾಯಿತು? ಯಾರೊಡನೆ? ನಮಗೆ ಗೊತ್ತೇ ಇಲ್ಲವಲ್ಲ!

ಕೋಸಲೇಂದ್ರ—ಇವರೇ ಆಕೆಯ ಅತ್ತೆ-ಮಾವಂದಿರು. ನಾನು ಅವರ ಮಾನಸ ಪುತ್ರ. ಮೃಣಾಲಿನಿ ನನ್ನ ವಧು. ಆದರೆ ಮದುವೆ ಇನ್ನೂ ಆಗುವದಿದೆ.

ರೋಹಿಣಿದೇವಿ—ಆಶ್ಚರ್ಯ! ಪರಮಾಶ್ಚರ್ಯ!

ಕೋಸಲೇಂದ್ರ—ಇರಬೇಕು, ರೋಹಿಣಿದೇವಿಯವರೆ! ಆ ವಿಷಯವನ್ನೆಲ್ಲ ಹಿಂದಿಸಿಂದ ಮೃಣಾಲಿನಿ ಹೇಳುತ್ತಾಳೆ. ಆದರೆ ನಿಮ್ಮಿಬ್ಬರಲ್ಲಿ ನನ್ನದೊಂದು ಸೂಚನೆಯಿದೆ.

ಕಾಂತಿಚಂದ್ರ—ಏನು ಸೂಚನೆ, ಕೋಸಲೇಂದ್ರಬಾಬು?

ಕೋಸಲೇಂದ್ರ—ಭಾರತದಲ್ಲಿಯ ಆಧ್ಯಾತ್ಮಿಕ ಕೇಂದ್ರಗಳು ಶಕ್ತಿಯ ಕೋಶಾಗಾರಗಳಾಗಿವೆ. ಕಿಶನ್‌ಕಿಶೋರಜಿ ಅವರು ಪ್ರತಿವರ್ಷ ಕೆಲವು ತಿಂಗಳಾದರೂ ಇಂಥ ಕೇಂದ್ರಗಳಿಗೆ ಹೋಗಬೇಕೆಂದು ಗೊತ್ತುಮಾಡಿದ್ದಾರೆ. ತಾವೂ ಅವರ ಜೊತೆಗೆ ಹೋಗಬಹುದು. ಆದರೆ ತಿರುಗಿ ಬಂದಾಗ ದೇಶದ ಭವಿತವ್ಯವನ್ನು ಬರೆಯಲು ಭಾರತದ ಲಲಾಟದಂತಿದ್ದ ಈ ದಿಲ್ಲಿಯಲ್ಲಿ ಆ ಶಕ್ತಿಯನ್ನು ತಾವು ಉಪಯೋಗಿಸಬೇಕು. ತಮ್ಮ ಗೌರವಕ್ಕೆ ತಕ್ಕ ಕಾರ್ಯಕ್ಷೇತ್ರವನ್ನು ನಾನಿಲ್ಲಿ ತಮಗೆ ಕಲ್ಪಿಸಬೇಕೆಂದಿದ್ದೇನೆ.

ಕಾಂತಿಚಂದ್ರ—(ಸಂತೋಷದ ಮುಗುಳು ನಗೆಯಿಂದ) ನಿಮ್ಮಂಥವರ ನೆರವು ದೊರೆತರೆ ಅದೇನು ಅಸಾಧ್ಯವಲ್ಲ.

ಕೋಸಲೇಂದ್ರ—ಕಿಶನ್‌ಕಿಶೋರರು ಮಾಡಬೇಕಾದುದನ್ನು ಮಾಡಿ ಅಚಿಂತ್ಯದ ಕಡೆಗೆ ತಿರುಗಿದ್ದಾರೆ. ಅಲ್ಲದೆ, ಇನ್ನೂ ಒಂದು ಕಾರಣವಿದೆ. ನೀವು

ಒಬ್ಬರು ವಿರಕ್ತರಾದರೆ ರೋಹಿಣಿದೇವಿಯವರೇನು ಮಾಡಬೇಕು? ಮಥುರೆಯ ಧರ್ಮಾಂಧತೆಗೆ ಬೇಸತ್ತು ಸಾರ್ವಜನಿಕ ಜೀವನದಲ್ಲಿ ಅವರು ತುಂಬ ಮನಸ್ಸು ಹಾಕಿದ್ದಾರೆ. ಅವರ ತೃಪ್ತಿಯೂ ಆಗ ಬೇಕಲ್ಲ? ಆದರೆ ...ರೋಹಿಣಿದೇವಿಯವರೆ, ತಮ್ಮಲ್ಲಿಯೂ ನನ್ನ ದೊಂದು ಬಿನ್ನಹವಿದೆ.

ರೋಹಿಣಿದೇವಿ—ಅದೇನು, ಕೋಸಲೇಂದ್ರಬಾಬು? ಎಲ್ಲರ ಹೃದ್ಗತವನ್ನು ನೀವು ಹೀಗೆ ನಿಮಿಷಮಾತ್ರದಲ್ಲಿ ತಿಳಿಯುವದನ್ನು ನೋಡಿದರೆ ನನಗೆ ಆಶ್ಚರ್ಯವಾಗುತ್ತದೆ.

ಕೋಸಲೇಂದ್ರ—(ನಗುತ್ತ) ಹೇಳಲು ಒಂದು ನಿಮಿಷ ಹತ್ತಿದರೂ ತಿಳಿಯಲು ಕೆಲವುಕಾಲ ಕಳೆದಿದ್ದೇನೆ, ರೋಹಿಣಿದೇವಿಯವರೆ. ನನ್ನ ಬಿನ್ನಹ ಇದು. ಈಗ ನೀವು ಮೃಣಾಲಿನಿಯನ್ನು ನೋಡಿದ್ದೀರಿ. ಈಕೆ ಮೊದಲಿನ ಮೃಣಾಲಿನಿಯೆ? ಮಾತಿನ ಮಲ್ಲಳಾದ ಈಕೆ ಈಗ ಮೌನದ ಮಾದರಿಯಾಗಿಲ್ಲವೆ?

ರೋಹಿಣಿದೇವಿ—ಹೌದು. ಅದನ್ನೇ ನಾನು ಕೇಳಬೇಕೆಂದಿದ್ದೆ. ತನಗೆ ಮದುವೆ ಬರ್ಜಣವೆಂದು ಮೃಣಾಲಿನಿ ಹೇಳುತ್ತಿದ್ದಳು. ಆದರೆ ಈಗ ಮದುವೆಯಾಗಲು ಮುಂದುವರಿದಿದ್ದಾಳೆ. ಒಂದೊಂದು ಮಾತಿಗೆ ಒಬ್ಬೊಬ್ಬರ ಮನಸ್ಸು ನೋಯಿಸುತ್ತಿದ್ದಳು. ಈಗ ಇನ್ನೊಬ್ಬರು ಕೆಣಕಿದರೂ ಮಾತನಾಡುವದಿಲ್ಲ. ಆಕೆಯ ರೀತಿಯಲ್ಲಿಯೇ ಒಂದು ಕ್ರಾಂತಿಯಾಗಿದೆ.

ಮೃಣಾಲಿನಿ—(ನಗುತ್ತ) ನಾನು ಮಾತನಾಡುವದಾದರೂ ಏನೆಂದು! ನಾನು ಹೇಳಬಹುದಾದುದನ್ನು ಕೋಸಲೇಂದ್ರ ನನಗಿಂತ ಚೆನ್ನಾಗಿ ಹೇಳು ತ್ತಿದ್ದಾನೆ. ನೀವೆಲ್ಲರೂ ನನ್ನನ್ನು ಕೆಣಕುವದನ್ನು ನೋಡಿ ನನಗೆ ಮಾತನಾಡಬೇಕೋ ಸುಮ್ಮನಿರಬೇಕೋ, ನಗಬೇಕೋ ಅಳಬೇಕೋ ತಿಳಿಯದಾಗಿದೆ.

ಕೋಸಲೇಂದ್ರ—(ಮುಗುಳು ನಗೆಯಿಂದ) ಯಾವ ಕಾಲಕ್ಕೆ ಏನು ಮಾಡ ಬೇಕೆಂದು ಪ್ರೇರಣೆಯಾಗುವದೋ ಹಾಗೆ ಮಾಡು, ಮೃಣಾಲಿನಿ. ಆ ಪ್ರೇರಣೆ ನನ್ನ ಹೇಳಿಕೆಯನ್ನೇ ಸಮರ್ಥಿಸುವದು. ರೋಹಿಣಿದೇವಿ

ಯವರೆ! ಮೃಣಾಲಿನಿಯಲ್ಲಿ ಇನ್ನೂ ಒಂದು ಮಾರ್ಪಾಟಾಗಿದೆ. ಮೃಣಾಲಿನಿ ಈಗ ಕಾ:ಮ್ರೇಡ್ ಮೃಣಾಲಿನಿಯಲ್ಲ. ಮಾರ್ಕ್ಸನ ತತ್ವಗಳಲ್ಲಿ ಆಕೆಗೆ ಶ್ರದ್ಧೆಯಿದೆ; ಆದರೆ ಆಕೆಯ ಮಾತು ರೀತಿಯಲ್ಲಿ ಭಾರತಕ್ಕೆ ಒಪ್ಪುವ ನಯವಿನಯವಿದೆ.

ರೋಹಿಣಿದೇವಿ—ನನಗೆ ಒಬ್ಬ ಮಗಳಿದ್ದರೆ ಹೇಗಿರಬೇಕೆಂದುಕೊಂಡಿದ್ದೆನೋ ತದ್ರೂಪ ಹಾಗೆ ಮೃಣಾಲಿನಿ ಇದ್ದಾಳೆ. ಮೃಣಾಲಿನಿಯ ನಾಲಗೆ ಬಲು ಚುರುಕು. ಅದು ಈಗ ಹದಕ್ಕೆ ಬಂದಿದೆ. ಆದರೆ ಆಕೆಯ ಈ ಮಾರ್ಕ್ಸ ತತ್ವಗಳು........

ಕೋಸಲೇಂದ್ರ—(ನಕ್ಕು) ಆ ತತ್ವಗಳಿಗೆ ನೀವು ಹೆದರುವ ಕಾರಣವಿಲ್ಲ, ರೋಹಿಣಿದೇವಿ! ಆ ತತ್ವಗಳೊಡನೆ ಬೇರೆ ತತ್ವಗಳನ್ನೂ ಬೆರೆಸಲು ಮೃಣಾಲಿನಿಯು ಹವಣಿಸಿದ್ದಾಳೆ. ಒಮ್ಮೆ ಆಕೆಯಿಂದ ನೀವು ಪಾಠ ಹೇಳಿಸಿಕೊಳ್ಳಬೇಕು. ಆಗ ಆ ತತ್ವಗಳ ಬಗ್ಗೆ ನಿಮಗಿದ್ದ ಭಯವೂ ಹೋಗುವದು. ನಿಮ್ಮ ಮನಸ್ಸಿನಲ್ಲಿ ಪೂರ್ವಗ್ರಹವಿಲ್ಲವೆಂದು ಆಕೆಗೂ ಸಮಾಧಾನವಾಗುವದು.

ರೋಹಿಣಿದೇವಿ—(ನಗುತ್ತ) ಹಾಗೇ ಆಗಲಿ, ಕೋಸಲೇಂದ್ರಬಾಬು! ಹಾಗಾದರೆ ನಮ್ಮೊಡನೆ ನೈನಿತಾಲಕ್ಕೆ ನೀವಿಬ್ಬರೂ ನಡೆಯಿರಿ. ಅಲ್ಲಿ ಪಾಠ ಸುರುವಾಗಲಿ.

ಕೋಸಲೇಂದ್ರ—ನಾವಿಬ್ಬರೇ ಏಕೆ? ಕಿಶನ್‌ಕಿಶೋರರೂ ರುಕ್ಮಿಣಿದೇವಿಯರೂ ಅಲ್ಲಿಗೆ ಬರುತ್ತಾರೆ. ನೀವು ಮಥುರೆಗಂತೂ ಹೋಗಿಬನ್ನಿರಿ.

ಮೃಣಾಲಿನಿ—ನನ್ನ ಬಗ್ಗೆ ರೋಹಿಣಿಬೆನ್‌ರಲ್ಲಿ ನೀನು ಮಾಡಿದ ಮಧ್ಯಸ್ತಿಕೆಯನ್ನು ಒಪ್ಪಿದೆ, ಕೋಸಲೇಂದ್ರ. ಆದರೆ ಈ ಪಾಠ ಹೇಳುವ ಕೆಲಸವೇಕೆ? (ತುಂಟು ನಗೆಯಿಂದ) ನಾನು ಹೇಳುವ ರೀತಿ ನಿನಗೆ ಒಪ್ಪಿಗೆಯಾಗದಿದ್ದರೆ?

ಕೋಸಲೇಂದ್ರ—ನೋಡೋಣ. ಅದನ್ನೆಲ್ಲ ಹಿಂದಿನಿಂದ ಸರಿಪಡಿಸಿಕೊಳ್ಳಬಹುದು. ರೋಹಿಣಿದೇವಿಯವರೇ, ಈ ಪಾಠದ ವಿಷಯ ನಿಮಗೆ ಒಪ್ಪಿಗೆಯಾಗಿದ್ದು ನನಗೆ ಸಂತೋಷ. ಇನ್ನು ಮುಂದೆ ವಿದ್ಯಾರ್ಥಿನಿಯರ ಸಂಘದಲ್ಲಿ, ಮಹಿಳಾಮಂಡಲದಲ್ಲಿ........

ಕಾಂತಿಚಂದ್ರ—(ಆನಂದದಿಂದ) ತಿಳಿಯಿತು, ಕೋಸಲೇಂದ್ರಬಾಬು! ಕಿಶನ್

ಕಿಶೋರರನ್ನು ನೀವು ಹೇಗೋ ಹಾಗೆ ಮೃಣಾಲಿನಿ ನಮ್ಮನ್ನು ನೋಡಿಕೊಳ್ಳುತ್ತಾಳೆ.

ರೋಹಿಣಿದೇವಿ—(ಉಲ್ಲಸಿತಳಾಗಿ) ಹಾಗಾದರೆ ಈ ಮದುವೆ ನೈನಿತಾಲದಲ್ಲಿಯೇ ಆಗಿಬಿಡಲಿ. ಹುಡಿಗೆಯನ್ನು ಧಾರೆಯೆರೆದು ಕೊಡುವ ಅಧಿಕಾರ ನಮ್ಮದು.

ಕೋಸಲೇಂದ್ರ—(ನಗುತ್ತ) ಆಗಬಹುದು.

ರುಕ್ಮಿಣಿದೇವಿ—ಶುಭದ ಮೇಲೆ ಶುಭ. ದೇವರು ಕಡೆಗೊಮ್ಮೆ ನಮ್ಮ ಮೇಲೆ ಕಣ್ಣು ತೆರೆದ !

[ಬನಸಿಲಾಲನು ಅವಸರದಿಂದ ಪ್ರವೇಶಿಸಿ ಮೂಲೆಯಲ್ಲಿಟ್ಟಿದ್ದ ತನ್ನ ಸಾಮಾನನ್ನು ಆಳುಮಗನಿಂದ ಹೊರಿಸಿಕೊಂಡು ಹೋಗಲು ಬರುತ್ತಾನೆ.]

ಕಿಶನ್‌ಕಿಶೋರ—ಓಹೋ ! ತಮ್ಮ ಗಾಡಿಯ ವೇಳೆಯಾಯಿತೆಂದು ಕಾಣುತ್ತದೆ ! ಇಲ್ಲಿ ಸಾಮಾನು ಇಟ್ಟವರು ತಿರುಗಿ ಬಂದರು........ಯಾರವರು ಪರಿಚಿತರಂತೆ ಕಾಣುತ್ತದೆ. ಓಹೋ, ಕಾಂತಿಚಂದ್ರಜಿ ! ಬನಸಿಲಾಲ ! ಆಸಾಮಿ ಬಹಳ ಅವಸರದಲ್ಲಿದ್ದಂತೆ ಕಾಣುತ್ತದೆ.

(ಎಲ್ಲರೂ ಅತ್ತ ಕಡೆಗೆ ನೋಡುತ್ತಾರೆ.)

ಕಾಂತಿಚಂದ್ರ—(ಸಾವಕಾಶವಾಗಿ) ಅವನನ್ನು ಬರಿ ನೋಡಿದರೂ ಸಹ ನನ್ನ ತಲೆಗೆ ಪಿತ್ತವೇರುತ್ತದೆ.

ರೋಹಿಣಿದೇವಿ—ನಾನು ಹೆಂಗಸು. ಅವನ ಬಾಗಿಲ ವರೆಗೆ ಹೋಗಿ ಬೇಡಿಕೊಂಡೆ. ಆದರೂ ಆ ನೀಚ ತನ್ನ ಹಟ ಬಿಡಲಿಲ್ಲ.

ಕೋಸಲೇಂದ್ರ—ಇಂಥವರ ಬಾಗಿಲಿಗೆ ಹೋಗಬಾರದು, ರೋಹಿಣಿದೇವಿಯವರೆ. ಅವರೇ ನಮ್ಮ ಬಾಗಿಲಿಗೆ ಬರಬೇಕು. ಇನ್ನು ಬನಸಿಲಾಲರ ಮುಖವನ್ನು ಸ್ವಲ್ಪ ಪರೀಕ್ಷಿಸಿರಿ. ಅದು ಹೇಗೆ ಬದಲಾಗುವದೆಂಬ ! (ಗಟ್ಟಿಯಾಗಿ) ಏನು, ಬನಸಿಲಾಲಜಿ ! ಬಹಳ ಅವಸರದಲ್ಲಿದ್ದಂತೆ ಕಾಣುತ್ತದೆ ? ನಮಸ್ತೇ !

ಬನಸಿಲಾಲ—(ತಿರುಗಿ ನೋಡಿ) ಓಹೋ ! ಕೋಸಲೇಂದ್ರಬಾಬು ! ನಮಸ್ತೇ!

(ಕಿಶನ್‌ಕಿಶೋರ ದಂಪತಿಗಳನ್ನೂ ಕಾಂತಿಚಂದ್ರ ದಂಪತಿಗಳನ್ನೂ ನೋಡಿ

ದವನೆ ನೊಣ ಕಡಿದವನಂತೆ) ಓ....ಓ....ಓ....! ಕಾ:ಮ್ರೇಡ್ ಮೃಣಾಲಿನಿಯವರೂ ಇದ್ದಾರೇನು ? ನಮಸ್ತೇ! ಕ್ಷಮಿಸಿರಿ! (ಮುಂಗೈ ಗಡಿಯಾರ ನೋಡುತ್ತ) ಗಾಡಿಯು ಹೊತ್ತಾಯಿತು.

ಕೋಸಲೇಂದ್ರ—(ನಕ್ಕು) ನಿಮ್ಮ ಗಾಡಿ ತಪ್ಪಿಸುವ ಇಚ್ಛೆಯಿಲ್ಲ ನನಗೆ, ಸೇಠಜಿ, ಆದರೆ ಒಂದೇ ಒಂದು ಮಾತು ತಿಳಿಸುವದಿತ್ತು. ಈಗ ನೀವು ಎಲ್ಲಿಗೆ ಹೊರಿಟಿದ್ದೀರಿ ನನಗೆ ಗೊತ್ತು. ಪಂಡಿತ ನೆಹರು ಹಾಗು ವಲ್ಲಭ ಭಾಯಿಯವರ ಭೆಟ್ಟಿಗಲ್ಲವೆ ? ಅಲ್ಲಗಳೆಯುವದೇಕೆ ? ನೀವು ಇಲ್ಲವೆಂದು ತಲೆ ಹಾಕಿದರೂ ಹೌದೆಂದು ನಿಮ್ಮ ಕಣ್ಣು ಹೇಳುತ್ತವೆ. ಆದರೆ ಬರುವಾಗ ರಾಜೇಂದ್ರ ಬಾಬುಗಳನ್ನು ನಾನು ಗಾಡಿಯಲ್ಲಿ ಕಂಡೆ. ಅಸೆಂಬ್ಲಿಗೆ ದಿಲ್ಲಿಯ ಭಾಗದಿಂದ ಅಸಫ್ ಆಲಿಯವರನ್ನು ನಿಲ್ಲಿಸಬೇಕೆಂದು ಗೊತ್ತಾಗಿದೆ.

(ಎಲ್ಲರೂ ವಿಜಯೋತ್ಸಾಹದಿಂದ ಬನಸಿಲಾಲನನ್ನು ನೋಡುತ್ತಾರೆ. ಅವನ ಮೋರೆಯು ಕಪ್ಪಿಡುತ್ತದೆ.)

ಬನಸಿಲಾಲ—ಯಾರನ್ನು ?....ಅ....ಸ....ಫ್ ಆಲಿಯವರನ್ನೊ ?

ಕೋಸಲೇಂದ್ರ—ಹೌದು. ಇನ್ನು ನೀವು ನಿಮಗೆ ಬೇಕಾದ ಪಾರ್ಟಿಯಿಂದ ನಿಲ್ಲಬಹುದು. ಕಾ:ಮ್ರೇಡ್ ಮೃಣಾಲಿಯವರ ಸಹಾಯದಿಂದ-ಅವರ ಮಾರ್ಕ್ಸ ತತ್ವಗಳನ್ನೊಪ್ಪಿ—ವೋಟು ದೊರಕಿಸಬಹುದೆಂದು ನೀವು ತಿಳಿದೀರಿ ಮತ್ತೆ ! ಅದು ಸಾಧ್ಯವಿಲ್ಲ. ಯಾಕೆ, ಮೃಣಾಲಿನಿ ?

ಮೃಣಾಲಿನಿ—(ತುಂಟ ನಗೆಯಿಂದ) ಬನಸಿಲಾಲರಿಗೆ ಜನರಿಂದ ವೋಟು ಬೀಳಲಿಕ್ಕಿಲ್ಲ ; ಏಟು ಬೀಳಬಹುದು.

[ಎಲ್ಲರೂ ನಗುತ್ತಾರೆ.]

ರೋಹಿಣಿದೇವಿ—ಕೋಸಲೇಂದ್ರ ಬಾಬು, ಮೃಣಾಲಿನಿಯು ಮೌನವನ್ನು ಸಾಧಿಸಿರುವದೇನೋ ನಿಜ. ಆದರೆ ಆಕೆಯ ಮಾತಿನ ರೀತಿಯಲ್ಲಿ ಏನೂ ಬದಲಾವಣೆ ಕಾಣುವದಿಲ್ಲವಲ್ಲ ?

ಕೋಸಲೇಂದ್ರ—ಮೊದಲಿನ ಖಾರ ಇನ್ನೂ ಉಳಿದಿರುವದು ನಿಜ. ಆದರೆ ಈಗ ಪ್ರಸಂಗಕ್ಕೆ ತಕ್ಕಂತೆ ಮಾತು ಬರುತ್ತಿದೆ, ರೋಹಿಣಿದೇವಿ. ಒಂದೇ ಪಡಿಯಚ್ಚಲ್ಲ ! (ಬನಸಿಲಾಲನ ಕಡೆಗೆ ತಿರುಗಿ) ಸೇಠಜಿ, ನಿಮ್ಮ ಗಾಡಿಯ

ಹೊತ್ತಾಯಿತು. ನಿಮ್ಮ ಗಾಡಿ ತಪ್ಪಿಸುವ ಇಚ್ಛೆಯಿಲ್ಲ ನನಗೆ.

ಬನಸಿಲಾಲ—ಹ! ಹ! ಹಾಗೇನೂ ಇಲ್ಲ! ಆದರೆ ಈ ವಿಷಯದ ವಿವರಗಳು ಇನ್ನಿಷ್ಟು ತಿಳಿದರೆ........

ಕೋಸಲೇಂದ್ರ—ನೀವು ಊರಿನಿಂದ ತಿರುಗಿ ಬಂದ ಮೇಲೆ ಮಾತನಾಡೋಣ.

ಬನಸಿಲಾಲ—ಹ! ಹ! ನಿಮ್ಮೊಡನೆ ಮಾತಾಡುವದೇ ಮಹತ್ವದ್ದು. ಗಾಡಿ ಇವತ್ತು ತಪ್ಪಿದರೆ ನಾಳೆ ಹತ್ತಿದರೂ ನಡೆದೀತು.

ಕೋಸಲೇಂದ್ರ—(ನಗುತ್ತ) ಹೀಗೋ ಹಾಗಾದರೆ? ಇಂದು ರಾತ್ರಿ ನನ್ನ ಕೋಣೆಗೆ ಬನ್ನಿರಿ.

ಬನಸಿಲಾಲ—ಅವಶ್ಯವಾಗಿ ಬರುತ್ತೇನೆ. ನಮಸ್ತೇ! ನಮಸ್ತೇ, ಮೃಣಾಲಿನಿ ದೇವಿ! ಹ! ಹ! ಹ!

(ಹೋಗುತ್ತಾನೆ.)

ರೋಹಿಣಿದೇವಿ—ಒಳ್ಳೆಯ ಶಾಸನವಾಯಿತು. ಇಂಥವರಿಗೆ ಹೀಗೆಯೇ ಆಗಬೇಕು.

ಕಾಂತಿಚಂದ್ರ—ರಾತ್ರಿ ನಿಮ್ಮ ಕಡೆಗೆ ಬಂದಾಗ ಈ ನಾಗರಿಕ ಸರ್ಪಕ್ಕೆ ಏನು ಹೇಳುತ್ತೀರಿ, ಕೋಸಲೇಂದ್ರಬಾಬು? ಇಂಥವರನ್ನು ನೋಡಿದಾಗ ನನಗೆನಿಸುತ್ತದೆ: ಒಂದೊಂದು ಊರೂ ಇಂದಿಗೆ ಹಾವಿನ ಹುತ್ತಾಗಿದೆ ಎಂದು.

ಕಿಶನ್‌ಕಿಶೋರ—ಹೌದು, ಜಗತ್ತೇ ಇಂಥವರ ಸರ್ಪಗಾವಲಿನಲ್ಲಿ ಸಿಕ್ಕಿದೆ.

ಕೋಸಲೇಂದ್ರ—ಅದು ನಿಜ. ಆದರೆ ಇಂಥವರಿಗೂ ಜಗತ್ತಿನಲ್ಲಿ ಸ್ಥಾನವಿದೆ. ಚಂದ್ರಮೌಳಿಯ ಆಭರಣಗಳಲ್ಲಿ ನಾಗವೂ ಒಂದು ಎಂಬುದನ್ನು ಮರೆಯಬೇಡಿರಿ. ಆದರೆ ದೇವರು ನಾಗಭೂಷಣನಾದಂತೆ ಗರುಡವಾಹನನೂ ಹೌದು. ಒಳಿತು-ಳಿಡಕಿನ ಈ ಚಿರಂತನ ಸಂಗ್ರಾಮದಲ್ಲಿ ಗರುಡಪಕ್ಷಿಗೆ ವಿಜಯವು ಕಟ್ಟಿಟ್ಟದ್ದು.

ರೋಹಿಣಿದೇವಿ—ಇದೆಲ್ಲ ನಿಮ್ಮ ಕಾವ್ಯವಾಯಿತು ಕೋಸಲೇಂದ್ರಬಾಬು! ಅದನ್ನು ನಾನು ಒಪ್ಪುತ್ತೇನೆ. ಆದರೆ ಇಂದು ರಾತ್ರಿ ಆ ಮಹಾನುಭಾವನಿಗೆ ಏನು ಹೇಳುತ್ತೀರಿ? ಅದನ್ನು ತಿಳಿಸಿರಿ.

ಕೋಸಲೇಂದ್ರ—(ನಗುತ್ತ) ಇಂದು ರಾತ್ರಿ, ಬನಸಿಲಾಲನು ಮಾಡಿದ ಮಹಾ

ಕೃತ್ಯಗಳನ್ನೆಲ್ಲ ಅವನೆದುರಿಗೆ ವರ್ಣಿಸುತ್ತೇನೆ. ಹೀಗೆಯೇ ನಡೆದರೆ ನನ್ನ ಹಾಗು ಮೃಣಾಲಿನಿಯ ಸಹಾನುಭೂತಿ ಅವನಿಗೆ ಸಾಧ್ಯವಿಲ್ಲ ವೆಂದು ತಿಳಿಸುತ್ತೇನೆ. ತಿಳುವಳಿಕೆಯಿಂದ ಕ್ರಿಯಾಪೂರ್ಣವಾಗಿ ನಡೆ ದರೆ, ಸಮಾಜದಲ್ಲಿಯೂ ಸ್ಥಾನವಿದೆ ; ಸಂಯುಕ್ತ ಪ್ರಾಂತದ ಕೌನ್ಸಿಲ್ ದಲ್ಲಿಯೂ ಸ್ಥಾನವಿದೆ, ಎಂದು ತಿಳಿಸುತ್ತೇನೆ. ಸಮಾಜದ ಸಫಲತೆ ಯಲ್ಲಿ ಅವನ ಸ್ವಾರ್ಥದ ಸಾಫಲ್ಯವೂ ಅಡಕವಾಗಿದ್ದರೆ, ಅವನಿಗೆ ಅದರಿಂದಲೇ ಸಮಾಧಾನವಾಗುತ್ತಿದ್ದರೆ, ಅದಕ್ಕೆ ನಾವು ಅಡ್ಡಿಬರು ವವರಲ್ಲ ಎಂದು ಹೇಳುತ್ತೇನೆ.

ರೋಹಿಣಿದೇವಿ—ಆಗಬಹುದು ಇದು ನನಗೆ ಸಮ್ಮತ (ಮುಂಗೈ ಗಡಿಯಾರವನ್ನು ನೋಡುತ್ತ) ಆಗಲಿ ಕೋಸಲೇಂದ್ರಬಾಬು ? ಇನ್ನು ನಾವು ಹೊರಡು ತ್ತೇವೆ. ಬನಸಿಲಾಲ ಇಷ್ಟೆಲ್ಲ ಗಡಿಬಿಡಿ ಮಾಡಿದರೂ ಗಾಡಿ ತಪ್ಪಿಸಿ ಕೊಂಡ. ಇನ್ನು ನಾವು ಹೊರಡದಿದ್ದರೆ, ನಮಗೂ ಗಾಡಿ ಸಿಗಲಿಕ್ಕಿಲ್ಲ. ರುಕ್ಮಿಣಿದೇವಿಯವರೆ, ಇನ್ನೊಂದು ವಾರದಲ್ಲಿ ನಾವು ಮಥುರೆಯಿಂದ ಮರಳುತ್ತೇವೆ. ಆಗ ಎಲ್ಲರೂ ನೈನಿತಾಲಕ್ಕೆ ಹೋಗೋಣ, ಮೃಣಾ ಲಿನಿ, ನಿನ್ನ ಪುಸ್ತಕಗಳನ್ನು ತೆಗೆದುಕೊಂಡು ಬರಬೇಕು ನೀನು. ನನ್ನ ಪಾಠ ಅಲ್ಲಿ ಸುರುವಾಗಲಿ.

ಕಾಂತಿಚಂದ್ರ—ಕೋಸಲೇಂದ್ರಬಾಬು ! ನೀವು ನಿಮ್ಮ ಕವನಸಂಗ್ರಹಗಳನ್ನು ತಿನ್ನಿರಿ. ನಿಮ್ಮ ಮಾತನ್ನು ಕೇಳುವದೇ ಒಂದು ಸಮಾಧಾನ. ನಿಮ್ಮ ಕವಿತೆಗಳನ್ನು ಕೇಳಲು ಆತುರನಾಗಿದ್ದೇನೆ.

ರೋಹಿಣಿದೇವಿ—ಬರುತ್ತೇವೆ. ನಮಸ್ತೇ !

ಕಿಶನ್‌ಕಿಶೋರ<br>ರುಕ್ಮಿಣಿದೇವಿ } ನಮಸ್ತೇ !

[ ತೆರೆ. ]

---

## ಪ್ರವೇಶ ೬

(ಕೋಸಲೇಂದ್ರನು ಮನೆಯ ಮುಂದಿನ ತೋಟದಲ್ಲಿ ಅತ್ತಿಂದಿತ್ತ ತಿರುಗಾಡು ತ್ತಿರುತ್ತಾನೆ. ಸಂಜೆಯಾಗಿದೆ. ಪೋಪಟಲಾಲನು ಬರುತ್ತಾನೆ.)

ಪೋಪಟಲಾಲ—ನಮಸ್ತೇ, ಕೋಸಲೇಂದ್ರಜಿ !

ಕೋಸಲೇಂದ್ರ....ನಮಸ್ತೇ ! ಬನ್ನಿರಿ !

ಪೋಪಟಲಾಲ—ನಾನು 'ಹಂಸ' ಪಾಕ್ಷಿಕದ ಪ್ರತಿನಿಧಿ. ತಮ್ಮ ಸಂದರ್ಶನ ತೆಗೆದುಕೊಳ್ಳಬೇಕಾಗಿದೆ. ಯಾವಾಗ ಬಿಡುವಾಗಬಹುದೆಂದು ಕೇಳಲು ಬಂದಿದ್ದೆ.

ಕೋಸಲೇಂದ್ರ—(ಮುಗುಳುನಗೆ ನಕ್ಕು) ನನಗೆ ಬಿಡುವಿರುವದೇ ಕಡಿಮೆ. ಮನೆಯವರೆಲ್ಲ ಮಹಿಳಾಮಂಡಳಕ್ಕೆ ಹೋಗಿದ್ದಾರೆಂದು ಇಲ್ಲಿ ಅಲೆ ದಾಡುತ್ತಿದ್ದೇನೆ. ನನ್ನ ಸಂದರ್ಶನವೇಕೆ ? ನಾನೇನು ಅಂಥ ಅಪರಾಧ ಮಾಡಿದ್ದೇನೆ ? (ನಗುತ್ತಾನೆ.)

ಪೋಪಟಲಾಲ—ದಿಲ್ಲಿಯಲ್ಲಿಯ ಪ್ರಮುಖ ವ್ಯಕ್ತಿಗಳಲ್ಲಿ ನೀವೊಬ್ಬರು. ಸಫಲ ವಾಗುತ್ತಿರುವ ನಿಮ್ಮ ಜೀವನದ ರಹಸ್ಯವನ್ನು ಜನತೆ ತಿಳಿಯಬೇಕು. ಅದಕ್ಕಾಗಿಯೇ !

ಕೋಸಲೇಂದ್ರ—ತಮ್ಮ ಹೆಸರೇನು ?

ಪೋಪಟಲಾಲ—ಪೋಪಟಲಾಲ.

ಕೋಸಲೇಂದ್ರ—ಓಹೋ ! ನೀವು ಪೋಪಟಲಾಲರೋ ? ಕ್ಷಮಿಸಿ. ನಿಮ್ಮನ್ನು ಭೆಟ್ಟಿಯಾಗದೆ ಬಹಳ ದಿನಗಳಾದವು. ಹರಿಜನ ಸಂಘದ ಕಾರ್ಯ ದರ್ಶಿಯಾಗಿದ್ದಿರಿ ನೀವು. ಅಲ್ಲವೆ ?

ಪೋಪಟಲಾಲ—ಹೌದು. ಆದರೆ ಅದು ದ್ವಾಪರ ಯುಗದ ಮಾತು. ನನ್ನ ಸೋದರಮಾವಂದಿರಾದ ಸೇಠ ಬನಸಿಲಾಲರ ಮನೆಯಲ್ಲಿದ್ದಾಗ ಆ ಕಾರ್ಯದರ್ಶಿತ್ವವೂ ನನ್ನ ಕೊರಳಲ್ಲಿ ಬಿದ್ದಿತ್ತು. ಈಗ ಅವರ ಸಂಬಂಧ ಬಿಟ್ಟು ನಾನು ಸ್ವತಂತ್ರ ಜೀವನವನ್ನು ಪ್ರಾರಂಭಿಸಿದ್ದೇನೆ.

ಕೋಸಲೇಂದ್ರ—ನೀವು ಕವಿಗೋಷ್ಠಿಯಲ್ಲಿಯೂ ಒಂದು ಕವಿತೆ ಓದಿದ್ದಿರಿ. ಅಲ್ಲದೆ ನಿಮ್ಮ ಬಗ್ಗೆ ಮೃಣಾಲಿನಿಯೂ.... ಓಹೊ! (ನಾಲಿಗೆ ಕಚ್ಚುತ್ತಾನೆ)

ಪೋಪಟಲಾಲ—ಹೇಳಿರಿ, ಹೇಳಿರಿ ! ಅದಕ್ಕೇಕೆ ಹಿಂಜರಿಯುತ್ತೀರಿ ? ಮೃಣಾ

ಲಿನಿದೇವಿಯವರು ನನಗೊಂದು ಪಾಠ ಕಲಿಸಿದರು. ಅವರು ನನ್ನ ಕಣ್ಣೊಳಗೆ ಹಚ್ಚಿದ ದೀಪದಿಂದ ನನಲ್ಲಿ ಜ್ಞಾನೋದಯವಾಯಿತು. ಈ ಸಂದರ್ಶನದಲ್ಲಿ ನನ್ನ ಸ್ವಂತದ ಲವಲವಿಕೆಯೂ ಇದೆ, ಕೋಸಲೇಂದ್ರಜಿ ! ನಾನು ಕವಿಯಾಗಬೇಕೆಂದು ತೊಳಲಾಡಿದೆ. ನೀವು ಅನಾಯಾಸವಾಗಿ ಕವಿಯಾಗಿದ್ದೀರಿ. ನಾನು ಕಾರ್ಯಕರ್ತನಾಗಬೇಕೆಂದು ತಿಣುಕಾಡಿದೆ. ಅದು ನಿಮ್ಮ ಸಹಜಸಿದ್ಧಿಯಾಗಿದೆ. ಪ್ರೇಮಿಯಾಗಿ ನಾನು ಕಂಗೆಟ್ಟೆ. ನಾನು ತಪಸ್ಸುಗೆಯ್ದರೂ ಪ್ರಸನ್ನವಾಗದ ಪ್ರೇಮವು ನೀವಿದ್ದಲ್ಲಿಯೇ ಬಂದು ನಿಮ್ಮ ಕೊರಳಲ್ಲಿ ಮಾಲೆ ಹಾಕಿತು. ಇದರ ರಹಸ್ಯವನ್ನೆಲ್ಲ ನಾನೂ ತಿಳಿಯಬೇಕಾಗಿದೆ. ಅದು ನನ್ನ ದಾರಿಗೆ ಬೆಳಕಾದೀತು !

ಕೋಸಲೇಂದ್ರ—ಆಗಬಹುದು. ನಥೂರಾಮ್ !

(ಒಳಗಿನಿಂದ ನಥೂರಾಮನು ಬರುತ್ತಾನೆ)

ನಥೂರಾಮ—ಜೀ !

ಕೋಸಲೇಂದ್ರ—ಇಲ್ಲಿ ಒಂದು ಆರಾಮ ಕುರ್ಚಿ ತಂದಿಡು.

(ನಥೂರಾಮ್ 'ಜೀ! ಹಾ!' ಎಂದು ಗಣೆ ಹಾಕಿದ ಆರಾಮ ಕುರ್ಚಿ ತಂದಿಡುತ್ತಾನೆ.)

ಕುಳಿತುಕೊಳ್ಳಿರಿ, ಪೋಪಟಲಾಲ ! ನಾನು ಕೂತು ದಣಿದಿದ್ದೇನೆ. ಹೀಗೆಯೇ ಸ್ವಲ್ಪ ತಿರುಗಾಡುತ್ತೇನೆ.

(ಪೋಪಟಲಾಲ ಕುಳಿತುಕೊಳ್ಳುತ್ತಾನೆ)

ಹೂಂ ! ಇನ್ನು ನಿಮ್ಮ ಪ್ರಶ್ನೆಗಳನ್ನು ಕೇಳಬಹುದು !

ಪೋಪಟಲಾಲ—ಕವಿಯಾಗಬೇಕೆಂಬ ಆಕಾಂಕ್ಷೆ ಎಂದಿನಿಂದ ನಿಮ್ಮಲ್ಲಿ ಉದಯವಾಯಿತು ?

ಕೋಸಲೇಂದ್ರ—ನನ್ನಲ್ಲಿ ಆಕಾಂಕ್ಷೆಯೇ ಇರಲಿಲ್ಲ. ಒಮ್ಮಿಗೆಲೆ ಕವಿತೆಗಳೇ ಉದಯವಾದವು !

ಪೋಪಟಲಾಲ—(ಸಣ್ಣ ಮೋರೆ ಮಾಡಿ) ಇದು ಹೇಗೆ ಸಾಧ್ಯ, ಕೋಸಲೇಂದ್ರಜಿ! ನೀವು ನನ್ನ ಗೇಲಿ ಮಾಡುತ್ತಿದ್ದೀರಿ !

ಕೋಸಲೇಂದ್ರ—ನಿಜವಾಗಿಯೂ ಇಲ್ಲ, ಪೋಪಟಲಾಲ! ಇದ್ದುದನ್ನು ಇದ್ದಂತೆ ಹೇಳುತ್ತಿದ್ದೇನೆ. ಕವಿಯಾಗಬೇಕೆಂದು ನಾನೆಂದೂ ಹಂಬಲಿಸಿದವನಲ್ಲ. ಸುತ್ತಣ ಪರಿಸ್ಥಿತಿಯಿಂದ ಉದ್ರೇಕಗೊಂಡು, ಸುತ್ತಣ ಪ್ರಕೃತಿ ಸೌಂದರ್ಯದಿಂದ ತೂಣಗೊಂಡು, ಒಮ್ಮೊಮ್ಮೆ ಭಾವನಾ ಪರವಶನಾಗುತ್ತಿದ್ದೆ. ಆಗ ಕವಿತೆಗಳು ಲಹರಿ-ಲಹರಿಯಾಗಿ ಮೂಡುತ್ತಿದ್ದವು. ಸ್ನೇಹಿತರಿಗೆ ಅವನ್ನು ಓದಿ ತೋರಿಸಿದಾಗ,—ಅವರೂ ತಲೆದೂಗುತ್ತಿದ್ದರು. ಅವರಲ್ಲಿ ಕೆಲವರು ನನ್ನ ಒಂದೆರಡು ಕವಿತೆಗಳನ್ನು ಮಾಸಿಕ ಪತ್ರಿಕೆಗಳಿಗೆ ಕಳಿಸಿ ಅಚ್ಚಾಗುವಂತೆ ಮಾಡಿದರು. ಆಮೇಲೆ ಸಂಪಾದಕರೇ ನನ್ನ ಬೆನ್ನು ಹತ್ತಿದರು. ಹೀಗಿದೆ ನನ್ನ ಕೀರ್ತಿಯ ಇತಿಹಾಸ. ಈಗೂ ಸಹ ನಾನು ಕವಿಯೆಂದು ಬರೆಯುತ್ತಿಲ್ಲ. ಒಂದು ಸಾಲನ್ನೂ ಸಹ ಬರೆಯದೆ ಒಂದೆರಡು ವರ್ಷಗಳನ್ನು ಕಳೆದಿರುವದುಂಟು.

ಪೋಪಟಲಾಲ—ಕಾವ್ಯದಲ್ಲಿ ನೀವು ಅನುಸರಿಸುತ್ತಿರುವ ಮಾರ್ಗ ಯಾವುದು? ಸಾಂಪ್ರದಾಯಿಕವೋ, ಆಧುನಿಕವೋ, ನವ್ಯವೋ ?

ಕೋಸಲೇಂದ್ರ—(ತಸು ನಕ್ಕು) ನಾನು ನಡೆಯುತ್ತಿರುವದೇ ನನ್ನ ಮಾರ್ಗ! ಸಾಂಪ್ರದಾಯಿಕರಿಗೆ ನಾನು ಆಧುನಿಕ ; ಆಧುನಿಕರಿಗೆ ನವ್ಯ ; ನವ್ಯರಿಗೆ ಸಾಂಪ್ರದಾಯಿಕ !

ಪೋಪಟಲಾಲ—ನೀವು ಬರಿ ಮುಂಡಿಗೆಗಳ ಮಾತನಾಡುತ್ತಿದ್ದೀರಿ ; ನವ್ಯ ಕಾವ್ಯದ ಬಗ್ಗೆ ನಿಮ್ಮ ಅಭಿಪ್ರಾಯವೇನು ?

ಕೋಸಲೇಂದ್ರ—ಓಹೋ ! ನೀವೂ ಇತ್ತೀಚೆಗೆ ನವ್ಯರಾದಂತೆ ಕಾಣುತ್ತದೆ ! ನವ್ಯ ಕಾವ್ಯದ ಕಲ್ಪನೆ ಭವ್ಯವಾಗಿದೆ. ಆದರೆ ಅದರ ಕೃತಿ ಇನ್ನೂ ಅವ್ಯಕ್ತದ ದ್ರವ್ಯವಾಗಿದೆ !

ಪೋಪಟಲಾಲ—ಹೋಗಲಿ ಬಿಡಿರಿ ! ಸಾರ್ವಜನಿಕ ಕಾರ್ಯದಲ್ಲಿ ಸಹ ನೀವು ಧುರೀಣರಾಗಿದ್ದೀರಿ. ಇದು ನಿಮಗೆ ಹೇಗೆ ಸರಿಹೋಗುತ್ತದೆ ?

ಕೋಸಲೇಂದ್ರ—ಅದರ ವಿಚಾರವೂ ಹೀಗೆಯೇ ಇದೆ. ನಾನೆಂದಿಗೂ ಸಾರ್ವಜನಿಕ ಕಾರ್ಯ ಮಾಡಬೇಕೆಂದು ಮುಂದುವರಿದವನಲ್ಲ. ಆದರೆ ಹಿಂದೊಮ್ಮೆ ಸುವರ್ಣಭೂಮಿಯಾದ ಈ ರಾಷ್ಟ್ರದಲ್ಲಿ ನನಗೆ ನೋಡಿದಲ್ಲೆಲ್ಲ ಬರೀ ತಿಪ್ಪೆಗಳೇ ಕಾಣಹತ್ತಿದವು. ಉಪ್ಪರಿಗೆಗಳೆಲ್ಲ ನೀಚತನದ,

ಗರ್ವದ, ವಿಲಾಸದ ತಿಪ್ಪೆಗಳಾಗಿದ್ದವು. ತಿಪ್ಪೆಗಳೆಲ್ಲ ಕುರುಡು ನಂಬಿಗೆಯ, ಅಜ್ಞಾನದ, ಎಲುಬಿನ ಹಂದರವಾದ ಬಡತನದ, ಮಹಾರೋಗದ ಗೊಬ್ಬರಗುಂಡಿಗಳಾಗಿದ್ದವು. ಅಡುಮನೆಯಲ್ಲಿ ಅನಾರೋಗ್ಯಕರ ಆಹಾರದ ತಿಪ್ಪೆ, ದೇವರ ಮನೆಯಲ್ಲಿ ಕಪ್ಪೆಗಳ ಪೂಜಾಮಂತ್ರ, ನಡುಮನೆಯಲ್ಲಿ ಸೋಗಲಾಡಿತನದ ತಿಪ್ಪೆ, ಹಿತ್ತಲದಲ್ಲಿ ಹೇಸಿಗೆ ಹೂವು, ಅಂಗಳದಲ್ಲಿ ಮಂಗಗಳ ಕುಣಿತ, ಪೌರಸಭೆಯಲ್ಲಿ ಮುಳ್ಳುಗಳ್ಳಿಗಳ ಚಕ್ರವ್ಯೂಹ ! ಆಗ ನನಗೆನಿಸಿತು,—ಈ ತಿಪ್ಪೆಗಳನ್ನು ಹೊಲಗಳಿಗೆಲ್ಲ ಎತ್ತಿ ಹಾಕಿ ಗೊಬ್ಬರವಾಗಿಸದೆ,—ಬಾಳುವದು ಸಾಧ್ಯವಿಲ್ಲವೆಂದು ! ಆಗ ಸಲಿಕೆ-ಗುದ್ದಲಿಗಳನ್ನು ಹಿಡಿದು ನಿಂತೆ,—ಹಲಧರ ಬಲರಾಮನಾಗಿ ! ಪೋಪಟಲಾಲ್ ! ನಾನು ಕಾರ್ಯಧುರೀಣನಲ್ಲ. ತಿಪ್ಪೆಗಳನ್ನೆಲ್ಲ ಎಳೆದೊಗೆದು ಇಲ್ಲದಾಗಿಸಲು ಟೊಂಕಕಟ್ಟಿದ ಸ್ವಯಂ ಸೇವಕ ನಾನು !

ಪೋಪಟಲಾಲ—(ಚಪ್ಪಗೊಂಡು) ಕೋಸಲೇಂದ್ರಜಿ ! ನೀವು ಹೇಳುವದೆಲ್ಲ ಹೃದಯಸ್ಪರ್ಶಿಯಾಗಿದೆ, ಸ್ಮರಣೀಯವಾಗಿದೆ. ಈನ್ನೊಂದು ಪ್ರಶ್ನೆ ಕೇಳಬೇಕೆಂದಿದ್ದೇನೆ. ಅದು ಒಂದು ರೀತಿಯಿಂದ ಸ್ವಂತದ ವಿಷಯವಾಗಬಹುದು. ಕೇಳಲೆ ?

ಕೋಸಲೇಂದ್ರ—ಅವಶ್ಯವಾಗಿ. ಸಾರ್ವಜನಿಕರ ಜೀವನ ನನ್ನ ಸೊತ್ತು. ನನ್ನ ಜೀವನ ಸಾರ್ವಜನಿಕರ ಸೊತ್ತು.

ಪೋಪಟಲಾಲ—ಕಾವ್ಯವೆಂದರೆ ಮೃಣಾಲಿನಿದೇವಿಯವರಿಗೆಬರ್ಷಣವಾಗಿತ್ತು. ಅವರು ಕವಿಯಾದ ನಿಮ್ಮನ್ನು ಹೇಗೆ ಮದುವೆಯಾಗಲು ಸಮ್ಮತಿಸಿದರು ?

ಕೋಸಲೇಂದ್ರ—(ತುಸು ನಕ್ಕು) ನಾನು ಮೊದಲೇ ಹೇಳಿದ್ದೇನಲ್ಲ ! ಕವಿತೆಗಳನ್ನು ಬರೆಯುತ್ತಿರುವದೇನೋ ನಿಜ, ಆದರೆ ನಾನು ಕವಿಯಲ್ಲವೆಂದು!

ಪೋಪಟಲಾಲ—ಅವರು ಮಾರ್ಕ್ಸವಾದಿಗಳು. ನೀವು ಆದರ್ಶವಾದಿ. ಅವರನ್ನು ಮತಾಂತರಿಸಲು ಹೀವು ಹೇಗೆ ಸಮರ್ಥರಾದಿರಿ ? ನಾನು ಮಾರ್ಕ್ಸವಾದಿಯಾಗಲು ಒಂಟುಗಾಲ ಮೇಲೆ ಸಿದ್ಧನಿದ್ದೆ. ಆದರೂ ಅವರು ನನ್ನನ್ನು ತ್ಯಜಿಸಿದರು. ಆದರೆ ನಿಮ್ಮನ್ನು ವರಿಸಲು ಅವರು

ಮಾರ್ಕ್ಸವಾದವನ್ನೇ ತ್ಯಜಿಸಿದಂತೆ ಕಾಣುತ್ತದೆ. ಇದು ನನಗೊಂದು ಒಡೆಯದ ಒಗಟವಾಗಿದೆ.

ಕೋಸಲೇಂದ್ರ—ಪ್ರೋಪಟಲಾಲ್ ! ಆದರ ಅರ್ಥವಿಷ್ಟೇ ! ನಾವು ಯಾವ ರಾಜಕೀಯ ಪಕ್ಷದಲ್ಲಿಯೂ ವಾದಿಗಳಾಗಿಲ್ಲ. ಮಾರ್ಕ್ಸವಾದದ ಮೂಲ ಸ್ಫೂರ್ತಿಯಾದ ಕರುಣೆ ಮೃಣಾಲಿನಿಯ ಜೀವನದ ತಿರುಳಾಗಿತ್ತು. ಆದರ್ಶವಾದದ ಗಂಗೋತ್ರಿಯಾದ ಆನಂದ ನನ್ನ ಬಾಳಿನ ಉಗಮವಾಗಿತ್ತು. ಕರುಣೆಯು ಆನಂದವನೊಪ್ಪಿಕೊಂಡಿತು. ಆನಂದವು ಕರುಣೆಯನ್ನು ಅಪ್ಪಿಕೊಂಡಿತು. ಆನಂದ-ಕರುಣೆಗಳು ಹೀಗೆ ಪರಸ್ಪರವಾಗಿ ಪೂರ್ಣವಾದವು. ಇದರಲ್ಲಿ ಆಶ್ಚರ್ಯವೇನು ?

ಪೋಪಟಲಾಲ—ಹೇಳಿರಿ, ಹೇಳಿರಿ ಕೋಸಲೇಂದ್ರಜಿ ! ನಿಮ್ಮ ಮಾತು ಕೇಳಿದಂತೆ ನನಗೆ ದ್ವಿತೀಯ ಜ್ಞಾನೋದಯವಾಗುತ್ತಲಿದೆ. ಇನ್ನೊಂದು ಮಾತು : ಕರ್ಣಕರ್ಕಶವಾಗಿ ಮಾತನಾಡಿ ಮೃಣಾಲಿನಿದೇವಿಯವರು ಇನ್ನೊಬ್ಬರ ಗಾಯದ ಮೇಲೆ ಬರೆ ಕೊಡುತ್ತಿದ್ದರು. ಅವರಲ್ಲಿ ಈ ಪರಿವರ್ತನವಾದುದು ಹೇಗೆ ?

ಕೋಸಲೇಂದ್ರ—ಒಳ್ಳೆಯ ಪ್ರಶ್ನೆ, ಪೋಪಟಲಾಲ್ ! 'ಬರೆ' ಎಂದು ತಿಳಿದುಕೊಂಡಾಗ ಗಾಯವು ಇನ್ನಿಷ್ಟು ರಕ್ತಮಯವಾಗುತ್ತದೆ. ಆದರೆ ಈ ಮಾತು ನೋಯಿಸುವ ಶಲ್ಯವಲ್ಲ, ದುಡುಕುವ ಮನದ ಅನನುಭವಿಕ ರೀತಿಯೆಂದು ತಿಳಿದು ಸುಮ್ಮನಿದ್ದಾಗ ಆ ಮನಸ್ಸಿಗೇ ತನ್ನ ನಿಷ್ಕಾರಣ ಕ್ರೌರ್ಯದ ಅರಿವು ಉಂಟಾಗುತ್ತದೆ. ಆಗ ಪರಿವರ್ತನ ಸಹಜಸಾಧ್ಯವಲ್ಲವೆ ?

ಪೋಪಟಲಾಲ—(ಭಾವನಾಪೂರ್ಣನಾಗಿ) ಹೇಳಿರಿ, ಹೇಳಿರಿ, ಕೋಸಲೇಂದ್ರಜಿ! ಮೃಣಾಲಿನಿದೇವಿಯರ ಪ್ರೇಮ ನಿಮಗೆ ದೊರೆತಿಲ್ಲವೆಂದು ತಿಳಿಯಿರಿ, ಆಗ ನೀವು ಬಾಳುತ್ತಿದ್ದಿರಾ ? ನಿಮ್ಮ ಜೀವನ ಪೂರ್ಣವಾಗುತ್ತಿತ್ತೇ?

ಕೋಸಲೇಂದ್ರ—(ಮುಗುಳ್ನಗೆಯಿಂದ) ಪೋಪಟಲಾಲ್ ! ನಾನು ಮೊದಲೇ ಹೇಳಿದ್ದೇನಲ್ಲ. ನನ್ನ ಜೀವನದಲ್ಲಿ ಆಕಾಂಕ್ಷೆಗಳೇ ಇಲ್ಲ. ಕಾವ್ಯ, ಸಾರ್ವಜನಿಕ ಕಾರ್ಯ, ಪ್ರೇಮ,—ಯಾವುದನ್ನೂ ಬಯಸಿ ನಾನು ಜೋತು ಬಿದ್ದವನಲ್ಲ. ನನ್ನ ಪ್ರೇಮಪೂರ್ಣ ಜೀವನಕ್ಕೆ ಇವತ್ತು

ಒಂದು ವಿಧದ ಸಫಲತೆ ಬಂದಿದೆ, ನನ್ನ ಬಾಳು ಪ್ರೇಮಶೂನ್ಯವಾಗಿ ದ್ದರೆ,--ಆಗೂ ಅದಕ್ಕೆ ಒಂದು ಬಗೆಯ ಭವ್ಯತೆ ಬರುತ್ತಿತ್ತು. **ಅನುಭವವೇ** ನನ್ನ ಜೀವಿತದ ಗುರಿ. ಯಾವ ರಸದ ರೂಪವನ್ನೂ ಅದು ತಾಳಬಹುದು. ಅದರಲ್ಲಿಯೇ ನನ್ನ ವಿಕಾಸವಿದೆ; ನನ್ನ ಆನಂದವಿದೆ. ಜೀವನವು ಒಂದು **ಉಪಾಸನೆ**ಯಾಗಬೇಕು. ಅದು ರೌದ್ರೋಪಾಸನೆಯೋ ಸೌಂದರ್ಯೋಪಾಸನೆಯೋ ಎಂಬುದನ್ನು ಪರಿಸ್ಥಿತಿಯು ನಿರ್ಣಯಿಸುತ್ತದೆ. ಅದು ಉಪಾಸನೆಯೋ ಏನು ಬರಿ ವಾಸನೆಯೋ ಎಂಬುದನ್ನು ನಾವು ನಿರ್ಣಯಿಸುತ್ತೇವೆ. ಒಂದು ಹಳ್ಳಿಯಲ್ಲಿ ಮಾಸ್ತರನಾಗಿ ನಾನು ನನ್ನ ಆಯುಷ್ಯವನ್ನು ಕಳೆಯಬಲ್ಲೆ. ರಾಷ್ಟ್ರಪತಿಯಾಗಿಯೂ ಬದುಕಬಲ್ಲೆ! ಕ್ಷೇತ್ರವನ್ನು ವಿಧಿಯು ನಿರ್ಣಯಿಸುತ್ತದೆ. ನೇಗಿಲದ ಯೋಜನೆ ಯೋಗವೋ ಭೋಗವೋ ರೋಗವೋ ಎಂಬುದನ್ನು ನಾವು ನಿರ್ಣಯಿಸುತ್ತೇವೆ. (ಆವೇಶಪೂರ್ಣನಾಗಿ ತಿರುಗಾಡುತ್ತ) ಹೌದು, ಪೋಪಟಲಾಲ್! ನಾವು ನಿರ್ಣಯಿಸುತ್ತೇವೆ!

(ರುಕ್ಮಿಣಿದೇವಿಯು ಪ್ರವೇಶಿಸುತ್ತಾಳೆ.)

ರುಕ್ಮಿಣಿ—ಏನು, ಕೋಸಲೇಂದ್ರ! ತೋಟದಲ್ಲಿ ತಿರುಗಾಡುತ್ತಿದ್ದೀ! ಮೃಣಾಲಿನಿ ಇನ್ನೂ ಬಂದಿಲ್ಲವೇನು? ಆಕೆ ಹಾಗೂ ರೋಹಿಣಿದೇವಿ ಕೂಡಿ ನನಗಿಂತ ಮೊದಲೇ ಬಂದರಲ್ಲ?

(ರುಕ್ಮಿಣಿದೇವಿಯವರು ಬರುವದನ್ನು ನೋಡಿದಾಕ್ಷಣ ಪೋಪಟಲಾಲನು ಗಾಬರಿಯಾಗಿ ಕುರ್ಚಿಯಿಂದ ಬಿಟ್ಟು ಏಳಲು ಧಡಪಡಿಸುತ್ತಾನೆ. ಆಗ ಬೀಳುವಂತೆ ಝೋಲಿ ಹೊಡೆಯುತ್ತಾನೆ. ಕೋಸಲೇಂದ್ರ ಆವನನ್ನು ಸಾವರಿಸಿ ಹಿಡಿದು ಕೂಡ್ರಿಸುತ್ತಾನೆ. ರುಕ್ಮಿಣಿದೇವಿಯು ಗಾಬರಿಯಾಗಿ ನೋಡುತ್ತ ನಿಲ್ಲುತ್ತಾಳೆ.)

ಕೋಸಲೇಂದ್ರ—(ಗಣೆ ಹಾಕಿದ ಕುರ್ಚಿಯನ್ನು ನಿರೀಕ್ಷಿಸುತ್ತ) ಏ ನಥುರಾಮ್! ಇದೆಂಥ ಕುರ್ಚಿಯನ್ನು ತಂದಿದ್ದೀ! ಹೋಗು! ಇನ್ನೊಂದು ಒಳ್ಳೆಯ ಕುರ್ಚಿಯನ್ನು ತಾ!

(ನಥೂರಾಮ್ ಓಡಿ ಬರುತ್ತಾನೆ.)

ಪೋಪಟಲಾಲ—(ಹೊರಡುವ ತಯಾರಿಯಿಂದ ಎದ್ದು) ಇರಲಿ ಬಿಡಿರಿ, ಕೋಸ

ಲೇಂದ್ರಜಿ ! ಅದು ಅವನ ತಪ್ಪಲ್ಲ. ನನ್ನ ಅಂಜಿಕೆ ಇನ್ನೂ ಕಳೆದಿಲ್ಲ. ನನ್ನ ಮೂಢತೆ ಇನ್ನೂ ತೊಲಗಿಲ್ಲ. ಆದರೂ ಚಿಂತೆಯಿಲ್ಲ. ಮೃಣಾಲಿನಿದೇವಿಯವರು ದಂಡಿಸಿದಾಗ ನನ್ನಲ್ಲಿ ಪ್ರಥಮ ಜ್ಞಾನೋದಯವಾಯಿತು, ಈಗ ನಿಮ್ಮೊಡನೆ ಮಾತನಾಡಿ ನನ್ನಲ್ಲಿ ದ್ವಿತೀಯ ಜ್ಞಾನೋದಯವಾಯಿತು. ಇಂದು ನೀವು ನನಗಿತ್ತ ಕಣ್ಣು ದೇವತೆಗಳ ಕಣ್ಣಾಗಿದೆ, ಕೋಸಲೇಂದ್ರಜಿ ! ಅದೆಂದಿಗೂ ಕುರುಡಾಗಲಾರದು. ಇಂದಿಗೆ ನನ್ನ ಜೀವನಕ್ರಮ ನಿಶ್ಚಿತವಾಯಿತು. ಸಂದರ್ಶನಾರ್ಥವಾಗಿ ಪತ್ರಿಕೆಯ ಪ್ರತಿನಿಧಿಯಾಗಿ ನಾನು ಬಂದಿದ್ದೆ. ಆದರೆ ನನ್ನ ಜೀವನವು ಕೃತಾರ್ಥವಾಯಿತು. ಓರ್ವ ಪ್ರಾಮಾಣಿಕ ಪತ್ರಿಕಾ ಪ್ರತಿನಿಧಿಯಾಗಿ ದಿಲ್ಲಿಯಲ್ಲಿ ನಾನು ಬಾಳುತ್ತೇನೆ. ನಮ್ಮ ಹಳ್ಳಿಗೆ ಹೋಗಿ ಓರ್ವ ಸರಲ, ಮುಗ್ಧ ಕನ್ನೆಯನ್ನು ಲಗ್ನವಾಗಿ ಬರುತ್ತೇನೆ. ಅನುಭವಕ್ಕೇ ನನ ಜೀವನದಲ್ಲಿ ಪಟ್ಟಗಟ್ಟುತ್ತೇನೆ. ಆಮೇಲೆ ಕಾವ್ಯ, ಆಮೇಲೆ ಕಾರ್ಯ! ಬರುತ್ತೇನೆ, ಕೋಸಲೇಂದ್ರಜಿ !

(ನಮಸ್ಕರಿಸಿ ತೆರಳುತ್ತಾನೆ. ಕೋಸಲೇಂದ್ರ-ರುಕ್ಮಿಣಿದೇವಿಯವರು ಒಬ್ಬರನ್ನೊಬ್ಬರು ನೋಡುತ್ತಾರೆ.)

ರುಕ್ಮಿಣಿ—ಇವರು ಯಾರು ಕೋಸಲೇಂದ್ರ ? ವಿಚಿತ್ರ ಪ್ರಾಣಿಯಾಗಿ ಕಾಣುತ್ತಾರೆ !

ಕೋಸಲೇಂದ್ರ—(ಕರುಣಪೂರಿತ ಧ್ವನಿಯಿಂದ) ಹೇಳುತ್ತೇನೆ ಬನ್ನಿರಿ, ರುಕ್ಮಿಣಿದೇವಿ ! ಈ ಜಗತ್ತಿನಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಒಂದೊಂದು ವಿಚಿತ್ರವಾಗಿದ್ದಾನೆ !

(ತೆರಳುತ್ತಾರೆ. ನಥೂರಾಮನು ಕುರ್ಚಿಯನ್ನು ತಗೆದುಕೊಂಡು ಹೋಗುತ್ತಾನೆ.)

---

## ಪ್ರವೇಶ ೭

(ಕೋಸಲೇಂದ್ರ-ಮೃಣಾಲಿನಿಯವರ ಮನೆ. ಮೃಣಾಲಿನಿಯು ಕಸೂತಿ ಹಾಕುತ್ತ ಕುಳಿತಿರುತ್ತಾಳೆ. ಹತ್ತಿರ ಅರ್ಧ ತೆರೆದಿಟ್ಟ ಒಂದೆರಡು ಪುಸ್ತಕಗಳು ಟೇಬಲ್ಲಿನ ಮೇಲೆ ಬಿದ್ದಿರುತ್ತವೆ. ಆಗ ಹೊರಗಿನಿಂದ ನೆಹರು ಶರ್ಟು-ಜಾಕೀಟ ನಲ್ಲಿದ್ದ ಕೋಸಲೇಂದ್ರನು ಪ್ರವೇಶಿಸುತ್ತಾನೆ.)

ಕೋಸಲೇಂದ್ರ—(ಮೃಣಾಲಿನಿಯ ಎದುರು 'ಉಶ್ ಎಂದು ಸೋಫಾದ ಮೇಲೆ ಕೂಡುತ್ತ) ಒಬ್ಬಳೇ ಇದ್ದೀ, ಮೃಣಾಲಿನಿ! ರುಕ್ಮಿಣಿದೇವಿ ಎಲ್ಲಿ ಹೋಗಿದ್ದಾರೆ?

ಮೃಣಾಲಿನಿ—(ಕಸೂತಿಯನ್ನು ಹೆಣೆಯುತ್ತ) ರೋಹಿಣಿಬೆನ್ ಹಾಗು ಅವರೂ ಕೂಡಿ ಮಹಿಳಾ ಸಭೆಗೆ ಹೋಗಿದ್ದಾರೆ.

ಕೋಸಲೇಂದ್ರ—ನೀನಿಲ್ಲದೆ? ನೀನಿಲ್ಲದೆ ಇಂಥ ಸಭೆ ಆಗುವದು ಹೇಗೆ? ನೀನೇಕೆ ಹೋಗಿಲ್ಲ?

ಮೃಣಾಲಿನಿ—(ತುಸು ಕೆಳಗೆ ಮೋರೆ ಮಾಡಿ) ಇಲ್ಲ.

ಕೋಸಲೇಂದ್ರ—(ಸ್ಲಿಪರ್ ತೆಗೆದು ಜಾಕೀಟನ್ನು ತೆಗೆದಿಡುತ್ತ) ಕಿಶನ್‌ಕಿಶೋರರ ಪತ್ರ ಇವತ್ತಾದರೂ ಬಂದಿದೆಯೆ?

ಮೃಣಾಲಿನಿ—(ಟೇಬಲ್ಲಿನ ಮೇಲಿನ ಪತ್ರವನ್ನು ಕೈಚಾಚಿ ಕೊಟ್ಟು) ಹೌದು. ಅವರೂ ಕಾಂತಿಚಂದ್ರರೂ ಕೂಡಿ ಇನ್ನು ಹದಿನೈದು ದಿನಗಳಲ್ಲಿ ಅರುಣಾಚಲದಿಂದ ತಿರುಗಿ ಬರುವದಾಗಿ ಬರೆದಿದ್ದಾರೆ.

ಕೋಸಲೇಂದ್ರ—(ಪತ್ರವನ್ನು ಓದುತ್ತ) ಇದೊಂದು ಒಳ್ಳೆಯದಾಯಿತು. ಅವರ ಜೀವನಕ್ಕೆ ಒಂದು ನೆಲೆ ಹತ್ತಿತು. ಅಲ್ಲವೆ ಮೃಣಾಲಿನಿ?

ಮೃಣಾಲಿನಿ—(ಸುಮ್ಮನೆ ಕಸೂತಿಯ ಕಡೆಗೆ ನೋಡುತ್ತ) ಹೂಂ.

ಕೋಸಲೇಂದ್ರ—(ಗಾಬರಿಯಾಗಿ ಮೃಣಾಲಿನಿಯ ಎದುರಿಗೆ ನಿಂತು ದಿಟ್ಟಿಸಿ ನೋಡುತ್ತ) ಇದೇನು, ಮೃಣಾಲಿನಿ! ಹಾಂ! ಹೂಂ! ಎಂದಿಷ್ಟರ ಮೇಲೆಯೇ ಸಾಗಿಸುತ್ತಿದ್ದೀ! ಮೈಯಲ್ಲಿ ಚೆನ್ನಾಗಿದೆಯಷ್ಟೇ?

ಮೃಣಾಲಿನಿ—ಹೂಂ.

ಕೋಸಲೇಂದ್ರ—(ಗಾಬರಿಯಿಂದ ಆಕೆಯ ಪಕ್ಕದಲ್ಲಿ ಕುಳಿತು) ಇಲ್ಲ, ನಿನ್ನ ಮೈ ಯಲ್ಲಿ ಸರಿಯಿಲ್ಲ. ಇಲ್ಲದಿದ್ದರೆ ನೀನು ಹೀಗೆ ಹೂಂಗೊಡುವದು

ಸಾಧ್ಯವೇ ಇಲ್ಲ. ಡಾಕ್ಟರರನ್ನು ಕರೆಕಳಿಸುತ್ತೇನೆ.

(ಏಳುತ್ತಾನೆ.)

ಮೃಣಾಲಿನಿ—ಏನೂ ಇಲ್ಲ. ಕುಳಿತುಕೋ, ಕೋಸಲೇಂದ್ರ. ಉ ...ಶ್ ! ಅಂ !

ಕೋಸಲೇಂದ್ರ—(ಗಾಬರಿಯಿಂದ) ಇದೇನು, ಮೃಣಾಲಿನಿ ! ಏನೋ ಆಗಿದೆ ! ಓಂಪ್ರಕಾಶ.

(ಏಳುತ್ತಾನೆ.)

ಮೃಣಾಲಿನಿ—(ವ್ಯಥೆಯಲ್ಲಿಯೂ ತುಸು ನಕ್ಕು) ಏನೂ ಇಲ್ಲ ಕೋಸಲೇಂದ್ರ ! ಕುಳಿತುಕೊ. ಕುಳಿತುಕೊಂಡರೆ ಹೇಳುತ್ತೇನೆ.

ಕೋಸಲೇಂದ್ರ—(ಕುಳಿತು ಮೃಣಾಲಿನಿಯ ಕೈಹಿಡಿದು) ಹೇಳು ಹಾಗಾದರೆ.

ಮೃಣಾಲಿನಿ—ವಾಂತಿಯಾಗುವ ಹಾಗಾಗಿ ಕೈಕಾಲು ಹರಿಯುತ್ತವೆ.

ಕೋಸಲೇಂದ್ರ (ಗಾಬರಿಯಿಂದ ಎದ್ದು) ಪಿತ್ತವಾಗಿರಬೇಕು. ಈಗ ಡಾಕ್ಟರೆಡೆಗೆ ...

ಮೃಣಾಲಿನಿ—(ತುಸು ನಕ್ಕು ಕೈಹಿಡಿದು ಕೋಸಲೇಂದ್ರನನ್ನು ಪಕ್ಕದಲ್ಲಿ ಕೂಡಿಸುತ್ತ) ಡಾಕ್ಟರು ಮನೆಗೆ ಬರುವ ಆವಶ್ಯಕತೆಯಿಲ್ಲ, ಕೋಸಲೇಂದ್ರ. ಇನ್ನೊಬ್ಬರು ಯಾರೋ ಇಲ್ಲಿಗೆ ಬರಬೇಕೆಂದಿದ್ದಾರೆ. ಅದಕ್ಕೆ ಹೀಗೆಲ್ಲ ಆಗುತ್ತಲಿದೆ.

ಕೋಸಲೇಂದ್ರ—ಯಾರು ? ಯಾರು ಬರುವವರಿದ್ದಾರೆ ?

ಮೃಣಾಲಿನಿ—(ತುಸು ನಕ್ಕು) ಅವರ ಮೇಲೆ ಸಿಟ್ಟಿಗೆದ್ದೇನು ಪ್ರಯೋಜನ ? ನಿನಗೆ ಮಗನೋ ಮಗಳೋ ಹುಟ್ಟಿ ಬರಬೇಕಾಗಿದೆ, ಕೋಸಲೇಂದ್ರ. ಅದಕ್ಕಾಗಿ ನಾನು ಇಷ್ಟೆಲ್ಲ ತೊಂದರೆಪಡಬೇಕು.

ಕೋಸಲೇಂದ್ರ—ಓ... ....ಹೋ ! ಹೀಗೇನು ! ಮೊದಲೇ ಏಕೆ ಹೇಳಲಿಲ್ಲ, ಮೃಣಾಲಿನಿ ! ನಾನು ಎಷ್ಟು ಗಾಬರಿಯಾಗಿದ್ದೆ ! (ತನ್ನ ಅಜ್ಞಾನಕ್ಕೆ ತಾನೇ ನಗುತ್ತಾನೆ.)

ಮೃಣಾಲಿನಿ—(ನಕ್ಕು) ನಾನು ಹೇಳುವದಕ್ಕಿಂತ ಮೊದಲೇ ನೀನು ಡಾಕ್ಟರೆಡೆಗೆ ಓಡಹತ್ತಿದರೆ ನಾನೇನು ಮಾಡಬೇಕು !

ಕೋಸಲೇಂದ್ರ—ಇದು ರುಕ್ಮಿಣಿದೇವಿಯವರಿಗೆ ಗೊತ್ತಾಗಿದೆಯೋ, ಮೃಣಾಲಿನಿ ? ಕೇಳಿದ ಕೂಡಲೆ ಅವರು ಕುಣಿದಾಡುವರು.

ಮೃಣಾಲಿನಿ—ಅವರು ಕುಣಿದಾಡುವದರಲ್ಲಿಯೋ ನಾನು ಒದ್ದಾಡುವ ಪ್ರಸಂಗ ಬಂದಿದೆ, ಕೋಸಲೇಂದ್ರ. ನೀವು ಗಂಡಸರು ಬಲು ಸ್ವಾರ್ಥಿಗಳು. ಹೆಣ್ಣು ಮುಂಮುಂದು ಸಮಾಜದಲ್ಲಿ ಕೆಲಸ ಮಾಡುವದು ನಿಮಗೆ ಸರಿ ಬರುವದಿಲ್ಲ.

ಕೋಸಲೇಂದ್ರ—ಅದೇಕೆ, ಮೃಣಾಲಿನಿ ?

ಮೃಣಾಲಿನಿ—ಏಕೆಂದರೇನು ? ಇನ್ನು ರುಕ್ಮಿಣಿದೇವಿಯವರ ಸಲುವಾಗಿ ಒಂಬತ್ತು ತಿಂಗಳು ನಾನು ಮನೆಯಲ್ಲಿ ಕೂಡಬೇಕು. ಇಲ್ಲದಿದ್ದರೆ ಸಭೆಗಳಿಗೆ ಹೋಗಿ ಮಾತನಾಡುವಾಗ ಈ ಪ್ರದರ್ಶನ ಮಾಡಲಿಕ್ಕಾದೀತೆ ! ರುಕ್ಮಿಣಿದೇವಿಯವರದೇನು ಹೋದೀತು ! ಎಲ್ಲರಂತೆ ವರ್ಷಕ್ಕೊಂದು ಹೆರುವ ಹೆಣ್ಣಾಗಿ ಸಣ್ಣ ಮರಿಗಳ ಗುಂಪನ್ನೇ ಬೆನ್ನುಹಚ್ಚಿಕೊಂಡು ತಿಪ್ಪೆಯ ಮೇಲೆ ತಿರುಗಾಡುವ ಹೆಣ್ಣು ಗೋಳಿಯಂತೆ ಕೊಕ್! ಕೊಕ್ ! ಎಂದು ನಾನೂ ಕೊಕ್ಕರಿಸಿದರೆ ಅವರಿಗೆ ಬಹಳ ಸಂತೋಷ.

ಕೋಸಲೇಂದ್ರ—(ನಗುತ್ತ) ಆದರೆ ಒಂದು ಗಂಡು, ಒಂದು ಹೆಣ್ಣು, ಹೀಗೆ ಎರಡು ಮಗು ಬೇಕೆಂದು ನೀನೇ ಹೇಳಿರುವಿಯಲ್ಲ. ಕೆಲವು ವರ್ಷಗಳ ನಂತರ ಆಗುವದಕ್ಕಿಂತ ರುಕ್ಮಿಣಿದೇವಿಯವರ ಸಲುವಾಗಿ ಈಗ ಆಗಿ ಬಿಡಲಿ ಎಂದು ನಾನು ಹೇಳಿದ್ದು ನಿಜ. ಆದರೆ ಅದರಿಂದ ನಿನಗೇನು ಆತಂಕ ? ಸಾರ್ವಜನಿಕ ಜೀವನದಿಂದ ನಿಸರ್ಗವೇ ಕೆಲವು ತಿಂಗಳು ರಜೆ ಕೊಟ್ಟಿದ್ದಕ್ಕೆ ನೀನು ಆನಂದಪಡಬೇಕು. ನೀನು ಕೋಸಲೇಂದ್ರನಾಗಿ ನಾನೇ ಮೃಣಾಲಿನಿಯಾಗಿದ್ದರೆ ಆಯುಷ್ಯದಲ್ಲಿ ನಾವು ಲೆಕ್ಕ ಹಾಕಿದ್ದ ಈ ಎರಡು ದೊಡ್ಡ ರಜೆಗಳನ್ನು ನಾನು ಸಂತೋಷದಿಂದ ಸ್ವಾಗತಿಸುತ್ತಿದ್ದೆ.

ಮೃಣಾಲಿನಿ—ಹಾಗಾದರೆ ನನಗೊಂದು ಬಯಕೆಯಾಗಿದೆ, ಕೋಸಲೇಂದ್ರ ! ನೀನೇ ಮೃಣಾಲಿನಿಯಾಗು, ನಾನು ಕೋಸಲೇಂದ್ರನಾಗುತ್ತೇನೆ. ಈ ಎಲ್ಲ ಭಾರವನ್ನು ನಿನ್ನ ಮೇಲೆ ಹಾಕಿ ನಿಶ್ಚಿಂತಳಾಗಿರುತ್ತೇನೆ.

ಕೋಸಲೇಂದ್ರ—(ನಗುತ್ತ) ಹಾಗೆ ನಾವಿಬ್ಬರೂ ಅದಲುಬದಲಾಗದಿದ್ದರೆ

ನಮ್ಮ ಪ್ರೀತಿ ಎಲ್ಲಿ ಕೂಡುತ್ತಿತ್ತು, ಮೃಣಾಲಿನಿ! ಮಗನ ಮಾತೆ ಯಾಗುವದೆಂದರೆ, ಪೆನ್‌ಶನ್ ತೆಗೆದುಕೊಂಡಂತೆ ಎಂದು ನೀನೇಕೆ ತಿಳಿಯುತ್ತಿ!

ಮೃಣಾಲಿನಿ—(ಪುಲಕಿತಳಾಗಿ) ನೀನೆನ್ನುವದೂ ನಿಜ, ಕೋಸಲೇಂದ್ರ! ಒಮ್ಮೊಮ್ಮೆ ಹೀಗೆಯೇ ಧೇನಿಸುತ್ತ ಕುಳಿತಾಗ, ಅಣುವೊಂದು ಪಿಂಡ ವಾಗಿ ಒಂದು ಮೊಂಡ ಶಿಲೆಯ ಮೇಲೆ ಒಡಮೂಡಿದ ಮೂರ್ತಿಯಂತೆ ಆ ಪಿಂಡವೇ ಒಂದು ಮಗುವಾಗಿ ಪರಿಪೂರ್ಣ ವಿಕಸನವನ್ನೆಲ್ಲ ಪಡೆ ಯುವದೆಂದರೆ, ಮಹಾದ್ಭುತವಾಗಿ ಕಾಣುತ್ತದೆ. ಈ ಅದ್ಭುತದ ಪ್ರಯೋಗ ನಡೆದಿರುವ ಪ್ರಯೋಗ ಶಾಲೆ ನಾನು!....ಆದರೆ, ಕೋಸ ಲೇಂದ್ರ! ನಿನಗೆ ಪುತ್ರೋತ್ಸವವಾಗುವದೆಂದೇ ನೀನು ನಿರ್ಧರಿಸಿದಂತೆ ಕಾಣುತ್ತದೆ. ಮಗ, ಮಗ, ಎಂದು ಕನವರಿಸುತ್ತೀ. ಹುಟ್ಟಿದ ಮಗು ಮಗಳಾದರೇನು ಮಾಡುತ್ತೀ?

ಕೋಸಲೇಂದ್ರ—ನನ್ನಲ್ಲಿ ಅಂಥ ಪಕ್ಷಪಾತವೇನೂ ಇಲ್ಲ, ಮೃಣಾಲಿನಿ. ಮಗಳು ಹುಟ್ಟಿದರೆ ನಾನು "ಫೇಡೆ" ಹಂಚುತ್ತೇನೆ. ಮಗ ಹುಟ್ಟಿದರೆ ನೀನು "ಬರ್ಫಿ" ಹಂಚು. ಈಗಾದರೂ ಆಯಿತೆ?....ಒಟ್ಟಾರೆ ನೀನೇ ದೈವಶಾಲಿ, ಮೃಣಾಲಿನಿ! ನೀನು ಬಯಸುವಂತೆ ನೀನೇ ಕೋಸಲೇಂದ್ರ ನಾಗಿದ್ದರೆ, ಅದೆಷ್ಟು ಸಮಸ್ಯೆಗಳನ್ನು ಎದುರಿಸಬೇಕಾಗುತ್ತಿತ್ತು!

ಮೃಣಾಲಿನಿ—ಯಾವ ಸಮಸ್ಯೆಗಳು, ಕೋಸಲೇಂದ್ರ?

ಕೋಸಲೇಂದ್ರ—ಒಂದೇ! ಎರಡೇ! ಈಗ ನೋಡು. ನಮ್ಮ ಸಾದಾ ಜೀವನ ರುಕ್ಮಿಣಿದೇವಿಯರಿಗೆ ಮನಸ್ಸು ಬರುವದಿಲ್ಲ. ಇದ್ದುದನ್ನೆಲ್ಲ ಬಡವರಿಗೆ ಕೊಟ್ಟು ಬಡವರಂತೆ ಬಾಳುವದರಲ್ಲಿ ಏನು ಸಾರ್ಥಕತೆಯಿದೆ? ಎಂದು ಅವರು ಕೇಳುತ್ತಾರೆ.

ಮೃಣಾಲಿನಿ—ಅದರಲ್ಲೇನಿದೆ? ಅವರ ಹಣಕ್ಕೆ ನಾವು ಕೈ ಹಾಕಿಲ್ಲವಲ್ಲ? ನಮ್ಮ ಬರವಣಿಗೆಯಿಂದ ನಮ್ಮ ಜೀವಿತ ಸಾಗಿದೆ. ನೀನು ಇದನ್ನು ಸಮಸ್ಯೆಯೆಂದು ತಿಳಿಯಬೇಕಾಗಿಲ್ಲ. ರುಕ್ಮಿಣಿದೇವಿಯವರೊಡನೆ ಅದ ನ್ನೆಲ್ಲ ಸರಿಪಡಿಸುತ್ತೇನೆ.

ಕೋಸಲೇಂದ್ರ—ಇನ್ನು ದೇಶದ ಕಡೆಗೆ ಹೊರಳಿದರೆ, ಭಾರತವೇನೋ ಸ್ವತಂತ್ರ

ವಾಗಿದೆ. ಆದರೆ ಅದರ ಅತಂತ್ರ ಸ್ಥಿತಿ ಮಾತ್ರ ಹಾಗೆಯೇ ಉಳಿದಿದೆ. ಅಜ್ಞಾನ, ದ್ವೇಷ, ಸ್ವಾರ್ಥ....

ಮೃಣಾಲಿನಿ—ಇದು ನಿನ್ನೊಬ್ಬನ ಸಮಸ್ಯೆಯಲ್ಲ. ಎಲ್ಲರ ಸಮಸ್ಯೆ. ಎಲ್ಲ ತ್ಯಾಗಕ್ಕೆ ಸಿದ್ಧರಾಗಿದ್ದೇವೆ. ಅದೇ ನಮ್ಮ ಸಮಾಧಾನ.

ಕೋಸಲೇಂದ್ರ—ಒಮ್ಮೊಮ್ಮೆ ನಾನು ಮಾಡುತ್ತಿರುವ ಈ ಸೇವೆಯನ್ನು ಸಹ ಮಂಜು ಕವಿಯುತ್ತಿದೆ. ಈ ಪೀಳಿಗೆಗಾಗಿ ಸಂಸ್ಥೆಗಳನ್ನು ಕಟ್ಟಬೇಕೋ ಇಲ್ಲವೆ ಒಟ್ಟು ಜನಾಂಗದ ಏಳಿಗೆಗಾಗಿ ಕವನಗಳನ್ನು ಕಟ್ಟಬೇಕೋ? ಎರಡನ್ನೂ ಮಾಡಲು ಹೋಗಿ ಈ ಎರಡೂ ಕೆಲಸ ಅಪೂರ್ಣವಾಗುತ್ತವೆ.

ಮೃಣಾಲಿನಿ—(ನಸುನಕ್ಕು) ಒಮ್ಮೊಮ್ಮೆ ನನ್ನಂತಹ ಸಾಮಾನ್ಯರ ಬುದ್ಧಿಯೂ ನಿನ್ನಂಥ ಪ್ರತಿಭಾಶಾಲಿಗಳಿಗೆ ಉಪಯೋಗವಾಗುವದು ಕೋಸಲೇಂದ್ರ! ವಿಚಾರ ಮಾಡು. ಈ ಎರಡೂ ಕೆಲಸಗಳ ಅಪೂರ್ಣತೆಯಲ್ಲಿಯೇ ನಿನ್ನ ಪೂರ್ಣತೆಯಿದೆ; ನಿನ್ನ ಜೀವಿತಕ್ಕೆ ಬೇಕಾದ ವೈಶಾಲ್ಯವಿದೆ. ವ್ಯಕ್ತಿತ್ವದ ತಿರುಳನ್ನೆಲ್ಲ ಜೀವಿತಕ್ಕೆ ತಿರುಗಿಸುವದೇ ಪೂರ್ಣತೆಯ ಕುರುಹು. ಇದನ್ನುಳಿದ ಪೂರ್ಣತೆ ಯಾವದು ?

ಕೋಸಲೇಂದ್ರ—(ಸಂತುಷ್ಟನಾಗಿ ಮೃಣಾಲಿನಿಯ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು) ನನ್ನ ಜೀವನದಲ್ಲಿ ಇನ್ನೂ ಒಂದು ಪೂರ್ಣತೆ ಇದೆ. ಅದು ನಿನಗೆ ಗೊತ್ತಿದೆಯೇ ?

ಮೃಣಾಲಿನಿ—ಅದಾವುದು ಕೋಸಲೇಂದ್ರ ?

ಕೋಸಲೇಂದ್ರ—ನಾನೂ ನೀನೂ ಬೆರತು ನಮ್ಮ ಈ ಚಿಕ್ಕ ಸಂಸಾರದ ಅರ್ಧ ನಾರೀನಟೇಶ್ವರನಾಗಿರುವದು.

ಮೃಣಾಲಿನಿ—(ತುಸು ನಕ್ಕು) ಅದೆಲ್ಲ ಕವಿಯಾದ ನಿನಗೇ ಗೊತ್ತು. ಮಾರ್ಕ್ಸ ವಾದಿಯಾದ ನಾನೇನು ಬಲ್ಲೆ.

ಕೋಸಲೇಂದ್ರ—ಆದರೆ ಈ ಮಾರ್ಕ್ಸವಾದಿಯೂ ಆಗೀಗ ನನ್ನ ಕವನ ಗಳನ್ನು ಓದುತ್ತಾಳಲ್ಲ.

ಮೃಣಾಲಿನಿ—(ನಕ್ಕು) ಲದು ನಿಜ. ಓದಬೇಕೆಂದೇ ಕೈ ಹಿಡಿದಿದ್ದಾಳೆ.

ಕೋಸಲೇಂದ್ರ—ಮಾತಿನಲ್ಲಿ ನೀನೆಂದಿಗೂ ಸೋಲಲಿಲ್ಲ, ಮೃಣಾಲಿನಿ !.... ಎಲ್ಲಿ, ನೋಡೋಣ. ಈಗ ನನಗೆ ಬಹಳ ಆಯಾಸವಾಗಿದೆ. ನನ್ನ

ಒಂದು ಕವನವನ್ನು ನೀನು ಆಗೀಗ ಅಂದುಕೊಳ್ಳುತ್ತೀಯಲ್ಲ. ಅದನ್ನು ಹೇಳು, ಮೃಣಾಲಿನಿ. ಕೇಳುತ್ತ ಸುಮ್ಮನೆ ಇಲ್ಲಿ ಒರಗಿರುತ್ತೇನೆ.

[ಕೋಸಲೇಂದ್ರ ಕುಳಿತಲ್ಲಿಯೇ ಸೋಫಾದ ಮೇಲೆ ಹಿಂದಕ್ಕೆ ಕಣ್ಣು ಮುಚ್ಚಿಕೊಂಡು ಒರಗುತ್ತಾನೆ. ಅವನ ಮುಂಗುರುಳನ್ನು ತೀಡುತ್ತ ಮೃಣಾಲಿನಿಯು ಕವನವನ್ನು ಹೇಳುತ್ತಾಳೆ.]

ಒಂದು ಹೂವು, ಒಂದು ಹಣ್ಣು ;
ಅದನು ನೋಡುತಿರುವ ಕಣ್ಣು ;
ಕಣ್ಣನರಳಿಸಿರುವ ಮನ
ಮನವ ಮಾಗಿಸಿರುವ ಘನ :
ಇದೇ ಇದೇ ಜೀವನ.
ಎಂದೆಂದಿಗು ಪಾವನ.

ಒಂದು ದಿನ, ಒಂದು ಕ್ಷಣ ;
ಕಾಲಶರಧಿಯೊಂದು ಕಣ ;
ಅದಿರಲಿ ನವರಸದ ಛಂದ ;
ರಸದಾಚೆಗೆ ಘನಾನಂದ ;
ಇದೇ, ಇದೇ ಜೀವನ.
ಎಂದೆಂದಿಗು ಪಾವನ.

ಸ್ಥಿರೆಯಲಿ ಜಂಗಮದ ಸುಳಿವು ;
ಸುಳಿವಿನೊಳಾತುಮದ ಹೊಳವು ;
ಸಂತತ ಸಂಧಾವನ ;
ಭವ್ಯ ದಿವ್ಯ ಭಾವನಾ :
ಇದೇ, ಇದೇ ಜೀವನ.
ಎಂದೆಂದಿಗು ಪಾವನ.

(ತೆರೆ.)

---

# ಜನನಾಯಕ

*"Home is the sailor, home from sea*
*And the hunter home from the hill"*

# ಪಾತ್ರಗಳು

ಹಣಮಪ್ಪ ದೇಸಾಯರು

| | | |
|---|---|---|
| ಚಿಕ್ಕ ಶ್ರೀಮಂತ | .... | ದೇಸಾಯರ ಮಗ |
| ರಾಮಣ್ಣನವರು | .... | ಇಳಿವಯಸ್ಸಿನ ಕಾರಭಾರಿಗಳು |
| ಸಣತಮ್ಮ | .... | ಕಾರಕೂನ |
| ಗಂಗಜ್ಜ | .... | ದೇಸಾಯರ ಆಳುಮಗ |
| ಭೀಮಣ್ಣನಾಯಕ | .... | ಪ್ರಮುಖ ನಾಗರಿಕ |
| ಸುಭದ್ರಾಬಾಯಿ | .... | ನಾಯಕನ ಧರ್ಮಪತ್ನಿ |
| ಲಕ್ಷ್ಮಮ್ಮ | .... | ನಾಯಕನ ತಾಯಿ |
| ಸಿದರಾಮಸೆಟ್ಟಿ | .... | ನಾಯಕನ ಸ್ನೇಹಿತ |
| ಕರಿಯ | .... | ನಾಯಕನ ಸೇವಕ |

ಕಮೀಶನರರು, ಚಪ್ರಾಸಿ, ಇಂಚಲಾಪುರದ ರೇವಣ್ಣ,
ಇಬ್ಬರು ಆಳುಮಕ್ಕಳು, ಡಂಗುರದವ, ಮೂವರು
ನಾಗರಿಕರು, ಮುದುಕ ಪೂಜಾರಿ, ಜನರು,
ಇತ್ಯಾದಿ, ಇತ್ಯಾದಿ.

---

**ಸ್ಥಳ** : ದೇಸಾಯರ ಜಾಗೀರಾದ ಬೇವಿನಹಳ್ಳಿ ; ಹಾಗು ಹಳ್ಳಿಯ ಹತ್ತಿರವಿದ್ದ ಇಂಚಲಾಪುರ.

**ಕಾಲ** : ಅನತಿದೂರ ಭೂತ, ಇಲ್ಲವೆ ವರ್ತಮಾನಕಾಲ.

---

# ಅಂಕ ೧

## ಪ್ರವೇಶ ೧

(ಬೇವಿನಹಳ್ಳಿಯ ಒಂದು ರಸ್ತೆ. ಡಂಗುರದವನು ಹಲಗೆ ಬಾರಿಸುತ್ತ ಬರುತ್ತಾನೆ.)

ಡಂಗುರದವ—ಕೇಳ್ರಿಪ್ಪೋ ಕೇಳ್ರಿ: ಸರಕಾರದ ಡಂಗುರ! ಮದುವಿ, ಮುಂಜ್ವಿ, ಜಾವಳ, ನಿಬ್ಬಣ.. ಏನಾದರೂ ನಾಜೂಕಾಗಿ ಆಗಬೇಕು. ಅಂದರ ಮೆರವಣಿಗಿ ತಗದಾಗ, ಹುಕುಮಿಲ್ಲದ ಹಿಲಾಲು ಹಚ್ಚಬಾರದು. ಸರಕಾರದ ಅಪ್ಪಣಿಲ್ಲದೆ ಹಗಲು ದೀವಟಿಗಿ ಆಗಲಿ, ರಾತ್ರಿ ಹಿಲಾಲು ಆಗಲಿ—ಏನೂ ಹಚ್ಚಸಬಾರದು. ಒಂದು ವ್ಯಾಳೇಕ ಹಚ್ಚಿದರ ಆಸ್ತೀ ಜಪ್ತಾಗಿ ಬಿಟ್ಟೇತು, ಕೇಳ್ರಿಪ್ಪೋ ಕೇಳ್ರಿ . . .

(ಡಂಗುರ ಹೊಡೆಯುತ್ತ ತಿರುಗಾಡುತ್ತಾನೆ. ಆಗ ಪಕ್ಕದಿಂದ ಭೀಮಣ್ಣ ನಾಯಕರ ಆಳುಮಗ ಕರಿಯಪ್ಪನು ಪ್ರವೇಶಿಸುತ್ತಾನೆ.)

ಕರಿಯ—ಏನಪಾ! ಮತ್ತೇನದು ಡಂಗುರ? ಬೆಳಗಾಗೊ ಪುರುಸೊತ್ತಿಲ್ಲ; ಹೊಡಿಲಿಕ್ಕೆ ಹತ್ತಿದ ನನ ಮಗ. ಕೇಳಿ ಕೇಳಿ ಕಿವಿ ಕಿವುಡು ಆಗ್ಯಾವು!

ಡಂಗುರದವ—ಕೇಳ್ರಿಪ್ಪೋ ಕೇಳ್ರಿ. ಸರಕಾರದ ಡಂಗುರ!

ಕರಿಯ—ಯಾರ ಡಂಗುರ?

ಡಂಗುರದವ—ಸರಕಾರದ ಡಂಗುರ.

ಕರಿಯ—ಏನದು ಹೊಡಿ ನೋಡೋಣ?

ಡಂಗುರದವ—ಇದು ನೋಡು, ಹಲಗಿ ಹೊಡಿತೇನಿ ನೋಡು. (ಬಾರಿಸುವನು)

ಕರಿಯ—ಹಲಗಿ ಗೊತ್ತಿಲ್ಲೇನೋ ನನಗ? ಮಲಗಿ-ಗಿಲಗೀಯೇನು? ಹೊಡಿ ನೋಡೋಣ ಡಂಗುರ!

ಬಾ, ಹಾಕು ರಿಂಗಣ
ಗಗನದಂಗಣ—ದಾಗ.

ಡಂಗುರದವ—ಹಾಡಬ್ಯಾಡ ತಡಿಯಪ್ಪೋ. ಡಂಗುರಾನ ಹೊಡಿತೇನಿ ಕೇಳ್ರಿಪ್ಪೋ ಕೇಳ್ರಿ, ಸರಕಾರದ ಡಂಗುರ: ಮದುವಿ, ಮುಂಜ್ವಿ ಜಾವಳ ನಿಬ್ಬಣ-ಏನಾದರೂ ನಾಜೂಕಾಗಿ ಆಗಬೇಕು.

ಕರಿಯ—ಏ ! ಡಂಗುರ ! ತಡಿ ! ತಡಿ ! ಇದು ನಿನ್ನ ಡಂಗುರೋ ? ಸರಕಾರದ ಡಂಗುರೊ ?

ಡಂಗುರದವ—ಸರಕಾರದ ಡಂಗುರ. ಬೇವಿನಹಳ್ಳಿ ಯಜಮಾನರ ಡಂಗುರಪಾ ! ಯಾರು ನೀನು ?

ಕರಿಯ—ಮತ್ತ ನಿಮ್ಮ ಸರಕಾರ ಬಾಳೇವು ಮಾಡಬಾರದು ಅಂತದೋ ಏನು. ನಮಗ ? ಏನಂತದ ನಿಮ್ಮ ಸರಕಾರ ? ಊರಾಗಿನ ಹೆಣ್ಣೆಲ್ಲಾ ತನ್ನ ಪದರಿನ್ಯಾಗ ಬೀಳಬೇಕು ಅಂತದೋ ಏನು ?

ಡಂಗುಗದವ—ಹಂಗ ಯಾರ ಹೇಳಿದರಪಾ ! ತುಸು ನೆಪ್ಪಿನ್ಯಾಗ ಇಡು. 'ಮದುವಿ, ಮುಂಜ್ವಿ, ಜಾವಳ, ನಿಬ್ಬಣ-ಏನಾದರೂ ನಾಜೂಕಾಗಿ ಆಗಬೇಕು.' ಅಂತ ಡಂಗುರ್ರೈತಿ,-ಗೊತ್ತಾತs ?

ಕರಿಯ—ಮತ್ತ ಇದೆಲ್ಲಾ ನಾಜೂಕಾದರ ಉಳಿತೇನು ಬಾಳೇವು ?

ಡಂಗುರದವ—ನಿನ್ನ ಕೂಡ ಹಾಕ್ಯಾಡಾಕ ನನಗೆಲ್ಲೈತಿ ವ್ಯಾಳೇವು ? ಮದುವಿ ಮಾಡಬಾರದಂತ ಎಲ್ಲಿ ಹೇಳ್ಯೈತೋ, ಸರಕಾರ ? ಇನ್ನೊಮ್ಮೆ, ಒಪ್ಪಸತೇನಿ ಕೇಳು. 'ಕೇಳ್ರಿಪ್ಪೋ ! ಕೇಳ್ರಿ ! ಸರಕಾರದ ಡಂಗುರ ! ಮದುವಿ, ಮುಂಜ್ವಿ, ಜಾವಳ ನಿಬ್ಬಣ-ಏನಾದರೂ ನಾಜೂಕಾಗಿ ಆಗಬೇಕು. ಅಂದರ, ಮೆರವಣಿಗಿ ತಗದಾಗ ಹುಕುಮಿಲ್ಲದ ಹಿಲಾಲು ಹಚ್ಚಬಾರದು. ಸರಕಾರದ ಅಪ್ಪಣಿ ಇಲ್ಲದ ಹಗಲು ದೀವಟಗಿ ಆಗಲಿ, ರಾತ್ರಿ ಹಿಲಾಲು ಆಗಲಿ,—ಏನೂ ಹಚ್ಚಸಬಾರದು. ಹೂಂ. ಈಗೇನು ಕೇಳತೀ ಕೇಳಪಾ.

ಕರಿಯ—ಅಂದರೇನು ? ಮದುವಿ, ಮುಂಜ್ವಿ ಆದರೇನು ಅಡ್ಡಿ ಇಲ್ಲಾ. ಆಗ ಹಿಲಾಲ ಮಾತ್ರ ಹಚ್ಚಸಬಾರದು ಅಂತೀಯೇನು ನೀನು ?

ಡಂಗುರದವ—ಹಾ ! ಹಿಂಗ ಅಂತೈತಿ ನೋಡು ಸರಕಾರ !

ಕರಿಯ—ಮತ್ತ ಹಂಗ ಯಾಕ ಡಂಗುರ ಹೊಡಿಯುದುಲ್ಲೋ, ಕುರುಬ ! ಹಿಲಾಲು ಹಚ್ಚಬಾರದು ಅಂಬೋ ನ್ಯಾಯಕ್ಕ ದಲಾಲಿ ಅಷ್ಟು ಕೂಡಸತೀಯಲ್ಲ ನೀನು !

ಡಂಗುರದವ—ಮತ್ತ ಇನ್ನ ಹ್ಯಾಂಗ ಹೊಡಿಬೇಕಪಾ, ಮಾರಾಯಾ ! ನೀ ಓಟು ಹೊಡದು ತೋರಸು, ನೋಡೂನು ! ಬಲೆ ಇಸಮು

ಕಾಣತಿ ನೀನು ! ನಿನ್ನ ಹೆಸರೇನು ?

ಕರಿಯ—ನನ್ನ ಹೆಸರ ? ನನ್ನ ಹೆಸರು ಕರಿಯಪ್ಪ. ಭೀಮಣ್ಣ ನಾಯಕರ ಆಳುಮಗ ನಾನು.

ಡಂಗುರದವ—ಯಾರು ? ನೀನs ?

ಕರಿಯ—ಹೌದು. ನಾನು.

ಡಂಗುರದವ—ಏಸು ವರ್ಸಾತು ಆಗಿ ?

ಕರಿಯ—ಆತನ್ನು, ಬರೋ ಹುಣ್ಣಿವೆಗೆ ನಾಕು ವರ್ಸ.

ಡಂಗುರದವ—ನಂದು ತಪ್ಪಾತು, ಕರಿಯಪ್ಪ. ಓಟು ದೊಡ್ಡ ಮನಸು ಮಾಡು ನನ ಮ್ಯಾಗ ! (ಅಳುವನು)

ಕರಿಯ—ಅದು ಯಾಕೊ ? ಆಳತೀ ಯಾಕಲೆ ?

ಡಂಗುರದವ—ನಾ ಮುಗ್ಗಲಗೇಡಿ, ನಾಯಕರ ಮನಿಯವರ ಮ್ಯಾಗ ಜಬರ ದಸ್ತು ಮಾಡೋದಂದರ ಪಾಪಲ್ಲs ?

ಕರಿಯ—ಇರಲಿ ಬಿಡೊ. ನಿನ್ನ ಹೆಸರೇನು ?

ಡಂಗುರದವ—ಲಕುಮ್ಯಾ ಅಂತಾರು ನನಗ.

ಕರಿಯ—ನಿನಗ ಸರಕಾರ ಕೊಡೋ ಪಗಾರ ಎಷ್ಟು, ಲಕುಮ್ಯಾ ?

ಡಂಗುರದವ—ಕೊಡತಾರು ೧೦-೧೫ ರೂಪಾಯಿ. ಹಿರೇ ಯಜಮಾನರು ತೀರಿಕೊಂಡತೊಟ್ಟು ಹಿಂಬಡತೀನ ನಡದೈತಿ. ಮನ್ಯಾಗ ನೋಡಿದರ ಎಂಟು ಮಕ್ಕಳು, ಇಬ್ಬರು ಹೆಂಡರು. ನಡದೈತಿ ಸಂಸಾರ....

ಕರಿಯ—ಇಷ್ಟು ದೊಡ್ಡ ಸಂಸಾರ ಯಾಕ ಕಟಗೊಂಡೆಪಾ ?

ಡಂಗುರದವ—ಏನು ಮಾಡೋದು ಕರಿಯಪ್ಪ ! ದೇವರು ಕೊಟ್ಟರ ಬ್ಯಾಡ ನ್ನೋದೈತೆ ? ನಾಕ ದಿವಸ ಜಾತ್ರ್ಯಾಗ ಕೂಡಿದ್ಹಾಂಗ ಮಜಾ ಮಾಡಿ ಏಳೋದು. ಐತೇನು ಬೂಮಿನ್ಯಾಗ ?

ಕರಿಯ—ಆತು. ಹೊಡಿ ಚಕಡಿ. ನೀ ಹೇಳಿದ್ಹಂಗ ದೇವರಿದ್ದಾನ.

ಡಂಗುರದವ—ತುಸು ನಿಲ್ಲೋ, ಕರಿಯಪ್ಪ ! ಯಾಕ ? ಇಷ್ಟು ಅವಸರ ?

ಕರಿಯ—ಹೋಗತೇನಿ. ನೀ ಹೊಡಿ ನಿನ್ನ ಡಂಗುರ. ಇವತ್ತ ಹಿಲಾಲು ಹಚ್ಚಬಾರದು ಅಂದರು ಯಜಮಾನರು. ನಾಳೆ ಮೋರೆಗೆ ಕಪ್ಪು ಹಚ್ಚಿಗೋಳ್ರಿ ಅಂದಾರು !

ಡಂಗುರದವ—ಹೀಂಗ ಐತಿ ನೋಡಪಾ! ಏನು ಮಾಡೋದು? ಆತು ಹೋಗು. ಮತ್ತ ನಿನಗ ಬೆಟ್ಟಿ ಆಗತೇನಿ.

(ಕರಿಯನು ಹೋಗುತ್ತಾನೆ. 'ಕೇಳ್ರಿಪೋ! ಕೇಳ್ರಿ!' ಎನ್ನುತ್ತ ಡಂಗುರದವನೂ ಹೋಗುತ್ತಾನೆ.)

---

## ಪ್ರವೇಶ ೨

(ಹಣುಮಪ್ಪ ದೇಸಾಯರು ಪಡಸಾಲೆಯಲ್ಲಿ ಸುಖಾಸನದ ಮೇಲೆ ಒರಗಿ ಕೊಂಡಿದ್ದಾರೆ. ಅವರಿಂದ ತುಸು ದೂರಕ್ಕೆ ಒಂದು ಕುರ್ಚಿಯ ಮೇಲೆ ದೇಸಾಯರ ಜಾಗೀರಿನ ಕಾರಭಾರಿಯಾದ ರಾಮಣ್ಣನವರು ಕುಳಿತಿದ್ದಾರೆ. ಒಂದು ಮಗ್ಗುಲಿಗೆ ಸಣ್ಣ ಪೆಟ್ಟಿಗೆಯನ್ನು ಎದುರಿಗಿಟ್ಟುಕೊಂಡು ಲೆಕ್ಕಪತ್ರವನ್ನು ಬರೆಯುವದರಲ್ಲಿ ಕಾರಕೂನರಾದ ಸಣತಮ್ಮಪ್ಪನವರು ಮಗ್ನರಾಗಿದ್ದಾರೆ. ಚಿತ್ರ ಛಾಯಾಚಿತ್ರಗಳು ಅಲ್ಲಲ್ಲಿ ಗೋಡೆಯ ಮೇಲೆ ತೂಗುಹಾಕಿವೆ.)

ದೇಸಾಯಿ—ಸುಟ್ಟುಬಿಡಿರಿ! ಸುಟ್ಟುಬಿಡಿರಿ ಅವನನ್ನು! ತಿರುಗಿ ವಾದಿಸುತ್ತಾನೋ ಆ ಮೂರ್ಖ! ಇಂಥವರ ನ್ಯೆ ಸುಲಿದು ಬುದ್ಧಿ ಕಲಿಸಬೇಕು. ನಮ್ಮ ಬೇವಿನ ಹಳ್ಳಿಯಲ್ಲಿ ಹಾವಿನ ಬಳ್ಳಿ ಬೆಳೆಯಹತ್ತಿದೆ ದಿನ ದಿನಕ್ಕೆ! ಊರ ಹೊರಗಿನ ಹಣುಮಪ್ಪನ ಗುಡಿಯು ಈಗ ನಾಯಿ ನರಿಗಳ ಪಾಲಾಗಿದೆ. ಅದನ್ನು ಕಟ್ಟಿಸಬೇಕೆಂದು ಹೇಳಿಕಳಿಸಿದೆ. 'ಇಲ್ಲ, ಸ್ವಾಮಿ! ಆಗುವದಿಲ್ಲ. ನನ್ನ ಉಡಿಯಲ್ಲಿ ಬಿದ್ದ ನೋವುಗಳು ನೂರಾರು' ಎಂದು ಹೇಳಬೇಕೆ ಆ ಹೇಡಿ? ಈ ನಮ್ಮ ಸಣತಮ್ಮ, ಖರಡು ಗೀಚಿ ಗೀಚಿ ಸಾಯುತಿದ್ದಾನೆ; ಮನೆಯಲ್ಲಿ ನೋಡಿದರೆ ಮಕ್ಕಳಿಗೆ ಮಲಗಲು ಜಾಗವಿಲ್ಲ, ತಿನ್ನಲು ಕೂಳಿಲ್ಲ,-ಹೌದಲ್ಲೇನೊ ಸಣತಮ್ಮ?

ಸಣತಮ್ಮ—(ಎದ್ದುನಿಂತು) ಹೌದು, ಶ್ರೀಮಂತರೆ! ತಮ್ಮ ಕೃಪೆಯಿಂದ ಮನೆ ತುಂಬ ಮಕ್ಕಳೇನೋ ಆಗಿವೆ. ಹೊಟ್ಟೆ ತುಂಬ ತಿನ್ನುವ ಯೋಗ್ಯತೆಯನ್ನು ಅವರಿಗೆ ಕೊಡಲಿಲ್ಲ ದೇವರು.

ದೇಸಾಯಿ—ನನ್ನ ಕೃಪೆ! ನಿನ್ನ ಕೃಪೆ! ಕುಳಿತುಕೊ ಸುಮ್ಮನೆ ನಿನ್ನ ಜಾಗದಲ್ಲಿ! ಈ ನಮ್ಮ ಸಣತಮ್ಮ....! ಒಂದು ಹೊಲವನ್ನು ಸಣತಮ್ಮನಿಗೆ ದಾನ ಮಾಡೆಂದು ಹೇಳಿಕಳುಹಿದೆ. ಆಗ ನೋಡಿದರೆ ಅವನು ದಾನ ಮಾಡಲೇ ಬೇಕಿತ್ತು. ಅದೇ ಅವನ ತಂದೆ ತೀರಿಕೊಂಡಿದ್ದರು. ಅವರ ಅಂತ್ಯವಿಧಿಯನ್ನು ಸಾಂಗಗೊಳಿಸುತಿದ್ದ. ನನ್ನ ಸಂದೇಶವು ಮುಟ್ಟಿದಾಗ ಏನೆಂದು ಹೇಳಿ ಕಳಿಸಿದನೆಂಬುದು ಗೊತ್ತಿದೆಯೆ! 'ಈಗ ನಾನು ದುಃಖದಲ್ಲಿದ್ದೇನೆ. ಬಿಡುವಿಲ್ಲ' ಎಂದು ಹೇಳಿದನಂತೆ! ಇದಕ್ಕಿಂತ ಹಿರಿ

ದಾದ ಅಪರಾಧವನ್ನು ನಾನು ಕಿವಿಯಿಂದ ಕೇಳಿಲ್ಲ. ನೀನು ತಿಳಿದು ಬಲ್ಲೆಯಾ ರಾಮಣ್ಣಾ ?

ರಾಮಣ್ಣ—ತಿಳಿದಿದ್ದೇನೆ, ಶ್ರೀಮಂತರೆ. ಇದಕ್ಕಿಂತ ದೊಡ್ಡ ಅಪರಾಧ ವೆಂದರೆ ಇಂಥವರು ಈ ಭೂಮಿಯಲ್ಲಿ ಹುಟ್ಟುವುದು. ಅದರಲ್ಲಿಯೂ ಈ ಬೇವಿನಹಳ್ಳಿಯಲ್ಲಿ ಜನ್ಮವೆತ್ತುವದು. ಇಷ್ಟೆಲ್ಲ ಸಾಲಲಾರದ್ದಕ್ಕೆ ದೇವರು ಅವರಿಗೆ ಶ್ರೀಮಂತಿಕೆಯನ್ನು ಕೊಟ್ಟು ನಾಲ್ಕು ಜನರ ಕಣ್ಣಲ್ಲಿ ಒತ್ತುವಂತೆ ಮುಂದುಮಾಡುತ್ತಾನೆ. ಇಂಥವರು ಜಗತ್ತಿನಲ್ಲಿ ಇರ ಬಾರದು, ಶ್ರೀಮಂತರೆ।

ಸಣತಮ್ಮ—(ಎದ್ದು ನಿಂತು) ಅಕಾ ! ಸುರುವಾಯಿತು ರಾಮಣ್ಣನವರ ಪುರಾಣ ! ಇಲ್ಲಿ ನೋಡಿರಿ, ಕೈಜೋಡಿಸುತ್ತೇನೆ. ತತ್ವಜ್ಞಾನಿಗಳೆ ! ನಮ್ಮ ಸತ್ವಪರೀಕ್ಷೆ ಮಾಡಬೇಡಿರಿ. ಸಾಷ್ಟಾಂಗ ಹಾಕುತ್ತೇನೆ. ಸಾಕು ಮಾಡಿರಿ. (ದೇಸಾಯಿಯು ಹ ! ಹ ! ಹ ! ಎಂದು ನಗುತ್ತಾನೆ. ರಾಮಣ್ಣನು ಸುಮ್ಮನಿರುತ್ತಾನೆ.)

ದೇಸಾಯಿ—ಹ ! ಹ ! ಹ ! ಸಾಷ್ಟಾಂಗ ಹಾಕುತ್ತೇನೆ. ಸಾಕುಮಾಡು ! ಸಾ—ಸಾ ! ಬಹು ಚೆನ್ನಾಗಿದೆ ನಿನ್ನ ತಮಾಷೆ ! ಹ ! ಹ ! ಹ !

ಸಣತಮ್ಮ—ಕ್ಷಮಿಸಬೇಕು, ರಾಮಣ್ಣನವರೆ ! ಹಾಗೆ ಸಿಟ್ಟಾಗಬೇಡಿರಿ ನನ್ನ ಮೇಲೆ. ಬರಿಯ ವಿನೋದಕ್ಕಾಗಿ ಹಾಗೆ ಹೇಳಿದೆ ನಾನು, ಬರಿಯ ವಿನೋದಕ್ಕೆ. ಅಲ್ಲದೆ ವ್ಯವಹಾರವು ನಿಮ್ಮಲ್ಲಿ ಇನ್ನೂ ಬಲಿಯಬೇಕು. ಶ್ರೀಮಂತರೆ, ಮೊನ್ನೆ ನಾನು ಬೆನಕನಹಳ್ಳಿಯ ನಾಗಪ್ಪನ ಮನೆಗೆ ಹೋಗಿದ್ದೆ. ನಿಂತ ವಸೂಲಿಯೆಲ್ಲ ನಿಂತಕಾಲಮೇಲೆ ವಸೂಲಾಗ ಬೇಕೆಂದೆ. ಇಲ್ಲದೆ ಹೋದರೆ, ಅವನು ಈಗ ನಮ್ಮವನೆ ಇದ್ದಾನೆ. ಹೊಲಗಳೂ ನಮ್ಮವಾಗುವವೆಂದೆ. ಅವನಿಗೆ ಒಂದು ಕಾಸು ಸಹ ಕಂದಾಯ ಕೊಡುವ ಯೋಗ್ಯತೆಯಿಲ್ಲವೆಂದು ರಾಮಣ್ಣನವರೇ ಹೇಳಿದ್ದ ರಲ್ಲ, ನಿಮ್ಮ ಸನ್ನಿಧಿಯಲ್ಲಿ ? ಆದರೆ ನನ್ನ ನಿದರ್ಶನಕ್ಕೆ ಬಂದ ಮಾತು ತೀರ ಬೇರೆಯಾಗಿಹೋಯಿತು. ಭೀಮಣ್ಣನಾಯಕರು ನಾಗಪ್ಪನಿಗೆ ಬೇಕಾದಷ್ಟು ಹಣವನ್ನು ಬಡ್ಡಿಬಾಚಿಯಿಲ್ಲದೆ ಕೊಟ್ಟುಬಿಟ್ಟರಂತೆ. ನಾನು ಹೋಗುವಷ್ಟರಲ್ಲಿ ಫೈಲಿಯನ್ನು ಹಿಡಿದುಕೊಂಡು ತಯಾ

ರಾಗಿ ಕುಳಿತಿದ್ದ ನಾಗಪ್ಪ! ಅವನ ಹೊಲಗಳನ್ನು ಅವನಿಗೆ ಬಿಟ್ಟು ತಿರುಗಿ ಬಂದೆ ಸ್ವಾಮಿ !

ದೇಸಾಯಿ—(ಮಿಡಿಹಾವಿನಂತೆ ಸಿಡಿದೆದ್ದು) ಆಂ ? ಏನಂದಿ ? ತನ್ನ ಹಾದಿಯನ್ನು ತಾನು ಹಿಡಿಯುವದಲ್ಲದೆ ಜಾಗೀರಿನ ಆಡಳಿತಕ್ಕೂ ಅಡ್ಡ ಬಂದನೇ ಈ ನೀಚ ! ಇಂಥವರನ್ನು ಸಿಲ್ಲಿಸಿ ಜೀವಂತ ಸುಲಿಸಬೇಕು. ರಾಮಣ್ಣಾ, ಇನ್ನೂ ಬರಲಿಲ್ಲವಲ್ಲ ಆ ಮೂರ್ಖ ? ಕರೆದು ತರಲು ಯಾರು ಹೋಗಿದ್ದಾರೆ ? ಏ ಗಂಗಜ್ಜಾ, ಬಾ ಇಲ್ಲಿ.

ಗಂಗಜ್ಜ—(ಬಂದು) ಬಂದೆ ದೇವರು.

ದೇಸಾಯಿ—ಆ ಭೀಮಣ್ಣನಾಯಕನನ್ನು ಕರೆದು ತರಲು ಯಾರು ಹೋಗಿದ್ದಾರೆ ?

ಗಂಗಜ್ಜ—ನಾನೇ ಹೋಗಿದ್ದೆ, ದೇವರು. ತುಸು ತಡೆದು ಬರುವೆನೆಂದು ಹೇಳಿದರು ನಾಯಕರು.

ದೇಸಾಯಿ—ಮತ್ತೇಕೆ ತಿರುಗಿ ಬಂದೆ, ಏ ! ಪಶು ! ಗಂಗಜ್ಜನೆಂಬ ಹೆಸರು ನಿನ್ನ ತಾರುಣ್ಯಕ್ಕೂ ಬಡಿದು ಕೊಂಡಿತೋ ಏನು ? ಈ ಅಜ್ಜತನವನ್ನು ಬಿಟ್ಟುಬಿಡು. ಎಚ್ಚರಿಕೆ ! ಅವನನ್ನು ಬಿಟ್ಟು ಬಂದರೆ ನೀನು ಭಸ್ಮವಾಗಿ ಬಿಟ್ಟೀ. ಹೋಗು.

ಸಣತಮ್ಮ—ಹೋಗು, ಹೋಗು ಹುಚ್ಚಾ ! ಭೀಮಣ್ಣನಾಯಕನು ಆನೆಯಂತೆ ತೂಗಾಡಿದರೆ ಅಂಕುಶ ಹಚ್ಚು ಅವನಿಗೆ. ಹೋಗು ! (ಗಂಗಜ್ಜನು ಹೋಗುತ್ತಾನೆ.)

ದೇಸಾಯಿ—(ತಿರುಗಾಡುತ್ತ) ಮದ, ಮದ ! ದುಡ್ಡಿನ ಮದ ! ಇನ್ನೂ ದುಡ್ಡಿದ್ದರೆ ಏನು ಮಾಡುತ್ತಿದ್ದರೋ ಈ ಹೆಡ್ಡರು ?

ರಾಮಣ್ಣ—(ದೇಸಾಯರ ಎದುರಿಗೆ ಬಂದು ನಿಂತು) ನಾನು ಹೊರಡುತ್ತೇನೆ. ಶ್ರೀಮಂತರೆ !

ದೇಸಾಯಿ—ಹೊರಡುತ್ತೀರಿ ? ಅದೇಕೆ ? ಆಚೆಲ್ಲಿಗೆ ಹೊರಡುವದು ರಾಮಣ್ಣನವರೆ ? ಈಗ ಆ ಭೀಮನಾಯಕನನ್ನು ಕಾಣುವ ಹೊರತು ಬೇರೆ ಯಾವ ಕೆಲಸವಿಲ್ಲವಷ್ಟೆ ? ಏನು ಬೇವಿನಹಳ್ಳಿಯನ್ನು ಬಿಟ್ಟು ಹೊರಡುತ್ತೀರಾ ? ನನ್ನ ತಂದೆಯವರು ಸಾಯುವಾಗ ನಿಮ್ಮನ್ನು

ತಮ್ಮಂತೆ ನಡೆಸಿಕೊಳ್ಳಬೇಕೆಂದು ಹೇಳಿ ಹೋದರು. ಒಮ್ಮೊಮ್ಮೆ, ನಿಮ್ಮಲ್ಲಿ ನಾನು ತೋರಿಸಬೇಕಾದ ಭಕ್ತಿವಿಶ್ವಾಸಗಳನ್ನು ತೋರಿಸಿರಲಿಕ್ಕಿಲ್ಲ. ಆದರೆ ತಂದೆಯಂತೆ ನನ್ನನ್ನು ಪ್ರೀತಿಯಿಂದ ಕಾಣುವದು ನಿಮ್ಮ ಕರ್ತವ್ಯವಲ್ಲವೆ? ಈಗ ನೋಡಿರಿ! ಊರಲ್ಲಿ ಭೀಮನಾಯಕನು ಬಲಿಯ ಹತ್ತಿದ್ದಾನೆ. ಜನರ ಮನಸ್ಸನ್ನೆಲ್ಲ ಬೆಂತರ ಬೂದಿಯನ್ನೂದಿ ಒಲಿಸಿಕೊಂಡಿದ್ದಾನೆ. ಕಂದಾಯ ಕೊಡದವರ ಆದಾಯವನ್ನೆಲ್ಲ ನಿಲ್ಲಿಸಿಬಿಟ್ಟು ಅವರ ಹೊಲಗಳನ್ನು ದೊರಕಿಸಿ ಜಾಗೀರಿನ ಯೋಗ್ಯತೆಯನ್ನು ಹೆಚ್ಚಿಸಬೇಕೆಂದರೆ,—ಆ ಜನರಿಗೆ ಬಡ್ಡಿಯಿಲ್ಲದೆ ದುಡ್ಡನ್ನು ತೆತ್ತುತ್ತಾನೆ. ಹಣುಮಪ್ಪನ ಗುಡಿಯು ಉದ್ಧಾರ ಮಾಡೆಂದು ನಾನು ಹೇಳಿದರೆ ಮುಗಿಲುದ್ದ ಮೋರೆ ಮಾಡಿದ ಈತನು ಇನ್ನೊಂದು ಈಶ್ವರಾಲಯವನ್ನು ಕಟ್ಟಿಸಲು ನೂರಾರು ರೂಪಾಯಿ ವೆಚ್ಚಮಾಡಿ, ಊರ ಜನರನ್ನೆಲ್ಲ ಕರೆದು ಊಟಕ್ಕೆ ಹಾಕಿಸುತ್ತಾನೆ. ಬೇವಿನಹಳ್ಳಿಗೆ ಶೋಭೆ ಬರಲೆಂದು ಊರಲ್ಲೆಲ್ಲ ಮಂಗಳೂರು ಹಂಚಿನ ಮನೆಗಳಾಗಬೇಕೆಂದು ಡಂಗುರ ಸಾರಿಸಿದೆನು. ಕೆಲವು ಕಾಮದಾರರು ಅದರಂತೆ ಮಾಡಿದ್ದಾಯಿತು. ಜಾಗೀರಿನ ಕಚೇರಿ—ಕಟ್ಟಿಗಳನ್ನೆಲ್ಲ ಮಂಗಳೂರು ಹಂಚಿನಿಂದ ಹೊಚ್ಚಿದ್ದಾಯಿತು. ಬಣಜಿಗರಿಗೆ ಹೇಳಿದೆ, ಬೆಲ್ಲದಂಗಡಿಯವರಿಗೆ ಹೇಳಿದೆ,—ಎಲ್ಲರೂ ಭೀಮಣ್ಣನಾಯಕನೆಡೆಗೆ ಬೆಟ್ಟು ಮಾಡಿ ತೋರಿಸಿದರು. ಊರಿನಲ್ಲಿಯ ನಾಯಕರು ಹಾಗೆ ಮಾಡಿದ ಮೇಲೆ ಮಾತ್ರ ಅವರನ್ನು ಅನುಸರಿಸಲು ತಮಗೆ ಅನುಕೂಲವೆಂದರು. ಭೀಮಣ್ಣನಾಯಕನಿಗೆ ಕೇಳಿದರೆ ಕಾಮಣ್ಣನ ಹಾಗೆ ಮೋರೆ ಮಾಡಿದ. ಹಿರಿಯರು ಹಾಕಿಟ್ಟ ಪಂಚ್ತಿಯನ್ನು ಹಾರಿ ಹೊಡೆಯುವಷ್ಟು ಭಾರಿತನವು ಇನ್ನೂ ತನಗೆ ಬಂದಿಲ್ಲವೆಂದು ಬಗಲೆತ್ತಿದ.

ರಾಮಣ್ಣ—ಇನ್ನು ನಾನು ಹೊರಡುತ್ತೇನೆ, ಶ್ರೀಮಂತರೆ.

ದೇಸಾಯಿ—ಅದೇಕೆ, ರಾಮಣ್ಣನವರೆ? ಅಂಥ ಪ್ರಮಾದವೇನಾಯಿತು ನನ್ನಿಂದ?

ಸಣತಮ್ಮ—(ಎದ್ದುನಿಂತು) ಗೊತ್ತಿಲ್ಲವೇ ಶ್ರೀಮಂತರಿಗೆ? ರಾಮಣ್ಣನವರ ಮುದಿಹುಚ್ಚು ದಿನದಿನಕ್ಕೆ ಹೆಚ್ಚಾಗತೊಡಗಿದೆ. ಆ ಭೀಮಣ್ಣ

ನಾಯಕನ ಮೋಹಪಾಶಕ್ಕೆ ಸಿಲುಕಿ ಬಲಿಯಾಗಿದ್ದಾರೆ ನಮ್ಮ ಕಾರಭಾರಿಗಳು. ರಾಜ್ಯಸೂತ್ರಗಳನ್ನು ಬಿಗಿಯಾಗಿ ಹಿಡಿದರೆ ಮಾತ್ರ ಎಲ್ಲವೂ ಸುಸೂತ್ರವಾಗಿ ಸಾಗುವದಲ್ಲವೆ ?

ರಾಮಣ್ಣ—(ಬಿಗುವಿನಿಂದ) ಏ ! ಹುಚ್ಚೆ ! ಬಾಯಿಮುಚ್ಚು. ಈ ನಿನ್ನ ಸಂಗಟಿನಿಂದ ಜಾಗೀರಿನ ತಳವು ಪೊಳ್ಳಾಗತೊಡಗಿದೆ. ನಿಮ್ಮಂಥ ಹುಳುಗಳು ಹತ್ತಿ ಈ ಬೀಸುಮರವನ್ನು ಬೀಸಾಡಿ ಬಿಡುವಿರಿ. ಶ್ರೀಮಂತರ ಸಾಕ್ಷಿಯಾಗಿ ಹೇಳು. ಎಷ್ಟು ಕುಟುಂಬಗಳ ವಿನಾಶಕ್ಕೆ ನೀನು ಕಾರಣನಾದೆ ? ಎಷ್ಟು ಜನ ಗರತಿಯರನ್ನು ಬವಣೆಬಡಿಸಿರುವೆ ? ಮತ್ತೆ ಶ್ರೀಮಂತರ ಸನ್ನಿಧಿಯಲ್ಲಿ ಇಂಥ ಜನರ ಬಾಯಿಯೇ ಮೇಲು. ಒಡೆಯರೆ ! ನಾನು ಹೊರಡಲು ಇದಕ್ಕಿಂತ ಹೆಚ್ಚಿಗೆ ಕಾರಣವೇನು ಬೇಕು?

ದೇಸಾಯಿ—(ಸಣತಮ್ಮನಿಗೆ ಕಣ್ಸನ್ನೆ ಮಾಡಿ) ಏ ! ಮೂರ್ಖಾ ! ಬಾಯಿಮುಚ್ಚು ! ಕಾರಭಾರಿಯವರನ್ನು ಕುರಿತು ಇಂಥ ಮಾತುಗಳನ್ನು ಆಡಿದೆಯಾದರೆ ನಾಲಿಗೆಯು ನೆಗೆದು ಬಿದ್ದೀತು. ಹೇಳಿರಿ, ರಾಮಣ್ಣನವರೆ ! ಅದೇಕೆ ನೀವು ಹೊರಡುವದು ?

ರಾಮಣ್ಣ—ಶ್ರೀಮಂತರೆ, ನಿಮ್ಮ ಸಿಟ್ಟನ್ನು ಮನಬಂದಂತೆ ಹರಿಬಿಟ್ಟದ್ದೀರಿ ನೀವು. ಆಡಳಿತದ ಮುದ್ರೆಯು ನಿಮ್ಮ ಕೈಯಲ್ಲಿ ದೊರೆತಿದೆಯೆಂದು ಅದನ್ನು ಸಿಕ್ಕಸಿಕ್ಕವರ ಮೋರೆಗೆ ಒತ್ತಿಬಿಡಬಹುದೆ ? ತಿಳಿದು ನೋಡಿರಿ.

ದೇಸಾಯಿ—(ರುಮಾಲವನ್ನು ತೆಗೆದಿಟ್ಟು) ಇಗೋ, ನನ್ನ ಸಿಟ್ಟನ್ನು ಕಳಚಿ ದೂರ ತೆಗೆದಿಟ್ಟದ್ದೇನೆ. ಇನ್ನು ಹೇಳಿರಿ, ನೋಡುವ. ಇಲ್ಲಿ ಕುಳಿತುಕೊಳ್ಳಿರಿ.

ರಾಮಣ್ಣ—ನಿಮ್ಮ ಪರಮ ಪೂಜ್ಯ ಪಿತೃಗಳಾದ ಲಕ್ಕಣ್ಣೊಡೆಯರ ಸೇವೆಯಲ್ಲಿ ಧನ್ಯನಾದ ದೀನನು ನಾನು. ಈಗ ಎಂಟು ವರ್ಷಗಳಿಂದ ತಮ್ಮನ್ನು ಕೈಲಾದ ಮಟ್ಟಿಗೆ ಸೇವಿಸಿದ್ದೇನೆ. ದೇಸಗತ್ತಿಯ ಕಲ್ಯಾಣವೇ ನನ್ನ ಮನೋದೇವತೆಯಾಗಿದೆಯಷ್ಟೆ ?

ದೇಸಾಯಿ—ನನಗಿಂತ ಹೆಚ್ಚಾಗಿ ನೀವು ನನ್ನ ಕಲ್ಯಾಣವನ್ನು ಬಯಸಿದ್ದೀರಿ.

ರಾಮಣ್ಣ—ಒಮ್ಮೊಮ್ಮೆ ನನ್ನ ಬುದ್ಧಿವಾದವು ನಿಮಗೆ ರುಚಿಸಿರಲಿಕ್ಕಿಲ್ಲ. ನಿಮ್ಮ ಸುತ್ತಿನ ಪರಿವಾರದವರು ಕಿವಿಯ ಮೇಲೆ ಕೈಯಿಟ್ಟರೂ ಇವನು

ರಾಜದ್ರೋಹಿಯೆಂದು ತೆಗಳಿದರೂ ನಾನು ನನ್ನ ಮನಸ್ಸನ್ನು ತಿರುಗಿಸಿಲ್ಲ, ನುಡಿಯನ್ನು ಬದಲಿಸಿಲ್ಲ.

ದೇಸಾಯಿ—ಅದೂ ನಿಜ, ರಾಮಣ್ಣನವರೇ ! ತಾವು ಹೇಳಿದಂತೆ ನನಗೆ ಅನೇಕ ಸಲ ನಡೆಯುವದಾಗಿಲ್ಲ. ಆದರೆ ತಮ್ಮ ಹಿತವಚನದ ಸತ್ಯವನ್ನು ನಾನು ಯಾವಾಗಲೂ ಒಪ್ಪಿದ್ದೇನಲ್ಲವೆ ?

ರಾಮಣ್ಣ—ನುಡಿಯ ಸತ್ಯವನ್ನು ಒಪ್ಪಿ ನಡೆಯ ಮಿಥ್ಯತೆಯನ್ನು ಕಾಯ್ದರೇನು ಪುಣ್ಯವು ಬರುವದೋ ದೇವರೇ ಬಲ್ಲ. ಅದಿರಲಿ, ಲಕ್ಕಣ್ಣೊಡೆಯರ ಸ್ಮಶಾನಯಾತ್ರೆಯು ಶ್ರೀಮಂತರಿಗೆ ನೆನಪಿರಬಹುದು.

ದೇಸಾಯಿ—ಅಯ್ಯೋ ! ನೆನಪಿರದೆ ಏನು ? ಸ್ಮಶಾನವೆಲ್ಲ ಅಂದು ಊರಾಗಿ ಊರೇ ಸ್ಮಶಾನವಾಯಿತು. ಮಳೆಗಾಲವಿಲ್ಲದಿದ್ದರೂ ಅಂದು ಮೋಡಗವಿದು ಮಳೆಗರೆದಿತು. ಕಣ್ಣೀರಿನ ಮಂಜಿನೊಳಗಿಂದ ಜನರು ಒಬ್ಬರನ್ನೊಬ್ಬರು ಕಾಣುತ್ತಿದ್ದರು. ಅಂದು ಕೂಸುಗಳು ಸುಮ್ಮನಿದ್ದವು ; ತಾಯಂದಿರೇ ಅಳುತ್ತಿದ್ದರು. ಒಡೆಯರ ಚಿತಾಭಸ್ಮದ ಅಂಗಾರ ಬೊಟ್ಟನ್ನಿಟ್ಟುಕೊಂಡು ಜನರೆಲ್ಲ ಮೌನವಾಗಿ ತೆರಳಿದರು. ಅವರನ್ನು ದಹಿಸಿದ ಸ್ಥಳದಲ್ಲಿ ಸಮಾಧಿಯನ್ನು ಕಟ್ಟಿದರು. ಇಂದಿಗೂ ಸಮಾಧಿಯ ಬಳಿಯಲ್ಲಿ ಜನರ ಸಂದಣಿಯು ತಪ್ಪುವದಿಲ್ಲ. ನನ್ನ ತಂದೆಯವರಿಗೆ ಮೊದಲು ಮುಡಿಪು ಯಾವ ಹಬ್ಬದಲ್ಲಿಯೂ ಮುಟ್ಟವೆ ಇರುವದಿಲ್ಲ. ಅಯ್ಯೋ ! ಅದರ ನೆನಪನ್ನೇಕೆ ತರುತ್ತೀರಿ, ಬೇಗೆಯೇಳುವ ಹಾಗೆ ?

ರಾಮಣ್ಣ—ಒಡೆಯರ ಮನಸ್ಸನ್ನು ನೋಯಿಸುವದು ನನಗಿಷ್ಟವಿಲ್ಲ. ಆದರೂ ಇಂದು ಮಾತು ಮುಗಿಸಬೇಕೆಂದಿದ್ದೇನೆ. ದೊರೆಗಳು ಕ್ಷಮಿಸಬೇಕು. ಮೊನ್ನೆ ತಾವು ಹಣುಮಪ್ಪನ ಗುಡಿಯನ್ನು ಉದ್ಧಾರ ಮಾಡಿ ಜರುಗಿಸಿದ ಸಮಾರಂಭದ ವೇಳೆಯಲ್ಲಿ ಎಷ್ಟು ಜನರು ನೆರೆದಿದ್ದರು ?

ದೇಸಾಯಿ—ಹೀಗೆ ಮರ್ಮಕ್ಕೆ ತಗಲುವಂತೆ ಮಾತನಾಡುವದು ಉಚಿತವಲ್ಲ, ರಾಮಣ್ಣನವರೆ ! ಜನರು ನೆರೆಯದಿದ್ದರೆ ನನ್ನ ತಪ್ಪೊ ? ದೇವರ ಮೇಲಿನ ವಿಶ್ವಾಸವೇ ಹಾರಿದೆ ಈಗಿನ ತ್ರಿಶಂಕುಗಳಿಗೆ.

ರಾಮಣ್ಣ—ಈಗ ಹೇಳಿರಿ. ಭೀಮಣ್ಣನಾಯಕನು ಗುಡಿಯನ್ನು ಕಟ್ಟಿ ಈಶ್ವರ ಮೂರ್ತಿಯನ್ನು ಸ್ಥಾಪಿಸಿದಾಗ ನಿಮ್ಮನ್ನೂ ನಿಮ್ಮ ಪರಿವಾರವನ್ನೂ

ಬಿಟ್ಟು ಮತ್ತೆಷ್ಟು ಜನ ಹಿಂದುಳಿದವರು ?

ದೇಸಾಯಿ—(ರೇಗಿಗೆದ್ದು) ಇದೇನು ಹೇಳುತ್ತೀರಿ ನೀವು! ಈಗ ನಾನು ಭೀಮಣ್ಣನಾಯಕನನ್ನು ಕೇಳಬೇಕಾಗಿದ್ದೂ ಇದೇ. ಊರ ಜನರಲ್ಲಿ ಬಹುಶಃ ಎಲ್ಲರೂ ಸ್ಮಾರ್ತರು, ರಾಮಣ್ಣನವರೆ. ಸ್ಮಾರ್ತ-ವೈಷ್ಣವ ಪಂಗಡಗಳನ್ನು ವಿಂಗಡಿಸಿ ನಮ್ಮ ವಿರುದ್ಧ ಬಂಡೆಬ್ಬಿಸಲು ಹೂಡಿದ ಕಿಳ್ಳಿಕೇತರಾಟವಿದು. ಜನರನ್ನು ಗುಂಪುಕಟ್ಟಿ ತಾನು ನಾಯಕನಾಗಲು ಆಡಿದ ಮೋಸಗಾರಿಕೆಯಿದು. ನೀವು ಹಿರಿಯರು, ಅನುಭವಿಕರು; ಬೆಳ್ಳಗಿದ್ದುದನ್ನೆಲ್ಲ ಹಾಲೆಂದು ನಂಬುವವರು. ನಿಮಗೆ ಈ ಕಾರಸ್ಥಾನದ ನೆಲೆಯೇ ಹತ್ತುವದಿಲ್ಲ.

ರಾಮಣ್ಣ — ಹಾ ! ಶ್ರೀಮಂತರೆ ! ಮತ್ತೆ ನೀವು ಕೋಪಾವಿಷ್ಟರಾದಿರಿ.

ದೇಸಾಯಿ—(ಕುರ್ಚಿಯಲ್ಲಿ ಹಿಂದಕ್ಕೆ ಬಿದ್ದುಕೊಂಡು) ಹೂಂ. ಸಾಗಲಿ. ತುಟಿ ಬಿಗಿ ಹಿಡಿದು ಕೇಳುತ್ತೇನೆ.

ರಾಮಣ್ಣ—ಕ್ಷಮಿಸಬೇಕು, ಶ್ರೀಮಂತರೆ. ಲಕ್ಕಣ್ಣೊಡೆಯರು ಈ ನಾಲಗೆಗೆ ಸತ್ಯದ ಸವಿಯನ್ನು ತೋರಿಸಿದರು. ನೀವು ಇದೀಗ ಹೇಳಿದುದೆಲ್ಲ ಅಷ್ಟೊಂದು ನಿಜವಲ್ಲವೆಂದು ನಿಮಗೇ ಗೊತ್ತಿದೆ. ಭೀಮಣ್ಣ ನಾಯಕನ ಮನದಲ್ಲಿ ಕಾರಸ್ಥಾನವಿಲ್ಲ, ಮೋಸಗಾರಿಕೆಯಿಲ್ಲ. ನೀವು ಹೇಳಿದಂತೆ ಧರ್ಮವೇ ಕುಗ್ಗುತ್ತಿರುವಾಗ ದ್ವೈತಾದ್ವೈತಗಳಿಂದ ಜಗಳಗಳು ಹುಟ್ಟುವವಂದರೇನು ? ಒಂದು ಮಾತು ಮಾತ್ರ ಘಂಟಾಘೋಷವಾಗಿದೆ. ಲಕ್ಕಣ್ಣೊಡೆಯರು ಇರುವಾಗ ದೊರೆತನವೂ ಜನನಾಯಕತ್ವವೂ ಒಬ್ಬ ವ್ಯಕ್ತಿಯಲ್ಲಿಯೇ ಅವತರಿಸಿದ್ದವು. ಇಂದಿಗೆ ಅವು ಬೇರೆಯಾಗಿವೆ. ಇಂದಿನ ದೊರೆ ಬೇರೆ ; ಜನನಾಯಕನು ಬೇರೆ.

ದೇಸಾಯಿ—(ಸಿಟ್ಟಿನಿಂದ) ಹಾ ! ಏನಿದು ನೀವಂದಿದ್ದು ? ಭೀಮಣ್ಣನಾಯಕನಿಗೆ ಜನನಾಯಕತ್ವದ ಪದವಿಯನ್ನು ಕೊಟ್ಟಿರಾ ? ಒಳ್ಳೇ ಕಾರಭಾರಿಗಳು ಗಂಟು ಬಿದ್ದಿರಿ ನಮಗೆ ! ನಮ್ಮ ದೇಸಗತ್ತಿಯ ಗೌರವವನ್ನು ಬಹು ಚೆನ್ನಾಗಿ ಕಾಯುವಿರಿ ನೀವು !

ರಾಮಣ್ಣ—ಮತ್ತೆ ಶ್ರೀಮಂತರ ಸಿಟ್ಟು....

ದೇಸಾಯಿ—(ಕುರ್ಚಿಯ ಮೇಲೆ ಹಿಂದಕ್ಕೆ ಬಿದ್ದು) ಹೂಂ. ಇಲ್ಲ. ನನ್ನೆದುರಿಗೆ

ನಿಂತು ನನ್ನನ್ನು ಅವಮಾನಗೊಳಿಸಿರಿ. ಸುಮ್ಮನೆ ಬೀಳುತ್ತೇನೆ. ಮೋರೆಯ ಮೇಲೆ ಉಗುಳಿರಿ. ಉಗುಳಿಸಿಕೊಳ್ಳುತ್ತೇನೆ.

ರಾಮಣ್ಣ—ಶ್ರೀಮಂತರೆ ! ನಿಮಗೆ ಗೊತ್ತಿದೆ. ನೀವು ಹಾಕಿದ ಉಗುಳನ್ನು ನಾನು ದಾಟಿದವನಲ್ಲ. ನಿಮ್ಮ ಸೇವೆಗೆ ಸದಾ ಸಿದ್ಧನಾದ ವಯೋವೃದ್ಧ ನಾನು. ಜನರ ತನುಗಳನ್ನು ಆಳುವುದರಲ್ಲಿ ದೊರೆತನವಿಲ್ಲ. ಶ್ರೀಮಂತರೆ ಅವರ ಮನಸ್ಸನ್ನು ಆಳಬೇಕು.

ದೇಸಾಯಿ—(ಎದ್ದು ಕುಳಿತು) ಇಲ್ಲಿ ನೋಡಿರಿ, ರಾಮಣ್ಣನವರೆ ! ನಾನೊಂದು ಮಾತು ಹೇಳುತ್ತೇನೆ. ನೀವು ನುಡಿದಂತೆ ನಡೆಯುತ್ತೇನೆ. ನನ್ನ ಒಂದು ಮಾತನ್ನು ಪಾಲಿಸಿರಿ. ಆ ಭೀಮಣ್ಣನಾಯಕನ ಸ್ತುತಿಪಾಠಗಳನ್ನು ಹೇಳುವ ವಂದಿಮಾಗಧಿಗಳಾಗಬೇಡಿರಿ.

ರಾಮಣ್ಣ—ಗುಣವಿದ್ದಲ್ಲಿ ಅವಗುಣವನ್ನು ಕಂಡರೆ,-ನನ್ನ ನಾಲಗೆಯು ನೆಗೆದು ಹೋದೀತು.

ದೇಸಾಯಿ—(ಎದ್ದು ನಿಂತು) ಇಲ್ಲಿ ನೋಡಿರಿ, ನನ್ನ ಜಾಗೀರಿನ ತಲೆವಳ್ಳಿಗೆ ಸರಿಸಮಾನವಾದ ನಾಗಾವಿಯು ನಿಮ್ಮ ಪದರಿನಲ್ಲಿ ಬೀಳುವದು. ಆ ಭೀಮನಾಯಕನ ಪಕ್ಷಗಟ್ಟಬೇಡಿರಿ.

ರಾಮಣ್ಣ—(ಉಸುರ್ಗರೆದು) ಶಿವ ! ಶಿವ ! ಶಾಂತಂ ಪಾಪಂ ! ಶ್ರೀಮಂತರೇ, ಪಕ್ಷಪಾತವೆಲ್ಲ ದೇವರಿಗೆ-ಆ ನ್ಯಾಯಪಕ್ಷಪಾತಿಗಿರಲಿ. ನನ್ನ ಸ್ವಭಾವ ವನ್ನು ತಾವು ಇನ್ನೂ ತಿಳಿದಿಲ್ಲವೆಂದು ತೋರುತ್ತದೆ. ಈ ವೃದ್ಧಾಪ್ಯ ದಲ್ಲಿ ನನಗೆ ಬೇಕಾದುದನ್ನು ದೇವರು ಕೊಟ್ಟಿದ್ದಾನೆ. ಸರ್ವರಕ್ಷಕನು ನನ್ನ ಹೆಂಡಿರು ಮಕ್ಕಳನ್ನೂ ಉಳಿಸಲಿಲ್ಲ. ಅವರಿದ್ದಿದ್ದರೆ ನಾನು ಈ ಮೋಹಕ್ಕೆ ಸಿಲುಕಿಬೀಳುವ ಸಂಭವವಿತ್ತು. ಅದರಿಂದಲೂ ನನ್ನನ್ನು ಪಾರುಮಾಡಿದ್ದಾನೆ. ಶ್ರೀಮಂತರೇ, ನಿಮಗೆ ರುಚಿಸದ ಮಾತುಗಳನ್ನು ಹೇಳಿ ನಿಮ್ಮ ಮನಸ್ಸನ್ನು ನೋಯಿಸಬೇಕೆಂದು ನನ್ನಿಷ್ಟವಿಲ್ಲ. ಈಗ ಇಲ್ಲಿಂದ ಹೊರಡುತ್ತೇನೆ. ಲಕ್ಕಣ್ಣೊಡೆಯರ ಕೊನೆಯ ಸಂದೇಶವನ್ನು ಮಾತ್ರ ನೆನಪಿಗೆ ತಂದುಕೊಳ್ಳಿರಿ. ನಿಮ್ಮ ಸಮಕ್ಷದಲ್ಲಿ ಅವರು ನನಗೆ ಹೇಳಲಿಲ್ಲವೆ ? ನಾನು ಜೀವಂತವಿರುವವರೆಗಾದರೂ ನಿಮ್ಮ ಹಾಗು ಭೀಮಣ್ಣನಾಯಕರ ನಡುವೆ ಸಖ್ಯವನ್ನು ಕಾಯಬೇಕೆಂದು ? ನಾನು

ಸಾಯುವತನಕವಾದರೂ ಅವರಿಗೆ ನಾನಿತ್ತ ವಚನವನ್ನು ಪಾಲಿಸುವ ಸೌಖ್ಯವನ್ನು ಕೊಡಿರಿ, ಶ್ರೀಮಂತರೆ ! (ಕಣ್ಣೀರು ಸುರಿಸುತ್ತಾ ಹೋಗುವನು.)

ದೇಸಾಯಿ—(ಸಣತಮ್ಮನನ್ನು ನೋಡಿ) ಹ ! ಹ ! ಹ ! ಹ ! ಹ್ಹ ! ಹ್ಹ ಹ್ಹ ! ಹ !

ಸಣತಮ್ಮ—ಹ ! ಹ ! ಹ ! ಹ್ಹ ! ಹ್ಹ ! ಹ್ಹ ! ಹ !

ದೇಸಾಯಿ—ಒಂದು ಶನಿಯ ಕಾಟವು ತಪ್ಪಿತೋ, ಸಣತಮ್ಮ. ಇನ್ನು ಇನ್ನೊಂದು ಶನಿ ?

ಸಣತಮ್ಮ—ಅದೆಷ್ಟು ಹೊತ್ತು, ಶ್ರೀಮಂತರೆ, ಶನಿಯಾದರೂ ಬರಲಿ. ಹ ! ಹ ! ಹ !

ದೇಸಾಯಿ—ಇಲ್ಲಿ ಬಾರೊ, ಇಲ್ಲಿ ಕೂಡು. ಆ ಮುದುಕನು ಇಲ್ಲಿರುವವರೆಗೆ ಖರಡು ಬರೆಯುವದು. ಆ ಮೇಲೆ ಒತ್ತುಖರಡು. ನೀನೇ ನನ್ನ ಕಾರಭಾರಿ !

ಸಣತಮ್ಮ—ಒಂದು ದೊಡ್ಡ ಹೊಂಚು ಹಾಕಿದ್ದೇನೆ, ಶ್ರೀಮಂತರೆ. ಆ ಮುದುಕನ ಬಾಯಿಬಡಾಯಿಯನ್ನು ಕೇಳುತ್ತ ಕುಳಿತಾಗ ಮಿಂಚಿ ಹೋಯಿತು ನನಗೆ. ಅದನ್ನು ಕೊನೆಗಾಣಿಸಲು ದೇವರ ಕರುಣೆ ಬೇಕು.

ದೇಸಾಯಿ—ದೇವರ ಕರುಣೆ ! ಅದೇನು ಇದ್ದೇ ಇದೆ. ನಿನ್ನ ಸಾಹಸವಾವುದು ಹೇಳು, ತಮ್ಮಾ.

ಸಣತಮ್ಮ—ದೇಶದ ತುಂಬೆಲ್ಲ ಹುಡುಕಿದೆ, ಶ್ರೀಮಂತರೆ. ಒಮ್ಮೆ ಮನೆಯೆಲ್ಲ ಗಮುಗಮಿಸುವ ವಾಸನೆಯುಳ್ಳ ಹಣ್ಣನ್ನು ತಂದು ಕೊಟ್ಟಿದ್ದೆ. ಒಡೆಯರಿಗೆ ನೆನಪಿರಬಹುದು.

ದೇಸಾಯಿ—ಅದನ್ನು ಮರೆಯುವದು ಹೇಗೆ ಸಣತಮ್ಮ, ಗಿಳಿಯಂತೆ ಅವಳನ್ನು ಸಾಕಿದ್ದೇನೆ. ಅವಳನ್ನು ಕಂಡು ಹಿಡಿದ ನಿನ್ನ ದೃಷ್ಟಿ ಬಲು ದೂರದೃಷ್ಟಿ ನೋಡು.

ಗಂಗಜ್ಜ—(ಒಳಗೆ ಬಂದು) ಒಡೆಯರೆ, ನಾಯಕರು ಬಂದು ಬಾಗಿಲಲ್ಲಿ ಕಾದಿದ್ದಾರೆ.

ದೇಸಾಯಿ—(ದುರುಗುಟ್ಟುತ್ತ) ಹೊಂ ! ಹಿಂದಿನಿಂದ ದ್ರೋಹ ಬಗೆದು ಇಲ್ಲಿ

ಈ ವಿನಯ ಪ್ರದರ್ಶನ ಬೇರೆ! ಹೋಗು,-ಆ ನಾಯಕನಿಗೆ ಒಳಗೆ ಬರಬಹುದೆಂದು ತಿಳಿಸು. (ದೇಸಾಯರು ಮೊದಲಿನಂತೆ ತಮ್ಮ ಆಸನದಲ್ಲಿಯೇ ಇರುತ್ತಾರೆ. ಸಣತಮ್ಮನು ಹೋಗಿ ಮೊದಲಿನಂತೆ ಲೆಕ್ಕ ಬರೆಯುತ್ತ ಕೂಡುತ್ತಾನೆ. ಭೀಮಣ್ಣನಾಯಕನು ಬಂದು ದೇಸಾಯರನ್ನು ವಿನಯ ಪೂರ್ವಕವಾಗಿ ನಮಸ್ಕರಿಸುತ್ತಾನೆ.)

ಭೀಮಣ್ಣನಾಯಕ—ಶ್ರೀಮಂತರು ನನ್ನನ್ನೇಕೆ ಕರೆಕಳುಹಿದ್ದು ? (ಇಬ್ಬರೂ ಸುಮ್ಮನಿರುತ್ತಾರೆ.)

ಸಣತಮ್ಮ— (ತುಸುಹೊತ್ತಿನ ಮೇಲೆ ಎದ್ದು ನಿಂತು) ಹಾಗೆ ಕುಶಲಪ್ರಶ್ನೆಯಾಡಿದರೆ ಕೆಲಸವಾದಂತಾಗಲಿಲ್ಲ, ನಾಯಕರೆ! ಈ ನಯವಿನಯ ಅಭಿನಯಾದಿಗಳು ನಮ್ಮ ಶ್ರೀಮಂತರೆದುರಿಗೆ ನಡೆಯುವುದಿಲ್ಲ. ಬೊಗ್ಗಿ ಮುಜುರೆ ಮಾಡಬೇಕು.

ಭೀಮಣ್ಣ—(ಬಿಗುವಿನಿಂದ) ಎಚ್ಚರಿಕೆ, ಕಾರಕೂನರೆ! ನೀವು ಶ್ರೀಮಂತರ ಮೌನವನ್ನು ವಿಪರೀತವಾಗಿ ಅರ್ಥಮಾಡುತ್ತಿದ್ದೀರಿ. ಬೊಗ್ಗಿದ ಮುಜುರೆ ಬೇಕಾಗಿದ್ದರೆ ಶ್ರೀಮಂತರು ಹಾಗೆ ಹೇಳಲು ಸಮರ್ಥರಿದ್ದಾರೆ ; ಇಲ್ಲವೆ ಅದರಂತೆ ಡಂಗುರ ಸಾರಿಸುತ್ತಾರೆ. ಆಗ ಬರಿ ಬೊಗ್ಗಿ ಮುಜುರೆ ಏಕೆ, ಕುರ್ನಿಸಾತ್ ಮಾಡಬಹುದು! ಅದರಲ್ಲೇನಿದೆ ? ನಾವು ಶ್ರೀಮಂತರ ಪ್ರಜೆಗಳಲ್ಲವೆ ?

ದೇಸಾಯಿ—(ಸಿಟ್ಟಿನಿಂದ) ಎಲೋ ನಾಯಕಾ! ನಿನ್ನ ಉದ್ಧಟತನವು ಮುಗಿಲು ಮುಟ್ಟಿತು. 'ಪ್ರಜೆ' 'ಪ್ರಜೆ' ಎನ್ನುತ್ತ ವಿಪರೀತವಾಗಿ ವರ್ತಿಸುತ್ತೀಯೆ. ನಾಚಿಕೆಯಿಲ್ಲವೆ ನಿನಗೆ ?

ನಾಯಕ—(ಕೈ ಮುಗಿದು)ನಾನು ಹಾಗೆಂದಿಗೂ ಮಾಡಲಿಲ್ಲ. ಶ್ರೀಮಂತರೆ! ತಪ್ಪಿದ್ದರೆ ಕ್ಷಮಿಸಬೇಕು.

ದೇಸಾಯಿ—ನಾನು ಗುಡಿ ಕಟ್ಟಿಸೆಂದರೆ 'ಇಲ್ಲ', ಬ್ರಾಹ್ಮಣರಿಗೆ ಭೂದಾನ ಕೊಡೆಂದರೆ 'ಇಲ್ಲ', ಮನೆಯನ್ನು ಹೊಸ ರೀತಿಯಲ್ಲಿ ಕಟ್ಟಿಸೆಂದರೆ 'ಇಲ್ಲ',-ಇಲ್ಲ! ಇಲ್ಲ! ಇಲ್ಲ! ಮತ್ತೆ 'ದೊರೆಗಳೇ', 'ಶ್ರೀಮಂತರೆ', 'ಒಡೆಯರೆ!'

ನಾಯಕ—ನಾನು ಒಲ್ಲೆನ್ನಲಿಲ್ಲ, ಶ್ರೀಮಂತರೆ. ಯಾರೋ ತಮಗೆ ತಪ್ಪು

ತಿಳಿಸಿದ್ದಾರೆ. ನಾನು ಬಡವನೇನೊ ನಿಜ. ಆದರೂ ಇದ್ದುಬಿದ್ದುದನ್ನೆಲ್ಲ ವೆಚ್ಚಮಾಡಿ ಹಣುಮಪ್ಪನ ಗುಡಿಯನ್ನು ಉದ್ಧರಿಸಬಹುದಾಗಿತ್ತು. ಅದು ಜಾಗೀರಿನ ಗೌರವಕ್ಕೆ ಅಷ್ಟೊಂದು ಸಲ್ಲುತ್ತಿದ್ದಿಲ್ಲವೆಂಬುದನ್ನು ತಾವು ಲಕ್ಷಿಸಬೇಕು. ಇನ್ನು ಭೂದಾನದ ಪ್ರಶ್ನೆ. ನನ್ನ ತಂದೆಯವರ ಅಂತ್ಯವಿಧಿಯನ್ನು ತೀರಿಸುವಾಗ ಶ್ರೀಮಂತರ ಸಂದೇಶವು ನನಗೆ ಮುಟ್ಟಿತು. ಆಗ ನಾನು ದುಃಖದಲ್ಲಿದ್ದೆ. ಆದರೂ ಒಡೆಯರ ಆಜ್ಞೆಯನ್ನು ಶಿರಸಾವಹಿಸಬೇಕೆಂದು ನಿಶ್ಚಯಿಸಿದೆ. ಕರ್ಮಕಾಂಡವನ್ನರಿತ ವೈದಿಕರು ನನಗೆ ಬೇಕಾಗಿದ್ದರು. ನಮ್ಮ ಈ ಸಣ್ಣತಮ್ಮಪ್ಪಕಾರಕೂನರಿಗೆ ವೈದಿಕವಿದ್ಯೆಯಲ್ಲಿ ಗತಿಯಿಲ್ಲವೆಂದು ಹಿಂದುಗಡೆ ನನಗೆ ತಿಳಿದು ಬಂತು, ನಿರುಪಾಯನಾದೆ.

ಸಣತಮ್ಮ—(ಎದ್ದು ನಿಂತು) ಕೊಡುವ ಮನಸಿದ್ದರೆ, ನಾಯಕರೇ ಬೀದಿಯಲ್ಲಿ ಹೋಗುವವನನ್ನು ಕರೆದು ದಾನ ಕೊಡಬಹುದು. ಏನು ಕರ್ಮಮಾಡಿಸುವವರಿಗೇ ದಾನಕೊಡಬೇಕೆಂದು ಧರ್ಮದಲ್ಲಿ ಹೇಳಿದೆಯೆ ? (ಕೂಡುತ್ತಾನೆ)

ಭೀಮಣ್ಣ—ನಮ್ಮಂಥ ಮಧ್ಯಮಸ್ಥಿತಿಯ ಪ್ರಾಪಂಚಿಕರ ಅಡಚಣಿಗಳು ನಮಗೇ ಗೊತ್ತು.

ದೇಸಾಯಿ—ಈಶ್ವರಾಲಯವನ್ನು ಕಟ್ಟಿಸಿ ಊರ ಜನರಿಗೆ ಊಟಕ್ಕೆ ಹಾಕುವಾಗ ನಿನ್ನ ಬಡತನವು ಎಲ್ಲಿ ಮಲಗಿ ನಿದ್ರೆ ಮಾಡುತ್ತಿತ್ತು ? ಜನರನ್ನು ಮೆಚ್ಚಿಸುವ ಹುಚ್ಚು ಹಿಡಿದಿದೆ ನಿನಗೆ, ನಾಯಕಾ. ಎಚ್ಚರಿಕೆ ! ನಾವು ಹೇಳಿದ್ದಕ್ಕೆಲ್ಲ 'ಜಾಗೀರಿನ ಗೌರವ'ವನ್ನು ಮುಂದೆ ಚಾಚುತ್ತೀ. ದುಡ್ಡಿಲ್ಲದವರಿಗೆ ದುಡ್ಡುಕೊಟ್ಟು ಅದೇ ನೀನು ನಮ್ಮ ಜಾಗೀರಿನ ಹಾದಿಯಲ್ಲಿ ಕಂಟಕವಾಗಿರುತ್ತೀ. ಮೊನ್ನೆ ಆ ಬೆನಕನ ಹಳ್ಳಿಯ,—ಅವರು ಯಾರು, ಕಾರಕೂನರೆ ?

ಸಣತಮ್ಮ—(ಎದ್ದು ನಿಂತು) ನಾಗಪ್ಪ, ಶ್ರೀಮಂತರೆ.

ದೇಸಾಯಿ—ಹೊಂ. ಆ ನಾಗಪ್ಪ ನಂಟನಂತೆ ಅವನು ಬೇಡಿದಷ್ಟು ದುಡ್ಡನ್ನು ಕೊಟ್ಟುಬಿಟ್ಟೆಯಲ್ಲ ? ಆಗ ನಿನ್ನ 'ಮಧ್ಯಮಸ್ಥಿತಿ,' 'ಪ್ರಾಪಂಚಿಕತನ,'-ಯಾವ ಮೂಲೆಯಲ್ಲಿ ಅಡಗಿದ್ದವು ಇವೆಲ್ಲ ?

ಭೀಮಣ್ಣ—ನಾನಿನ್ನು ಮಾತನಾಡಬಹುದಷ್ಟೆ ?

ದೇಸಾಯಿ—ಮಾತನಾಡು, ಆಡಿದರೆ ಮುತ್ತು ಸುರಿದಂತಾಗಲಿಲ್ಲ.

ಭೀಮಣ್ಣ—ಶ್ರೀಮಂತರೆ ! ಈಶ್ವರಾಲಯವನ್ನು ಕಟ್ಟಿಸಲು ನಾನು ನಿಮಿತ್ತ ಮಾತ್ರನಾಗಿದ್ದೇನೆ. ಊರ ಜನರೆಲ್ಲ ಕೂಡಿ ಪಟ್ಟಿ ಹಾಕಿದರು. ಇಂಥದೊಂದು ಹೊಸ ಗುಡಿಯನ್ನು ಕಟ್ಟಿಸಬೇಕೆಂದರು. ಅದನ್ನು ಕಟ್ಟಿಸುವ ಹೊಣೆಯನ್ನು ಮಾತ್ರ ನಾನು ಹೊತ್ತೆ. ಊರ ಪ್ರಸ್ಥವಾಗಬೇಕೆಂದು ದುಡ್ಡು ಕೂಡಿಸಿದರು ; ನಿಂತು ಅವನ್ನು ಮಾಡಿಸಿದೆ. ದೇವರ ಸಾಕ್ಷಿಯಾಗಿ ಹೇಳುತ್ತೇನೆ : ಇದಕ್ಕೆ ಹೆಚ್ಚಾಗಿ ಅದರಲ್ಲಿ ನನ್ನಂಗವಿಲ್ಲ. ಇನ್ನು ನಾಗಪ್ಪನಿಗೆ ನಾಲ್ಕು ದುಡ್ಡು ಕೊಟ್ಟಿದ್ದರೆ ತಪ್ಪೇನಾಯಿತೋ ಕಾಣೆ, ಶ್ರೀಮಂತರೆ. ಅನೇಕ ವರ್ಷಗಳವರೆಗೆ ನಿಂತು ಹೋದ ಜಾಗೀರಿನ ಭೂಕಂದಾಯವು ಅದರಿಂದ ಮುಟ್ಟಿತಲ್ಲ ?

ದೇಸಾಯಿ—ತಿಳಿಯಿತು ಬಿಡು. ನೀನೀಗ ಬಲು ಪ್ರವೀಣನಾಗಿದ್ದೀಯೆ. ಒಂದಿಲ್ಲೊಂದು ದಿನ ಇದಕ್ಕಾಗಿ ನೀನು ವ್ಯಥೆಪಡಬೇಕಾದೀತು. ಸಿಂಹದ ಗವಿಯೂ ನನ್ನ ಜಾಗೀರೂ ಒಂದೇ ಎಂದು ತಿಳಿಯದವನ ಪಾಡು ನರಿಯ ಪಾಡು !

ಭೀಮಣ್ಣ—ಹಾಗೆ ಕೆರಳಬೇಡಿರಿ, ಶ್ರೀಮಂತರೆ ! ಹಾಗೆ ನನ್ನಲ್ಲಿ ಹುದುಗಿದ್ದ ಅಪೂರ್ಣತೆಯನ್ನು ಬಡಿದೆಬ್ಬಿಸಬೇಡಿರಿ. ಅದರಿಂದ ಅನರ್ಥವಾಗಬಹುದು. ನಾನು ಲಕ್ಕಣ್ಣೊಡೆಯರ ಎದುರಿನಲ್ಲಿ ಆಡಿದ ಕೂಸು. ಜನರಲ್ಲಿ ಅಶಾಂತಿಯು ನೆಲೆಗೊಳ್ಳದಂತೆ ಮಾಡಬೇಕೆಂದು ಅವರು ಮರಣಶಯ್ಯೆಯ ಮೇಲಿಂದ ಕರೆದು ಹೇಳಿದರು ನನಗೆ. ನಿಮ್ಮನ್ನು ಒಡಹುಟ್ಟಿದವರಂತೆ ಭಾವಿಸಬೇಕೆಂದು ಆಜ್ಞಾಪಿಸಿದರು. ಅದಾದ ಮೇಲೆ ಅನೇಕ ಪ್ರಸಂಗಗಳು ನಡೆದುಹೋಗಿವೆ. ಉಗುಳು ನುಂಗಿದಂತೆ ಅವನ್ನೆಲ್ಲ ನುಂಗುತ್ತ ಬಂದಿದ್ದೇನೆ. ಜಾಗೀರು ಇಲ್ಲಿಯವರೆಗೆ ಉಳಿದದ್ದೆಂದರೆ ಅದು ನನ್ನ ಪ್ರಯತ್ನಗಳಿಂದೆಂದು ಹೇಳಿದರೆ ನೀವು ನಂಬಲಾರಿರಿ ! ನೀವು ನನ್ನನ್ನು ಶತ್ರುವಿನಂತೆ ಕಂಡರೂ ನಾನು ನಿಮ್ಮೊಡನೆ ಭ್ರಾತೃಭಾವದಿಂದ ನಡೆದಿದ್ದೇನೆ. ಆದರೆ ಮಾನವನ ಸಹನೆಗೂ ಸೀಮೆಯಿದೆ, ಶ್ರೀಮಂತರೆ ! ನನ್ನ ಮೈಯೆಲ್ಲ ಉರಿಯುತ್ತಿದ್ದರೂ ಈ ತಲೆ

ಯನ್ನು ಶೀತಲವಾಗಿ ಇಟ್ಟುಕೊಂಡಿದ್ದೇನೆ. ಅದೂ ಹೋಮಕುಂಡ ವಾಗುವಂತೆ ಮಾಡಬೇಡಿರಿ !

(ಎಲ್ಲೆಡೆಗೆ ತಿರುಗಾಡಹತ್ತುವನು)

ದೇಸಾಯಿ<br>ಸಣತಮ್ಮ } (ಗಾಬರಿಯಿಂದ) ಏ ! ಗಂಗಜ್ಜಾ ! ಇಲ್ಲಿ ಬನ್ನಿರಿ !

(ಗಂಗಜ್ಜನು ಇನ್ನೊಬ್ಬ ಸೇವಕನೊಡನೆ ಓಡಿಬರುವನು)

ಸಣತಮ್ಮ—ಯಾಕೆ, ನಾಯಕರೆ ? ಶ್ರೀಮಂತರೆದುರಿಗೆ ಹೀಗೆ ತಲೆ ಹಿಡಿದು ಕೊಂಡು ತಿರುಗಾಡಿದರೆ ತಲೆಯು ಉರುಳಿ ಬಿದ್ದೀತು.

ಭೀಮಣ್ಣ—ಏ ! ನಾಯಿ, ಸುಮ್ಮನಿರು. ಬೊಗಳಿ ಬೊಗಳಿ ಏಕೆ ದಣಿಯುತ್ತೀ !

ದೇಸಾಯಿ—ಸುಮ್ಮನಿರ್ರಿ, ಕಾರಕೂನರೆ ! ನಮ್ಮ ನಾಯಕರು ಈಗ ಜನ ನಾಯಕರಾಗಿದ್ದಾರೆ. ಶ್ರೀಮಂತರಿಗಿಂತ ಅವರ ದರ್ಜೆ ಈಗ ಮೇಲಾಗಿದೆ. ಅವರು ಬಯ್ದರೆ ಬಯ್ಸಿಕೊಳ್ಳಬೇಕು ; ಒದ್ದರೆ ಒದೆಸಿಕೊಳ್ಳಬೇಕು. ಜನನಾಯಕರವರು ! ಹೌದೇನು ನಾಯಕರೆ ?

ಭೀಮಣ್ಣ—ಶ್ರೀಮಂತರೆ ! ಇನ್ನುಮೇಲೆ ನಿಷ್ಠುರಸತ್ಯದಿಂದಲೇ ನಿಮ್ಮನ್ನು ಎಮರಿಸಬೇಕು. ಹೌದು. ನಾನು ಜನನಾಯಕನಾಗಿದ್ದೇನೆ. ಲಕ್ಷಣ್ಣೊಡೆಯರ ಧ್ಯೇಯಗಳನ್ನು ಅವರ ಮಕ್ಕಳು ಅಲ್ಲಗಳೆದರೂ ಜನರಿಗೆ ಸಲ್ಲುವಂತೆ ನಾನು ಹೆಣಗಬೇಕೆಂದಿದ್ದೇನೆ. ಜನನಾಯಕತ್ವದ ಘೋರ ವಿಧಿಯು ಇನ್ನಾವ ಪಾಪಿಗೂ ಬೇಡ ! ನಾನು ಜನನಾಯಕನಾಗಿದ್ದೇನೆ.

ದೇಸಾಯಿ—ಭಪ್ಪರೆ ! ನಾಯಕರೆ, ಹೀಗೆ ಮುಂದೆ ಬನ್ನಿರಿ. ಅಂದರೆ ನಮಗೂ ಹಿತ ; ನಿಮಗೂ ಹಿತವಾದೀತು. ಕಾರಕೂನರೆ, ಹಣ್ಣುಕಾಯಿಯನ್ನು ಹೀಚಿನಲ್ಲಿ ನೋಡಬೇಕಲ್ಲವೆ ? ಈ ಹೀಚನ್ನು ಹಿಚುಕಿನೋಡೋಣ ವೇನು ? ಹಿಚುಕಿ ?

ಸಣತಮ್ಮ—ಶ್ರೀಮಂತರೆ ! ನಾನು ಕಾರಕೂನನಿದ್ದೇನೆ. ಏನನ್ನು ಹೇಳಲೂ ನನಗೆ ಬಾಯಿಯಿಲ್ಲ.

ದೇಸಾಯಿ—ನಾಯಕರೆ, ನೀವು ಜನನಾಯಕರಾಗಿದ್ದೀರಲ್ಲವೆ ? ಗೇಣಂಚಿನ

ಭೀಮಣ್ಣ—ನಾನಿನ್ನು ಮಾತನಾಡಬಹುದಷ್ಟೆ ?

ದೇಸಾಯಿ—ಮಾತನಾಡು, ಆಡಿದರೆ ಮುತ್ತು ಸುರಿದಂತಾಗಲಿಲ್ಲ.

ಭೀಮಣ್ಣ—ಶ್ರೀಮಂತರೆ ! ಈಶ್ವರಾಲಯವನ್ನು ಕಟ್ಟಿಸಲು ನಾನು ನಿಮಿತ್ತ ಮಾತ್ರನಾಗಿದ್ದೇನೆ. ಊರ ಜನರೆಲ್ಲ ಕೂಡಿ ಪಟ್ಟ ಹಾಕಿದರು. ಇಂಥದೊಂದು ಹೊಸ ಗುಡಿಯನ್ನು ಕಟ್ಟಿಸಬೇಕೆಂದರು. ಅದನ್ನು ಕಟ್ಟಿಸುವ ಹೊಣೆಯನ್ನು ಮಾತ್ರ ನಾನು ಹೊತ್ತೆ. ಊರ ಪ್ರಸ್ಥವಾಗಬೇಕೆಂದು ದುಡ್ಡು ಕೂಡಿಸಿದರು ; ನಿಂತು ಅವನ್ನು ಮಾಡಿಸಿದೆ. ದೇವರ ಸಾಕ್ಷಿಯಾಗಿ ಹೇಳುತ್ತೇನೆ : ಇದಕ್ಕೆ ಹೆಚ್ಚಾಗಿ ಅದರಲ್ಲಿ ನನ್ನಂಗವಿಲ್ಲ. ಇನ್ನು ನಾಗಪ್ಪನಿಗೆ ನಾಲ್ಕು ದುಡ್ಡು ಕೊಟ್ಟಿದ್ದರೆ ತಪ್ಪೇನಾಯಿತೋ ಕಾಣೆ, ಶ್ರೀಮಂತರೆ. ಅನೇಕ ವರ್ಷಗಳವರೆಗೆ ನಿಂತು ಹೋದ ಜಾಗೀರಿನ ಭೂಕಂದಾಯವು ಅದರಿಂದ ಮುಟ್ಟಿತಲ್ಲ ?

ದೇಸಾಯಿ—ತಿಳಿಯಿತು ಬಿಡು. ನೀನೀಗ ಬಲು ಪ್ರವೀಣನಾಗಿದ್ದೀಯೆ. ಒಂದಿಲ್ಲೊಂದು ದಿನ ಇದಕ್ಕಾಗಿ ನೀನು ವ್ಯಥೆಪಡಬೇಕಾದೀತು. ಸಿಂಹದ ಗವಿಯೂ ನನ್ನ ಜಾಗೀರೂ ಒಂದೇ ಎಂದು ತಿಳಿಯದವನ ಪಾಡು ನರಿಯ ಪಾಡು !

ಭೀಮಣ್ಣ—ಹಾಗೆ ಕೆರಳಬೇಡಿರಿ, ಶ್ರೀಮಂತರೆ ! ಹಾಗೆ ನನ್ನಲ್ಲಿ ಹುದುಗಿದ್ದ ಅಪೂರ್ಣತೆಯನ್ನು ಬಡಿದೆಬ್ಬಿಸಬೇಡಿರಿ. ಅದರಿಂದ ಅನರ್ಥವಾಗಬಹುದು. ನಾನು ಲಕ್ಕಣ್ಣೊಡೆಯರ ಎದುರಿನಲ್ಲಿ ಆಡಿದ ಕೂಸು. ಜನರಲ್ಲಿ ಅಶಾಂತಿಯು ನೆಲೆಗೊಳ್ಳದಂತೆ ಮಾಡಬೇಕೆಂದು ಅವರು ಮರಣಶಯ್ಯೆಯ ಮೇಲಿಂದ ಕರೆದು ಹೇಳಿದರು ನನಗೆ. ನಿಮ್ಮನ್ನು ಒಡಹುಟ್ಟಿದವರಂತೆ ಭಾವಿಸಬೇಕೆಂದು ಆಜ್ಞಾಪಿಸಿದರು. ಅದಾದ ಮೇಲೆ ಅನೇಕ ಪ್ರಸಂಗಗಳು ನಡೆದುಹೋಗಿವೆ. ಉಗುಳು ನುಂಗಿದಂತೆ ಅವನ್ನೆಲ್ಲ ನುಂಗುತ್ತ ಬಂದಿದ್ದೇನೆ. ಜಾಗೀರು ಇಲ್ಲಿಯವರೆಗೆ ಉಳಿದದ್ದೆಂದರೆ ಅದು ನನ್ನ ಪ್ರಯತ್ನಗಳಿಂದೆಂದು ಹೇಳಿದರೆ ನೀವು ನಂಬಲಾರಿರಿ ! ನೀವು ನನ್ನನ್ನು ಶತ್ರುವಿನಂತೆ ಕಂಡರೂ ನಾನು ನಿಮ್ಮೊಡನೆ ಭ್ರಾತೃಭಾವದಿಂದ ನಡೆದಿದ್ದೇನೆ. ಆದರೆ ಮಾನವನ ಸಹನೆಗೂ ಸೀಮೆಯಿದೆ, ಶ್ರೀಮಂತರೆ ! ನನ್ನ ಮೈಯೆಲ್ಲ ಉರಿಯುತ್ತಿದ್ದರೂ ಈ ತಲೆ

ಯನ್ನು ಶೀತಲವಾಗಿ ಇಟ್ಟುಕೊಂಡಿದ್ದೇನೆ. ಅದೂ ಹೋಮಕುಂಡ ವಾಗುವಂತೆ ಮಾಡಬೇಡಿರಿ !

(ಎಲ್ಲೆಡೆಗೆ ತಿರುಗಾಡಹತ್ತುವನು)

ದೇಸಾಯಿ, ಸಣತಮ್ಮ } (ಗಾಬರಿಯಿಂದ) ಏ ! ಗಂಗಜ್ಜಾ ! ಇಲ್ಲಿ ಬನ್ನಿರಿ !

(ಗಂಗಜ್ಜನು ಇನ್ನೊಬ್ಬ ಸೇವಕನೊಡನೆ ಓಡಿಬರುವನು)

ಸಣತಮ್ಮ—ಯಾಕೆ, ನಾಯಕರೆ ? ಶ್ರೀಮಂತರೆದುರಿಗೆ ಹೀಗೆ ತಲೆ ಹಿಡಿದು ಕೊಂಡು ತಿರುಗಾಡಿದರೆ ತಲೆಯು ಉರುಳಿ ಬಿದ್ದೀತು.

ಭೀಮಣ್ಣ—ಏ ! ನಾಯಿ, ಸುಮ್ಮನಿರು. ಬೊಗಳಿ ಬೊಗಳಿ ಏಕೆ ದಣಿ ಯುತ್ತೀ !

ದೇಸಾಯಿ—ಸುಮ್ಮನಿರ್ರಿ, ಕಾರಕೂನರೆ ! ನಮ್ಮ ನಾಯಕರು ಈಗ ಜನ ನಾಯಕರಾಗಿದ್ದಾರೆ. ಶ್ರೀಮಂತರಿಗಿಂತ ಅವರ ದರ್ಜೆ ಈಗ ಮೇಲಾ ಗಿದೆ. ಅವರು ಬಯ್ದರೆ .ಬಯ್ಸಿಕೊಳ್ಳಬೇಕು ; .ಒದ್ದರೆ ಒದೆಸಿಕೊಳ್ಳ ಬೇಕು. ಜನನಾಯಕರವರು ! ಹೌದೇನು ನಾಯಕರೆ ?

ಭೀಮಣ್ಣ—ಶ್ರೀಮಂತರೆ ! ಇನ್ನುಮೇಲೆ ನಿಷ್ಠುರಸತ್ಯದಿಂದಲೇ ನಿಮ್ಮನ್ನು ಎಮರಿಸಬೇಕು. ಹೌದು. ನಾನು ಜನನಾಯಕನಾಗಿದ್ದೇನೆ. ಲಕ್ಷಣ್ಣೊ ಡೆಯರ ಧ್ಯೇಯಗಳನ್ನು ಅವರ ಮಕ್ಕಳು ಅಲ್ಲಗಳೆದರೂ ಜನರಿಗೆ ಸಲ್ಲು ವಂತೆ ನಾನು ಹೆಣಗಬೇಕೆಂದಿದ್ದೇನೆ. ಜನನಾಯಕತ್ವದ ಘೋರ ವಿಧಿಯು ಇನ್ನಾವ ಪಾಪಿಗೂ ಬೇಡ ! ನಾನು ಜನನಾಯಕನಾಗಿ ದ್ದೇನೆ.

ದೇಸಾಯಿ—ಭಪ್ಪರೆ ! ನಾಯಕರೆ, ಹೀಗೆ ಮುಂದೆ ಬನ್ನಿರಿ. ಅಂದರೆ ನಮಗೂ ಹಿತ ; ನಿಮಗೂ ಹಿತವಾದೀತು. ಕಾರಕೂನರೆ, ಹಣ್ಣುಕಾಯಿಯನ್ನು ಹೀಚಿನಲ್ಲಿ ನೋಡಬೇಕಲ್ಲವೆ ? ಈ ಹೀಚನ್ನು ಹಿಚುಕಿನೋಡೋಣ ವೇನು ? ಹಿಚುಕಿ ?

ಸಣತಮ್ಮ—ಶ್ರೀಮಂತರೆ ! ನಾನು ಕಾರಕೂನನಿದ್ದೇನೆ. ಏನನ್ನು ಹೇಳಲೂ ನನಗೆ ಬಾಯಿಯಿಲ್ಲ.

ದೇಸಾಯಿ—ನಾಯಕರೆ, ನೀವು ಜನನಾಯಕರಾಗಿದ್ದೀರಲ್ಲವೆ ? ಗೇಣಂಚಿನ

ದಡಿಧೋತರದ ಅಡ್ಡಗೆರೆಯೇಕೆ ನಿಮಗೆ ? ಎಲ್ಲಿ ! ಏ ! ಗಂಗಜ್ಜಾ ! ತೆಗೆದಿಡು ಈ ಜನನಾಯಕರು ಹೊತ್ತ ದಡಿದೋತರವನ್ನು. ನಿನಗೆ ಮಾನಮ್ಮ ಹಬ್ಬದ ಉಡುಗೊರೆಯಾಗಿ ಹೊರು ಅದನ್ನು. ಜನನಾಯಕರ ಕೊರಳಿನಲ್ಲಿ ಏಕೆ ಈ ಅಲಂಕಾರ ? (ಗಂಗಜ್ಜನು ಹಿಂದು ಮುಂದು ನೋಡುವನು) ಏಕೆ ! ಏ ! ಪಶು ಸುಮ್ಮನೇಕೆ ನಿಂತೆ ? ಎಳೆ ಆ ಧೋತರವನ್ನು !

ಭೀಮಣ್ಣ—(ಗಂಗಜ್ಜನನ್ನು ತಡೆದು) ಶ್ರೀಮಂತರೆ ! ಅಲ್ಲ ; ಇದು ನಿಮ್ಮ ಅಧಿಕಾರವಲ್ಲ. ನೀವು ಜಾಗೀರಿಗೆ ಒಡೆಯರಿರಬಹುದು, ಯಾವ ವ್ಯಕ್ತಿಯ ಮಾನವನ್ನೂ ಅಪಹರಿಸುವ ಹಕ್ಕು ನಿಮಗಿರಲಾರದು.

ದೇಸಾಯಿ—(ಗಂಗಜ್ಜನಿಗೆ) ಏ ! ಕಪಿ ! ಏನು ನೋಡುತ್ತೀ ? ನೋಡು ನಾನದನ್ನು ತೆಗೆದಿಡುತ್ತೇನೆ. (ಮುಂದುವರಿಯುತ್ತಾನೆ.)

ಭೀಮಣ್ಣ—(ಅತಿಪ್ರಯಾಸದಿಂದ ಸಿಟ್ಟು ಬಿಗಿ ಹಿಡಿದು) ಅದು.... ನಿಮ್ಮ ಕೆಲಸವಲ್ಲ, ಶ್ರೀಮಂತರೆ. ಅದನ್ನು ನಾನು ಮಾಡುತ್ತೇನೆ. ಗಂಗಜ್ಜನಿಗೆ ಈ ಧೋತರವು ಮಾನಮ್ಮಯ ಉಡುಗೊರೆಯಾಗಬೇಕಲ್ಲವೆ ? ಸರಿ ಸರಿ. ಲೆಕ್ಕಾಚಾರ, ಏ ! ಗಂಗಜ್ಜಾ ! ಬಾ ಇಲ್ಲಿ. ಹೀಗೆ ಮುಂದೆ ಕೈ ಮಾಡು, ಎದೆ ಹಿಗ್ಗಿಸು. ಮೀಸೆಯ ಮೇಲೆ ಕೈಹಾಕು. ಇದೋ ! ಹೀಗೆ ಹೊದ್ದುಕೊಳ್ಳಬೇಕು ಈ ಧೋತರವನ್ನು. ಶ್ರೀಮಂತರು ನನಗೆ ಮಾಡಿದ ಅಪಮಾನದ ಕುರುಹಲ್ಲ, ಇದು ; ಅವರು ನಿನಗೆ ಕೊಟ್ಟ ಉಡುಗೊರೆಯಾಗಿದೆ. ಎರಡೆಂದರೂ ಒಂದೇ. ಇನ್ನು ಹೋಗಿಬರುತ್ತೇನೆ, ಶ್ರೀಮಂತರೆ ! (ಹೋಗುವನು. ಗಂಗಜ್ಜನು ನಡುಗುತ್ತ ಹಾಗೆಯೆ ನಿಂತಿರುವನು. ದೇಸಾಯಿ ಸಣತಮ್ಮರು ಒಬ್ಬರನ್ನೊಬ್ಬರು ಮಿಕಿಮಿಕಿನೋಡುವರು.)

(ತೆರೆ ಬೀಳುವದು.)

---

## ಪ್ರವೇಶ ೩

(ಒಂದೆಡೆಗೆ ಹೋಗುತ್ತಿರುವ ಕರಿಯನನ್ನು ಕಂಡು ಡಂಗುರದವನು ಪ್ರವೇಶಿಸುತ್ತಾನೆ.)

ಡಂಗುರದವ—ಏ ಕರಿಯಪ್ಪ, ತುಸು ನಿಲ್ಲಬಾರದ? ಹಾಳಿಹದ್ದಿನ ಹಾಂಗ ಕೈ-ಕಾಲು ಬೀಸಿಗೋತ ಹೊಂಟೆಲ್ಲಾ.

ಕರಿಯ—ಯಾರವರು? ಎಲ ಇವನ? ಮತ್ತೇನು ಡಂಗುರಾ ಹೊಡೀತೀಯಪಾ ಲಕುಮ್ಯಾ? ನಿನ್ನ ಕೆಲಸಕ್ಕ ಮುಕ್ತ್ಯಾಯಾನs ಇಲ್ಲೇನು?

ಡಂಗುರದವ—ಅದು ಯಾಕ ಆದೀತು, ಕರಿಯಪ್ಪ! ಇವತ್ತ ರಾಜರ ಹಾಂಗ ಇದ್ದೇನು ನೋಡು. ಇವತ್ತ ನನ್ನ ಬದಲು ಊರಿಗೆ ಊರs ಡಂಗುರ ಹೊಡಸ್ತೈತಿ. ಊರು ಡಂಗುರ ಹೊಡಿಯೋದು, ನಾ ಕೇಳೋದು,—ಹೀಂಗ ಆಗ್ಯೆತಿ. ಅಲ್ಲೋ ಕರಿಯಪ್ಪ, ನೀ ಬಲು ಸಾಂತ ಕಾಣತೀ ಇವತ್ತ? ಕೇಳಿಲ್ಲೇನು ಇನ್ನೂ ಸುದ್ದೀನ?

ಕರಿಯ—ಯಾವ ಸುದ್ದೆಪಾ? ಮತ್ತ ಯಾವ ಸುದ್ದಿ ತಂದಿ ನೀನು?

ಡಂಗುರದವ—ಅಲ್ಲಪಾ, ನಮ್ಮ ನಾಯಕರ ವಲ್ಲೀನ ಕಸಗೊಂಡರಂತಲ್ಲ ಶ್ರೀಮಂತರು!

ಕರಿಯ—ಏ ನಿನ! ಇದಕs ಅಂತೀಯಾ ನೀನು! ಅದು ಏನು ಸುದ್ದಿ ಬಿಡು. ವಲ್ಲಿ ಕಸಗೊಂಡು ಶ್ರೀಮಂತ ಆಗಲಿ ಸರಕಾರ!

ಡಂಗುರದವ—ಊರಾಗ ನೋಡಿದಲ್ಲೆ ಜನರು ಸಿಟ್ಟಿಗೆದ್ದಾರಪಾ. ನಾಕು ಮಂದಿ ಕೂಡಿ ನನಗ ಹೊಡಿಲಾಕ ಬಂದಿದ್ದರು,-ಇವ ಸರಕಾರದ ಡಂಗುರದವ ಅಂತ ಹೇಳಿ! ಇನ್ನೂ ಚಾವಡಿ ಮುಂದ ಜನ ಹೀಂಗ ನೆರದ್ಯೆತಿ ನೋಡು. ಇರವಿ ಹೋಗಾಕ ಜಾಗಾ ಇಲ್ಲ.

ಕರಿಯ—ನೆರದಿದ್ದಾರು ಬಿಡು. ಅದನ್ನ ತೊಗೊಂಡು ನಮಗೇನು ಮಾಡೋದು? ನಮ್ಮ ಹಾದಿ ನಾವು ಹಿಡಿದರ ಆತು.

ಡಂಗುರದವ—ಬಲು ಚುರುಕು ಇದ್ದೀಯಪಾ ನೀ ಕರಿಯಪ್ಪಾ. ಒಂದೀಟರೆ ಮಾತಿನಾಗ ಸಿಗಾಣಿಲ್ಲ ನೋಡು! ಅಲ್ಲ, ನಾ ಫಿತೂರಿ ಮನಸ್ಯಾ ಅಂತ ತಿಳಿದೀಯೆನು ಮತ್ತ? ಸರಕಾರದ ಕೂಳು ತಿಂತೀವಿ. ಅವರ ಕೆಲಸ ಮಾಡಬೇಕಾಗತ್ತೈತಿ. ಇಲ್ಲದಿದ್ದರ ನಾಯಕರು ಮಾಡಿದ ಉಪಕಾರ

ಹುಗಿದರೂ ಮರೆಯೋಹಾಂಗಿಲ್ಲ ನೋಡು ನಾನು !

ಕರಿಯ—ಅಂಥಾದೇನು ಉಪಕಾರ ಮಾಡಿದರಪಾ ನಾಯಕರು ನಿನಗೆ ?

ಡಂಗುರದವ—ಒಂದs? ಎರಡs? ಏನಂತ ಹೇಳಬೇಕಪಾ ಅವನ್ನ ! ಇವತ್ತಿಗೆ ನಾವು ಹಚ್ಚೋದು ಅವರ ದೀಪ. ಉಣ್ಣೋದು ಅವರ ಮನಿ ಅನ್ನ. ಆ ಹಿರೇ ಬರ ಬಂದಿತ್ತಲ್ಲ, ನೆಪ್ಪೈತೇ ನಿನಗ ? ಆವಾಗ ಊರಾಗೆಲ್ಲ ಡೌಗಿ ಹಾರ್‍ಯಾಡಿದವು. ತಿನ್ನಾಕ ಕೂಳು ಇದ್ದಿದ್ದಿಲ್ಲ ಮಂದಿಗೆ. ಆಗ ನಾನೂ ಉಳಿದ ಇಪ್ಪತ್ತು ಲಮಾಣೇರು ಕೂಡಿ ದರೋಡೆ ಹೋದಿವಿ ನಾಯಕರ ಮನಿಗೆ !

ಕರಿಯ—ಅಂತೂ ನಿನ್ನ ಉಪಕಾರಾನೂ ಬಹಳ ಆಗೇದನ್ನು ನಾಯಕರ ಮ್ಯಾಗ !

ಡಂಗುರದವ—ಹೇಳಿತೀನಿ ಕೇಳು ಮುಂದ, ಮನಿ ಆಳಮಕ್ಕಳೆಲ್ಲಾ ಬೆದರಿ ದನದ ಹಕ್ಯಾಗ ನಿಂತಿದ್ದರು ಹೋಗಿ. ನಾಯಕರು ಕೇಳಿದರು ಅವರಿಗೆ: 'ಇಲ್ಲಿ ಯಾಕ ನಿಂತಿರೆಲೆ ಮಕ್ಕಳರ್‍ಯಾ !' ಅಂತ. 'ದರೋಡೆ ಬಂದೈತರಿ. ಏನು ಮಾಡೂನು ' ಅಂತ ಬಾಯಿ ಬಿಟ್ಟವು ಆಳುಗೋಳು. 'ಬಂದ ರೇನಾಯಿತು ? ಮುಂಚೆ ಬಾಗಿಲ ತಗದು ಬಿಡ್ರಲೆ ! ಒಳಗ ಬರ್‍ಲಿ !' ಅಂತ ಹೇಳಿದರು ನಾಯಕರು ! 'ಇಂತಾ ವಿಷವ್ಯಾಳ್ಯಾದಾಗ ಚ್ಯಾಷ್ಟಿ ಮಾಡಬಾರದು ಧಣೇರು' ಅಂತ ಕೈಕಾಲು ಬಿದ್ದವು ಆಳು. 'ಇದು ಚ್ಯಾಷ್ಟಿ ಅಲ್ಲರೆಲೆ. ದೇವರಾಣಿ ! ಬಾಗಿಲು ತಗೀರಿ. ನಿಮ್ಮ ಜೀವಕ್ಕ ಧಕ್ಕಿ ಬಂದರ ನಾ ಇದ್ದೀನಿ ಜಾಮೀನು' ಅಂದರು ನಾಯಕರು. ಗುಳೇದ ಗುಡ್ಡದ ಬಸವಣ್ಣಿ ಗಳಗಳ ಅತಗೋತ ಬಾಗಿಲ ತಗದ.

ಕರಿಯ—ಬಾಗಿಲ ತಗಿ ಅಂದದ್ದು ಚ್ಯಾಷ್ಟಿ ಅಲ್ಲೇನು ಹಾಗಾದರ ?

ಡಂಗುರದವ—ಅದು ಯಾಕ ಚ್ಯಾಷ್ಟ್ಯಾದೀತು ಕರಿಯಪ್ಪ ? ಮುಂದ ಹೇಳ ತೀನಿ ಕೇಳು. ನೀ ಆವಾಗ ಅವರ ಆಳುಮಗ ಇದ್ದರ ಏನು ಮಾಡ ತಿದ್ಯೋ ಏನೊ ! ಇನ್ನ ಕನ್ನ ಹಾಕಬೇಕು, ಗ್ವಾಡಿ ಹಾರಬೇಕು ಅಂಬೊ ಲೆಕ್ಕದಾಗ ಇದ್ದಿವಿ ನಾವು. 'ಅನ್ನ ! ಅನ್ನ ! ಹಸನಾತ್ !' ಅಂತ ಒದರತಿದ್ದರು ನಮ್ಮ ಮಂದಿ. ಓಣ್ಯಾಗಿನ ಮಂದೆಲ್ಲಾ ಬಾಗಿಲ ಹಾಕಿ ಹೌಹಾರ ಕೂತಿತ್ತು. ಪಟಕ್ಕನ ಬಾಗಿಲ ತೆರೆದ ಕೂಡಲೆ

ಗಸಕ್ಕನ ಒಳಗ ಹೊಕ್ಕಿವಿ ನೋಡು ! ಇನ್ನ ಮನಿ ಲೂಟಿ ಮಾಡ ಬೇಕಂತ ಒಳನುಗ್ಗೋವರ ಇದ್ದಿವಿ. ಅಂಗಳದ ಕಟ್ಟಿ ಮ್ಯಾಗ ಕೂತಿದ್ದರು ನೋಡು ನಾಯಕರು. ಮ್ಯೆಮ್ಯಾಗ ಒಂದು ಅಂಗಿ ; ಉಟ್ಟಿದ್ದೊಂದು ದೋತರ. ಹಂಗ ಬಕ್ಕ ನೆತ್ತೀಲೆ ಸುಮ್ಮನ ಕೂತಿದ್ದರು. ಅವರನ್ನ ನೋಡಿ ಹೆದರಿತು ನೋಡು ನಮ್ಮ ಜನ, ಕರಿಯಪ್ಪ ! ಬುದಿಂಗನ ಬಂದವರs ಚಕ್ಕನ ನಿಂತಿವಿ ಅವರೆದುರಿಗೆ.

ಕರಿಯ—ಆವಾಗ ಏನು ಮಾಡಿದರು ನಾಯಕರು ? ಇದೊಂದು ಹೊಸ ಮಾತs ಹೇಳತಿ ಬಿಡು. ನನಗೆ ಗೊತ್ತಿದ್ದಿಲ್ಲ !

ಡಂಗುರದವ—ಮುಂದ ಹೇಳತೇನಿ ನೋಡು. 'ಯಾಕರೆಪಾ ತಮುಗೋಳ್ರ್ಯಾ! ಬಂದಿದ್ದು ?' ಅಂದರು ನಾಯಕರು. 'ಹೊಟ್ಟಿಗೆ ಅನ್ನಿಲ್ಲರಿ. ದರೋಡೆ ಹಾಕಾಕ ಬಂದೀವಿ ?' ಅಂತ ಹೇಳಿತು ನಮ್ಮ ಮಂದಿ. 'ಕಾಳು ಬೇಡಿ ಇಸಗೋಬೇಕೋ ಏನು ದರೋಡೆ ಹಾಕಬೇಕ್ರಲೆ !' ಅಂತ ಕೇಳಿದರು ನಾಯಕರು. 'ಬೇಡಾಕ ಹೋದ್ರ ಯಾರೂ ಕೊಡೋದುಲ್ರಿ' ಅಂತ ಗುರುಗುಟ್ಟಿತು ನಮ್ಮ ಜನ. 'ಹಾಂಗಾರ ನಿಮ್ಮ ಮರ್ಜಿರೆಪಾ !' ಅಂದರು ನಾಯಕರು. 'ಇದು ನಮ್ಮ ಮನಿ. ಒಳಗಿದ್ದಾರ ಹೆಣ್ಣು ಮಕ್ಕಳು, ಹುಡುಗರು. ಅವರ ಮ್ಯೆಗೆ ಕ್ಯೆ ಹಚ್ಚಬ್ಯಾಡ್ರಿ. ಮನ್ಯಾಗ ಬಾಕಿ ಇದ್ದದ್ದೆಲ್ಲಾ ತೊಗೊಂಡು ಹೋಗ್ರಿ. ನಿಮ್ಮ ಕ್ಯೆಹಿಡಿಯೂದುಲ್ಲ. ಏ ! ಬಸವಣ್ಣಿ ! ಕರಿಯೋ ಎಲ್ಲಾರನ್ನ. ಇಲ್ಲಿ ಅಂಗಳದಾಗ ಸುಮ್ಮನ ಕೂಡ್ರಿ ನೀವು.' ಅಂತ ಹೇಳಿದರು ನಾಯಕರು. ಅವರ ದನಿ ತುಸೂ ನಾರ ನಡಿಗೀತೇನು ! ಅವರ ಮುಕ ಈಟಾರ ಬದಲಾತೇನು ? ಛೇ! ನಿನ ! ಇಂತಾ ಮುತ್ತಿನಂತಾ ಮಾತಾಡಬೇಕು ನಾಯಕರುs ನೋಡು.

ಕರಿಯ— ಆಗೇನು ಮಾಡಿತು ನಿಮ್ಮ ಜನ ?

ಡಂಗುರದವ—ಎಲ್ಲಾರು ಬೆಪ್ಪಾಗಿ ನಿಂತಿವೆಪಾ ನಾಯಕರ ಎದುರಿಗೆ. ನನಗ ಅಳುವು ತಡಿಲಿಲ್ಲ ನೋಡು. ಗಟ್ಯ್ಯಾಗಿ ಅತ್ತು ನಾಯಕರ ಪಾದಕ ಬಿದ್ದೆ. 'ತಪ್ಪು ಹೊಟ್ಟ್ಯಾಗ ಹಕ್ಕೊಳ್ರಿ ಧಣೇರು !' ಅಂತ ಬಿಕ್ಕಿದೆ, 'ಬಿಡೋ ! ನಿನ ! ನಿನ್ನದೇನು ತಪ್ಪು ?' ಅಂತ ಬೆನ್ನು ಚಪ್ಪರಿಸಿದರು ನಾಯಕರು. 'ಈಗ ನಮಗೇನು ಮಾಡಂತೀರಿ ಧಣೇರು ?' ಅಂತ

ಕೈಮುಗಿದು ಕೇಳಿಕೊಂಡಿವಿ. 'ನಮ್ಮ ಮನ್ಯಾಗಿನ ಜೋಳದ ಚೀಲ ಎಲ್ಲಾ ಒಯ್ರಿ' ಅಂತ ಹೇಳಿದರು ನಾಯಕರು. 'ಅದು ತೀರಿದ ಮ್ಯಾಲ ಮುಂದ ನಮಗೇನಂತೀರಿ?' ಅಂತ ಪರಶ್ನಿ ಹಾಕಿದಿವಿ. 'ಅದರ ಚಿಂತಿ ನಿಮಗ್ಯಾಕ ?' ಅಂತ ನಾಯಕರು ಸವಾಲು ಮಾಡಿದರು. ಆ ಚೀಲಾ ರವಾನಿ ಮಾಡಿ ಮನೀಗೆ ತಿರುಗಿ ಬಂದಿವೆಪಾ. ಮುಂದ ಒಂದು ವರ್ಷದ ತನಕ ನಮ್ಮ ಹೊಟ್ಟಿ-ಬಟ್ಟಿ ನೋಡಿಕೊಂಡರು ನಾಯಕರು ! ಆಗ ಹಿರೇ ಶ್ರೀಮಂತರಿದ್ದರು. ಅವರಿಗೆ ಹೇಳಿ ಸರಕಾರದಾಗ ನಮಗೆಲ್ಲಾರಿಗು ಕೆಲಸಾ ಕೊಡಿಸಿದರು. ನಾ ಡಂಗುರದವ ಆಗಿದ್ದು ಅವತ್ತಿನಿಂದ ನೋಡು ಕರಿಯಪ್ಪ ! ಈ ಮಾತು ಸತ್ತರೂ ಮರೆಯಾಣs? ಎಂದೆಂದಿಗೂ ಆಗಾಕಿಲ್ಲ ಈ ಮಾತು !

ಕರಿಯ—ಇದೊಂದು ಹೊಸ ಮಾತು ಕೇಳಿದೆ ಬಿಡಪಾ ಇವತ್ತ. ಅಲ್ಲೋ ! ಇದಕ್ಕೆ ಪ್ರತಿಯಾಗಿ ನೀ ಮಾಡಿದ ಕೆಲಸ ಏನು ? ನಾಯಕರ ವಿರುದ್ಧ ಊರೆಲ್ಲಾ ಡಂಗುರ ಹೊಡೆಯೋದ ಹೌದಲ್ಲೋ ?

ಡಂಗುರದವ— ಏನು ಮಾಡೋದು ಕರಿಯಪ್ಪ ! ಕಾಲಾನs ತಿರುಗ್ಯೈತಿ ಈಗ. ಹಿರೇ ಶ್ರೀಮಂತರು ಇದ್ದಾಗಿನ ಮಜಾ ಉಳಿದಿಲ್ಲ ಈಗ. ಹೊಟ್ಟಿಗೊಂದು ಏನಾರ ಕಾಯಕಾ ಮಾಡಾಕಬೇಕs ? ಮತ್ತ ಕಳ್ಳರು-ಕಾಕರು ಆಗಬಾರದಂತ ತಾಕೀಜು ಬ್ಯಾರೆ ಮಾಡ್ಯಾರ ನಾಯಕರು ! ಹಿಡಿದ ಕೆಲಸಾನ ನಂಬಿಕೊಂಡು ಅದೀವಿ. ಈ ಡಂಗುರ ಹೊಡಿಯೋದಂಾಗ ನನ್ನ ಮನಸು ಐತೆಂತ ತಿಳಿದ್ಯಾ ? ಅದ್ಯಾರಿಗೆ ಬೇಕು ಮಾರಾಯಾ ! ತುರಂಗದ ಹೆದರಕಿ ಒಂದು ಇಲ್ಲದಿದ್ದರ ಎಂದಿಗೋ ನಿರುಂಬಳ ಆಗತಿದ್ದೆ. ಒಂದು ಕಿವಿಮಾತು ಹೇಳತೇನಿ ನೋಡು, ಕರಿಯಪ್ಪ! ಇಲ್ಲಿ ಸನ್ಯಾಕ ಬಾ. (ಮೆಲ್ಲಗೆ) ಮತ್ತ-ಈಗಿನ ಶ್ರೀಮಂತರ ಆಳಿಕಿ ಮುಗಿದು ಅವರ ಮುಂದಿನ ಪೀಳಿಗೆ ಆಗಲಿ, ನಾಯಕರಾಗಲಿ ಆಳತಾರs ಅಂತ ಹೇಳಿ ಡಂಗುರ ಹೊಡಿದ ದಿವಸ ನನ್ನ ಕಣ್ತುಂಬ ನಿದ್ದಿ ಬಂದೀತು ನೋಡು !

ಕರಿಯ—ನಾಯಕರಿಗೆ ಆದ ಅಪಮಾನಕ್ಕ ಊರೆಲ್ಲಾ ಕಿಚ್ಚೆ ಇವತ್ತೆದ್ದs ದೇಳು ! ಇಂಥಾವು ಇನ್ನೊಂದೆರಡು ಪ್ರಸಂಗ ಆದರ ಆಳಿಗಾಲಾs ಬಂತು

ಶ್ರೀಮಂತರದು !

ಡಂಗುರದವ—ಏನಾಕ್ಕೈತೋ ಏನಪಾ ! ಶಿವನೇ ಬಲ್ಲ ಮುಂದಿನ ಮಾತು. ಈಗ ಎಲ್ಲಿ ಹೊಂಟು ನಿಂತಿ ಕರಿಯಪ್ಪ, ನೀನು ?

ಕರಿಯ—ಇಲ್ಲೇ ವೈದ್ಯರ ಕಡೆಗೆ ಹೋಗಿ ಬರತೇನು. ಧಣೇರ ಪ್ರಕೃತಿ ನೆಟ್ಟಗಿಲ್ಲ.

ಡಂಗುರದವ—ಅಯ್ಯೋ ! ಶಿವನ ! ಏನಾತು ?

ಕರಿಯ—ಏನಿಲ್ಲ ಏಳೋ ನಿನ ! ನೆಗಡಿ, ಕೆಮ್ಮು,-ಆಯಾಸಾಗೇದ ಧಣೇರಿಗೆ. ಔಷಧ ತೊಗೊಂಡು ಬರತೇನಿ.

ಡಂಗುರದವ—ಆಗದ ಏನು, ಕರಿಯಪ್ಪ ! ಹೋಗು, ತೊಗೊಂಡು ಬಾ ಅಕ್ಕ ದ್ಯಾನ. ನಾನೂ ದುರಗಮ್ಮನ ಗುಡಿಗೆ ಹೊಂಟೇನಿ. ಹೊಂತೂಟಲೆ ನೆಟ್ಟಗಾಗಲಂತ ಬೇಡಿಕೊಂಡು ಬರತೇನು. ಇನ್ನ ಮತ್ತ ಯಾವಾಗ ಬೆಟ್ಟಿ ಕರಿಯಪ್ಪ, ನಿನ್ನದು ?

ಕರಿಯ—ಛೀ ! ನಿನ ! ಬಿಡೋ ! ಎಡವಿ ಬಿದ್ದರ ನಿಮ್ಮ ಮನಿಗೆ ಬರತಾವ ನನ್ನ ಕಾಲು. ಒಂದs ಊರಾಗ ಭೆಟ್ಟಿ ಆಗೋದು ಏನು ಹೆಚ್ಚೇದಿ ?

(ಹೋಗುತ್ತಾರೆ.)

---

## ಪ್ರವೇಶ ೪

(ಭೀಮಣ್ಣ ನಾಯಕನ ಮನೆ. ಪಡಸಾಲೆಯಲ್ಲಿ ಲಕ್ಷ್ಮಮ್ಮನವರು ಹತ್ತಿ ಬುಟ್ಟಿಯನ್ನು ಎದುರಿಗಿಟ್ಟುಕೊಂಡು ಬತ್ತಿಯನ್ನು ಹೊಸೆಯುತ್ತ ಕೂತಿದ್ದಾರೆ. ಸುಭದ್ರಾಬಾಯಿಯವರು ಹೆಣಿಕೆಯ ವಸ್ತ್ರವನ್ನು ಹಾಕುತ್ತಿದ್ದಾರೆ.)

ಲಕ್ಷ್ಮಮ್ಮ—ಹೋಗಿ ಬಂದೆಯಾ ಈಶ್ವರದೇವರ ಗುಡಿಗೆ, ಸುಭದ್ರಾಬಾಯಿ ? ದೀಪ ಹಚ್ಚುವ ಹೊತ್ತಾಯಿತು. ಇನ್ನಾದರೂ ನನ್ನ ಜೊತೆಗೆ ಬರ ಬಾರದೆ ?

ಸುಭದ್ರಾ—ನಾಳೆ ಹೋಗಿ ಬರುತ್ತೇನೆ. ನಾಳೆ ಸೋಮವಾರ. ತೀವ್ರ ಎಲ್ಲ ಕೆಲಸವನ್ನು ಮುಗಿಸಿಕೊಂಡು ಹೋಗಿ ದೇವರ ದರ್ಶನ ತೊಗೊಂಡು ಬರುತ್ತೇನೆ.

ಲಕ್ಷ್ಮಮ್ಮ—ದಿನ ಬೆಳಗಾದರೆ ಹೀಗೆ ಮಾಡಿದರೆ ಹೇಗೆ, ನೋಡು ? ಇಂದು ನನ್ನ ಜೊತೆಗಾದರೂ ನಡೆ. ಮುಮುಕಿಯರೊಡನೆ ಬರಲಿಕ್ಕೆ ಮಾನ ಬೇರೆ ಸಾಲುವದಿಲ್ಲ, ನಿಮಗೆ. ಏನೋ ಈಗಿನ ಕಾಲವೇ ತಿರುಗಿದೆ, ತಾಯಿ. ಗುಡಿ-ಗುಂಡಾರದಲ್ಲಿ ಭಕ್ತಿ-ವಿಶ್ವಾಸವಿರಬೇಕು. ದೇವರು-ದಿಂಡರಲ್ಲಿ ನಂಬಿಗೆ ಬೇಕು. ಇಲ್ಲದಿದ್ದರೆ ನಮ್ಮ ಇಚ್ಛೆಗಳು ಹೇಗೆ ಪೂರ್ಣವಾದಾವು? ಈಗ ಕಡಿಗೆ ನಿಂತು ಎಷ್ಟೊಂದು ದಿವಸವಾಯಿತು, ಸುಭದ್ರಾಬಾಯಿ ? ನನಗೆ ಅಜಮಾಸು ಲೆಕ್ಕ ಬೇಡ.

ಸುಭದ್ರಾ—ಸುಮಾರು ಎರಡೂವರಿ ತಿಂಗಳಾಗಿರಬೇಕು.

ಲಕ್ಷ್ಮಮ್ಮ—ತುಂಬು ಬಸಿರಿಯಾಗು ನಮ್ಮವ್ವ. ನವಮಾಸ ತುಂಬಿ ಗಂಡು ಮಗುವನ್ನು ಹಡಿ! ದೇವರಿಗೆ ಈಗಾಗಲೆ ನಾನು ಹರಕೆ ಹೊತ್ತಿದ್ದೇನೆ. ಬುತ್ತಿಪೂಜೆ ಕಟ್ಟಿಸೋಣ. ಬ್ರಾಹ್ಮಣಭೋಜನ ಹಾಕಿಸೋಣ. ಇಂದು ತಪ್ಪದೆ ನನ್ನ ಜೊತೆಗೆ ಬಾ ಗುಡಿಗೆ. ನಿನ್ನ ಬಾಣಂತಿತನವನ್ನು ಇಲ್ಲಿಯೇ ನಾನೇ ಮಾಡುತ್ತೇನೆ. ಚೊಚ್ಚಲವಾದರೇನಾಯಿತು ? ಬೇಕಾದರೆ ನಿಮ್ಮ ಅಪ್ಪನು ಬಂದು ಇಲ್ಲಿಯೇ ನನಗೆ ನೆರವಾಗ ಬಹುದು. ನಿನಗೆ ಒಪ್ಪಿಗೆಯೆ ಸುಭದ್ರಾ ?

ಸುಭದ್ರಾ—ಹೂಂ.

ಲಕ್ಷ್ಮಮ್ಮ—ನಮ್ಮ ಭೀಮು, (ಬಿಕ್ಕುತ್ತ) ನಮ್ಮ . . . ಭೀಮು ಮುತ್ತಿ

ನಂಥಾ ಹುಡುಗ. ಬಲು ಕಷ್ಟಪಡಬೇಕಾಯಿತು. ಅವನಿಗೆ. ಬೆಂಗಳೂರಿನ ಕಡೆಯ ಒಬ್ಬ ಜಾಗೀರದಾರರ ಹೆಣ್ಣನ್ನು ತಂದು ಅವನ ಲಗ್ನ ಮಾಡಿದೆವು. ಕೆಲವು ವರ್ಷಗಳಾದ ಮೇಲೆ ಮಕ್ಕಳಿಲ್ಲದೆ ಭಗ್ಗನೆ ಉರಿದು ಹೋದಳು ಆ ಪ್ರಾಣಿ. ನಿನ್ನಲ್ಲಿ ನನ್ನ ವಿಶ್ವಾಸವಿದೆ, ಸುಭದ್ರಾಬಾಯಿ. ನಿನ್ನನ್ನು ತೋರಿಸಲು ನಮ್ಮ ಮನೆಗೆ ಕರೆದುಕೊಂಡು ಬಂದಾಗ, ಬಲಗಾಲಿಟ್ಟು ನೀನು ಗೃಹಪ್ರವೇಶ ಮಾಡಿದೆ. ಯಾರಿಗೂ ಅದು ಗೊತ್ತಿರಲಿಲ್ಲ. ನಾನೊಬ್ಬಳು ನೋಡುತ್ತಿದ್ದೆ. ಆಗಿನಿಂದ ನಿನ್ನನ್ನೇ ಲಗ್ನವಾಗೆಂದು ಭೀಮೂನಿಗೆ ದುಂಬಾಲು ಬಿದ್ದೆ. ಭೀಮು,-ಮುತ್ತಿನಂಥ ಹುಡುಗ. ನನ್ನ ಮಾತು ಕೇಳಿದ. ಗಂಡು ಮಗುವನ್ನು ಹೆತ್ತು ನಮ್ಮ ಮನೆಯ ದೀಪವನ್ನು ಕಾಯುವ ಹೊಣೆಯು ನಿನ್ನನ್ನೇ ಕೂಡಿದೆ (ಲಟಕ್ಕು ಮುರಿಯುವಳು) ಅವರು ಇನ್ನೂ ನಾಲ್ಕೊಪ್ಪತ್ತು ಇರಲಿಲ್ಲ.... ಇದ್ದರೆ....ಇವನ್ನೆಲ್ಲ ನೋಡುತ್ತಿದ್ದರು. (ಕಣ್ಣೊರಸಿಕೊಳ್ಳುವಳು.)

ಸುಭದ್ರಾ—ನಾವಿಬ್ಬರೂ ಗುಡಿಗೆ ಹೋದರೆ ಮನೆಯಲ್ಲಿ....?

ಲಕ್ಷ್ಮಮ್ಮ—ಛೀ, ಹುಚ್ಚಿ. ನಾವೆಷ್ಟು ಹೊತ್ತು ಹೋಗುತ್ತೇವೆ ? ದೀಪ ಹಚ್ಚುವದರೊಳಗಾಗಿ ತಿರುಗಿ ಮನೆಯನ್ನು ಮುಟ್ಟಬಹುದು. ಗಂಡನ ಸಲುವಾಗಿದ್ದ ನಿನ್ನ ಕಾಳಜಿ ರಾಜ್ಯಕ್ಕೆ ಹೊರತಾಗಿದೆ ನಮ್ಮವ್ವ. ಏನಾಗಿದೆ ಭೀಮೂನಿಗೆ ? ಮೊನ್ನೆ ಬೆನಕನಹಳ್ಳಿಗೆ ಹೋಗಿಬಂದ. ಇವತ್ತೇನೊ ಶ್ರೀಮಂತರೊಡನೆ ಮನಸ್ತಾಪವಾಯಿತಂತೆ, ಆಯಾಸವಾಗಿರಬಹುದು, ಅಷ್ಟೆ. ತುಸು ಜ್ವರ, ತಲೆಶೂಲೆ,-ನಾಳೆ ಕಡಿಮೆಯಾಗುವದು. ಆ ಲಿಂಗಾಷ್ಟಕ ಚೂರ್ಣವನ್ನು ಕೊಡೆಂದು ಹೇಳಿದ್ದೆ. ಕೊಟ್ಟಿದ್ದೀಯಾ ಆತನಿಗೆ ?

ಸುಭದ್ರಾ—ಹಿಂಗಾಷ್ಟಕವೋ ನೀವೆನ್ನುವದು ?

ಲಕ್ಷ್ಮಮ್ಮ—ಹೌದು, ನಮ್ಮವ್ವಾ. ಸುಟ್ಟು ಬರಲಿ ! ಹಿಂಗಾಷ್ಟಕ, ಹಿಂಗಾಷ್ಟಕ, ಎಷ್ಟು ಸಲವೆಂದರೂ ಲಿಂಗಾಷ್ಟಕವೆಂದೇ ಬಾಯಿಗೆ ಬರುತ್ತದೆ ನೋಡು. ಕೊಟ್ಟಿದ್ದೀಯಾ ಲಿಂಗಾಷ್ಟಕವನ್ನು ?

ಸುಭದ್ರಾ—ಹೂಂ. ಕೊಟ್ಟಿದ್ದೇನೆ.

ಲಕ್ಷ್ಮಮ್ಮ—ನಡೆ ಹಾಗಾದರೆ. ಇನ್ನು ಬೇಗನೆ ಹೋಗಿ ಬರೋಣ. ನಾಳೆ

ನಿಶ್ಚಯವಾಗಿ ಭೀಮೂನಿಗೆ ಗುಣವಾಗುವದು. ಏಕೆ ? ಇಷ್ಟೇಕೆ ಸಣ್ಣ ಮೋರೆ ಮಾಡಿದ್ದೀಯೆ ? ಹೇಳಿ ಬರಲ್ಯಾ ಭೀಮೂನಿಗೆ ?

ಸುಭದ್ರಾ—ಹೂಂ.

ಲಕ್ಷ್ಮವ್ವ—ಆಗಲಿ ನಮ್ಮವ್ವ. ಭೀಮೂ, ಏ ಭೀಮೂ ! (ತೆರೆಯನ್ನು ಸರಿಸುವಳು. ಹಾಸಿಗೆಯ ಮೇಲೆ ಹೊದ್ದುಕೊಂಡು ಭೀಮಣ್ಣ ನಾಯಕನು ಸುಮ್ಮನೆ ಒರಗಿಕೊಂಡಿರುವನು. ಸುಭದ್ರಾಬಾಯಿಯು ನಾಯಕನನ್ನು ನೋಡುತ್ತ ಹೋಗುವಳು.)

ಭೀಮಣ್ಣ—ಯಾಕೆ, ಕರೆದೆಯೇನು ಅವ್ವಾ ?

ಲಕ್ಷ್ಮವ್ವ—(ಹತ್ತಿರ ಬಂದು) ಹೂನಪ್ಪಾ. ಹೇಗಿದೆ ಈಗ ಜ್ವರ ?

ಭೀಮಣ್ಣ—ಆರಿದೆ ಸ್ವಲ್ಪ. ಈಗ ಬೆವರು ಬರಹತ್ತಿದೆ.

ಲಕ್ಷ್ಮವ್ವ—ಇಂದು ರಾತ್ರಿ ಊಟ ಮಾಡುತ್ತೀಯಾ ? ಏನು ಹಣ್ಣು ಹಾಲಿನ ಮೇಲಿ ಇರುತ್ತೀಯೊ ? ತೋಟದಿಂದ ಕರಿಯಪ್ಪನು ಪ್ಯೆಂಪ್ಯೆಂ ಹಣ್ಣನ್ನು ತಂದು ಕೊಟ್ಟಿದ್ದಾನೆ. ರಾಮಣ್ಣನವರು ಸಾಬುಹಣ್ಣು ಕಳಿಸಿದ್ದಾರೆ. ಅವರೂ ಬರಬಹುದು ಇದೇ ಈಗ. ಬರುವೆವೆಂದು ಹೇಳಿ ಕಳುಹಿದ್ದರು.

ಭೀಮಣ್ಣ—ನನಗೇನೂ ಬೇಡ, ಅವ್ವಾ. ಇಂದು ರಾತ್ರಿಗೂ ಉಪವಾಸ ಮಾಡುತ್ತೇನೆ. ನಾಳೆ ಮುಂಜಾವಿಗೆ ಜ್ವರವೆಲ್ಲ ಇಳಿದು ಹೋಗುವದು.

ಲಕ್ಷ್ಮವ್ವ—ಒಂದಿಷ್ಟು ಹಾಲು ಕುಡಿ. ಅದಕ್ಕೇನಾಗಿದೆ. ಈಗ ಬಂದ ಮೇಲೆ ಬಿಸಿ ಮಾಡಿ ಒಂದು ಲೋಟದಲ್ಲಿ ಹಾಕಿ ಕೊಡುತ್ತೇನೆ. ನಾವು ಸ್ವಲ್ಪ ಈಶ್ವರದೇವರ ಗುಡಿಗೆ ಹೋಗಿ ಬರೋಣವೆ, ಭೀಮು ?

ಭೀಮಣ್ಣ—ಹೋಗಿ ಬಾ, ಅವ್ವಾ ! ನನಗೇನಾಗಿದೆ ? ನೆಟ್ಟಗಿದ್ದೇನೆ. ಈಕೆ ಬರುತ್ತಾಳೇನು ನಿನ್ನ ಸಂಗಡ ?

ಲಕ್ಷ್ಮವ್ವ—ಹೂನಪ್ಪಾ. ನಾನೇ ಜೊತೆಯಲ್ಲಿ ಕರೆದುಕೊಂಡು ಹೋಗುತ್ತೇನೆ. ಇಂದು ಅವಳಿಗಿಷ್ಟು ದೇವರ ದರ್ಶನ ಮಾಡಿಸಬೇಕೆಂದು ಮನಸ್ಸಿದೆ. ಈಗ ಬರುತ್ತೇವೆ, ಹೋದವರೆ.

ಭೀಮಣ್ಣ—ಇನ್ನೂ ಹೊತ್ತು ಮುಳುಗುವದಕ್ಕಿಂತ ತುಸು ಮುಂಚೆ ಹೊರಟದ್ದರೆ ಚೆನ್ನಾಗಿತ್ತು. ತಿರುಗಿ ಬೇಗ ಬರಲು ಅನುಕೂಲವಾಗು

ತ್ತಿತ್ತು. ಇರಲವ್ವಾ, ಹೋಗಿ ಬರ್ರಿ. ಆ ಕರಿಯಪ್ಪನನ್ನು ಇಲ್ಲಿ ತುಸು ಕಳಿಸಿಕೊಡು. ಮಾತನಾಡುತ್ತ ಮಲಗುತ್ತೇನೆ.

ಲಕ್ಷ್ಮಮ್ಮ—ಈಗ ಬರುತ್ತೇವೆ. ಎಷ್ಟು ಹೊತ್ತು ? ಏ ! ಕರಿಯಪ್ಪಾ ! ಏ ! ಕರಿಯಾ ! ನಾಯಕರು ಕರೆಯುವರು ನೋಡು. (ಲಕ್ಷ್ಮಮ್ಮನವರು ಹೋಗುವರು.)

ಭೀಮಣ್ಣ—ಬೆಂಕಿ ! ಬೆಂಕಿ ! ಮೈಯೆಲ್ಲ ಬೆಂಕಿ ಹತ್ತಿದೆ ನನಗೆ ! ತನ್ನ ಮನಸಿಲ್ಲದೆ ಭೂಮಿಯ ಮೇಲೆ ಹುಟ್ಟಿಬಂದ ಮಾನವನು ಹೀಗೆ ಕಷ್ಟ ಪಡುವದು ಯಾವ ನ್ಯಾಯ ? ಜಗತ್ತೊಂದು ಸ್ಮಶಾನವಾಗಿದೆ. ಒಂದು ರಣರಂಗವದು. ಇಲ್ಲಿಯ ಒಂದೊಂದು ಅನ್ಯಾಯವೂ ತನ್ನೊಡನೆ ಗುದುಮುರಿಗೆ ಹಾಕಲು ಕರೆಯುವದು. ದೇಹಕ್ಕೆ ತೆರವಿಲ್ಲ, ಮನಸಿಗೆ ತೆರವಿಲ್ಲ. ರಕ್ಷಕನಾಗಲು ಒಬ್ಬನು ಹೆಣಗಿದರೆ,—ಅವನು ಎಷ್ಟು ಜನರನ್ನೆಂತ ರಕ್ಷಿಸಬೇಕು ! ವಿಧಿಯೆ ; ನೀನು ವಿಧಿಸಿದ ಶಿಕ್ಷೆ ಕಠಿಣತಮವಾದುದು. ಅದನ್ನು ಅನುಭೋಗಿಸಲು ಅಖಂಡ ಸಹನೆಯನ್ನು ಕೊಡು. ಯಾರು ? ಕರಿಯಪ್ಪನೇನು ? ಏನು ಮಾಡುತ್ತಿರುವಿ ?

ಕರಿಯ—ದೀಪ ಹಚ್ಚುತ್ತೇನೆ, ಧಣಿಯರೆ. ಹೊರಗೆ ಮಬ್ಬು ಕವಿಯುತ್ತ ಬಂತು.

ಭೀಮಣ್ಣ—ಅಪ್ಪನವರು ಗುಡಿಗೆ ಹೋದರೇನೊ ? ಹೋಗಿ ಎಷ್ಟು ಹೊತ್ತಾಯಿತು ?

ಕರಿಯ—ಇದೀಗ ಹೋದರು ಬುದ್ಧಿ.

ಭೀಮಣ್ಣ—ಬಾಯಿಯವರೂ ಹೋಗಿದ್ದಾರೇನು ?

ಕರಿಯ—ಅವರೂ ಹೋದರು, ಬುದ್ಧಿ. ಅವರೊಡನೆ ಗುಡಿಗೆ ಹೋಗಿ ಇದೀಗ ತಿರುಗಿ ಬರುವೆವೆಂದು ತಿಳಿಸಲು ಹೇಳಿದರು ನನಗೆ.

ಭೀಮಣ್ಣ—ಇಲ್ಲಿ ಬಾ, ಏ ಕರಿಯಪ್ಪಾ ! ದೀಪ ಹಚ್ಚುವದನ್ನು ಬಿಟ್ಟುಬಿಡು ಸದ್ಯಕ್ಕೆ. ಬಾಯಿಯವರು ಬಂದಮೇಲೆ ಅವರೇ ಹಚ್ಚಿಡುವರಂತೆ. ನಿನ್ನ ಆ ಗಿಳಿಯ ಲಾವಣಿಯನ್ನು ಹೇಳು. ಕೇಳುವ ಮನಸಾಗಿದೆ. ಹೊತ್ತೂ ಅದಕ್ಕೆ ಸರಿಯಾಗಿದೆ, ನೋಡು. ಪಂಜರದಲ್ಲಿ ಸಿಕ್ಕುಬಿದ್ದ ಗಿಳಿಯಂತೆ ಸೂರ್ಯನು ಇತ್ತ ಬೆಳಗಲಾರ, ಇತ್ತ ಮುಳುಗಲಾರ. ರಾಣಿಯು

ಸ್ವರ್ಣಪಂಜರದಲ್ಲಿರಿಸಿದ ಆ ಗಿಳಿಯಂತೆ ಬಾಯಿಯವರು ನನ್ನನ್ನು ಇಲ್ಲಿ ಹಾಸಿಗೆಯ ಮೇಲೆ ಇರಿಸಿ ಹೋಗಿದ್ದಾರೆ, ನೋಡು! ಹಿಂದುಮುಂದೇಕೆ ನೋಡುವದು ? ಹೇಳು ಆ ಲಾವಣಿಯನ್ನು ! (ಎದ್ದು ಕೂಡುತ್ತಾನೆ.)

ಕರಿಯ— ಹೇಳಲು ಭಯವಾಗುತ್ತದೆ, ಬುದ್ಧಿ.

ಭೀಮಣ್ಣ—ಅದೇಕೊ ?

ಕರಿಯ—ಅಂದು ತಮ್ಮೆದುರಿಗೆ ನಾನು ಆ ಲಾವಣಿಯನ್ನು ಹೇಳುತ್ತಿದ್ದೆನಲ್ಲ? ಅಪ್ಪನವರು ಕೇಳಿಕೊಂಡು ತುಸುಹೊತ್ತು ವಿಚಾರಿಸಿ ಸಿಟ್ಟುಸಿರುಗರೆದು ತಾವಿರುವವರೆಗೆ ಈ ಮನೆಯಲ್ಲಿ ಆ ಲಾವಣಿಯನ್ನು ಹೇಳಲಿಕ್ಕಾಗದೆಂದು ಅಪ್ಪಣೆ ಮಾಡಿದರು ಬುದ್ಧಿ !

ಭೀಮಣ್ಣ—ಓಹೊ ! ಹಾಗಾದರೆ ಅವ್ವ ಕೇಳಿದ್ದಾಳೆ ಅದನ್ನು ! ಆದರೇನಾಯಿತು, ಕರಿಯ ? ಅವಳೀಗ ಮನೆಯಲ್ಲಿಲ್ಲ. ತಿರುಗಿ ಬರುವದರಲ್ಲಿ ಹೇಳಿ ಮುಗಿಸಿಬಿಡು.

ಕರಿಯ—(ಗಾಬರಿಯಿಂದ ಅತ್ತಿತ್ತ ನೋಡಿ) ಹೇಳುತ್ತೇನೆ. ಧಣಿಯರು ಕೇಳಬೇಕು :

ಒಂದರಮನೆಯಲಿ ಮಿಡುಕುತ ಪಂಜರದಲಿ ಗಿಳಿ ಕುಳಿತಿತೊ ಅಣ್ಣಾ !
ಪಚ್ಚೆಪಯರಿನ ಅಚ್ಚ ಹಸುರಿನ ತೊಂಡಿಗೆಂಪಿನಾ ಬಣ್ಣ !
ಕುಡಿಲಿಕೆ ರನ್ನದ ಚರಿಗೆಯು, ಉಣಲಿಕೆ ತಳಿಗೆಯು-ಹೊಳೆಯುವ ಚಿನ್ನ !
ಮಲಗಲು ಪಂಜರ, ಮಾತಿಗೆ ಸರುವರು, ಬಂದಿತೆಲ್ಲಿ ಗಿಳಿ ! ಬನ್ನ !
ದಾಡಿಮ ಸೀತಾರಾಮಫಲಗಳನು ತಿನ್ನಲು ತರುವ ದಿವಾಣ
ಹಣ್ಣುಗಳಾಯ್ಕೆಯಲತಿ ಬಲ್ಲಿದ ನೆಲೆ ! ತಿನ್ನಿಸುವದರಲಿ ಜಾಣ !
ಗಿಳಿಯ ಬಳಿಯಲದು ತೆರೆದೇ ಇದ್ದಿತು ಗಾಳಿಯ ಬೀಸುವ ಗವಾಕ್ಷ :—
ತನ್ನ ಮನದಿ ತಾ ಧೇನಿಸುತಿದ್ದಿತು ಗಿಳಿ ! 'ಎಲ್ಲಿವರಿಗೆ ಮೋಕ್ಷ ?
ಮರ ಮರ ತಿರುಗುತ ಗಿಳಿವಿಂಡಲೆವುದು ನೋಡು ಬಳಗದವರಾಹ
'ಬಿಸಿಲಲಿ ರೆಕ್ಕೆಯ ಬೀಸುವ ಶುಕಸಂಕುಲಕಿಲ್ಲೆನುವದೆ ದಾಹ !'
ಬಿಸಿಲಲಿ ತಿರುಗುವ ಬಾಳಿಗೆ ಹೇಸುತ ನಾಡಿನರಸಿಯನು ಸಾರಿ,
ಬಂದು ನಿಂತೆನೀ ಸ್ವರ್ಣನಿವಾಸದಿ. ಅವಳಾತಿಥ್ಯವ ಸೇರಿ.
ಹೊಟ್ಟೆವರೆಯುವ ಪಾಪ ನಿಂತಿತೆಲೆ ! ಪುಣ್ಯವು ತೆರೆದಿತು ಕಣ್ಣು.

ದೇವನ ಸೇವೆಯೆ ಅನುದಿನದಾಟವು. ಬೇಕೇನಿಹುದಿನ್ನಣ್ಣ !'
ದಿನಗಳು ಸಂದವು. ರಭಸದಿ ಸಾಗಿತು ಗಿಳಿಯಾಧ್ಯಾತ್ಮಿಕವಾದ.
'ಸಕಲಸೃಷ್ಟಿಯೇ ವಿಹ್ವಲವಾಗಿದೆ. ಏಕಿದು ? ಏನು ಪ್ರಮಾದ ?
ಎಲ್ಲ ಸ್ತಬ್ಧವಿದೆ. ಅಬ್ಬ ಅಬ್ಧಿಗಳು ಉರುಳಲು ತೆರಳ್ವುದೆ ಮೌನ ?
ಲೋಕದಿ ನಿಶ್ಶಬ್ದತೆಯಿರೆ ನೀರಸವಾಗದೆ ವೇದಪುರಾಣ ?'
'ಕುಳಿತು ವಿಚಾರಿಸೆ ಮುಗಿಲಂಗಳವಿದು ಸುಭಗತೆಯಿಲ್ಲದ ತಾಣ :—
ಬೈಗುಬೆಳಗುಗಳು ಬಣ್ಣದಾಟಗಳು. ತಿಳಿಯಿದ ಕಾಣಾಕಾಣ.
ಚಿಕ್ಕೆ ಬೀಕಲಿದು. ಮಿಕ್ಕದೊಗ್ಗದದು. ಭೂಮಿಯು ಬರಿಯ ಸ್ಮಶಾನ.
ಅರಮನೆ, ಉರಿಮನೆ. ಮಾನವ, ದಾನವ. ಇಂತಿರಲೆಲ್ಲಿ ಪ್ರಯಾಣ ?'
'ಕೋಟಿವರುಷ ಪರ್ಯಂತವಾಗಿ ವಿಧಿ ಹೂಡಿತೆಂತು ಈ ಮೋಸ ?
ಮಂಕು ಬಡಿಯಿತೇ ಮಾನವಬುದ್ಧಿಗೆ ? ಇದ ನಂಬುವದೆ ಪ್ರಯಾಸ.
ಬದುಕುವುದೇತಕೆ ? ಸುಖ-ಸಂಪತ್ತಿನ ಬಣ್ಣ ಕೇಳು ಬರಿ ಮಾಯಾ !
ಮಾಟದ ಸೌಖ್ಯವ ಬಯಸುವ ಮನುಜನ ತೋಷಿಪ ಜಾಣ್ಮೆಯ ಛಾಯಾ !'
'ನಾವಿಹನೆನ್ನುವ ದೇವನಿಲ್ಲವೆಲೆ ಕರುಣಾಸಾಗರ, ಧೀರ,
ನಮ್ಮೊಡನೊಂದಾಗುತ ಲಲ್ಲೆಯ ಮುಳಿಗರೆಯುತ ಬಹ ಸುಕುಮಾರ !
ಮಾಟಗಾರನಿಹ. ಮಂಕಿನಾಟವನು ನೆರೆಸಿಹ ವಿಶ್ವದಲೆಲ್ಲ.
ದೂರ ಸರಿದು ತುಸು ನಿಂತು. ನೋಡಿದರೆ ಆಟಕೆ ತುದಿ ಮೊದಲಿಲ್ಲ !'
ಹೀಗೆಂದಿತು ಗಿಳಿ; ಮಿಡುಕಿತು ಮನದಲಿ, ಹಾರಿಸುತಿಂದ್ರನ ಜಾಲ.
ದಿನವೊಂದವಕಿಡಿ ಯುಗವಾಯಿತು, ದುಃಸಹವಾಯಿತು ಭೂಗೋಲ.
ನಟಿಸುತ ಬಾಳದೆ ಗತಿಯಿಲ್ಲೆಂದಿತು ; ಮರೆಯುವೆನೆಂದಿತು ನೋವ ;
ಚಿಲಿಪಿಲಿ ಮಾಡಿತು. ಕದವನು ತೆರೆಯುನು ಗಿಳಿ ಪಂಜರವನು ಕಾವ.

ಭೀಮಣ್ಣ—ಇದನ್ನು ಕಟ್ಟಿದವರು ಯಾರು, ಕರಿಯ ? ನಿನಗೆ ಗೊತ್ತುಂಟೋ ?

ಕರಿಯ—ಒಬ್ಬರು ಬೆನಕನಹಳ್ಳಿಯಲ್ಲಿ ಇದ್ದರಂತೆ, ಬುದ್ಧಿ. ಜಗತ್ತಿನಲ್ಲಿ ಜೀವಿಸಿದ್ದೂ ಸತ್ತವರಂತಿದ್ದರು ಅವರು. ತಿನ್ನಲು ತ್ರಾಣವಿತ್ತು ಅವರಲ್ಲಿ. ಆದರೆ ಅವರ ಪ್ರಾಣವು ಗಾಳಿಯನ್ನು ತಿಂದು ಬದುಕುತ್ತಿತ್ತು. ಚೆಲುವಾದ ಹೆಂಡತಿಯಿದ್ದರು ಅವರಿಗೆ. ಆದರೆ ಚಿತ್ರಗಳನ್ನು ನೋಡುವದರಲ್ಲಿಯೇ ಯಜಮಾನರ ಆಯುಷ್ಯವು ಹೋಯಿತು. ವರ್ಷಾನು

ವರ್ಷ ಅವರ ಹೊಲಗಳಿಗೆ ಹುಲುಸಾಗಿ ಬೆಳೆ ಬರುತ್ತಿತ್ತು. ಅತ್ತ ಬೆಳೆ ಬಂದಂತೆ ಇತ್ತ ಅವರ ಮನಸ್ಸು ಬರಿದಾಗುತ್ತ ನಡೆಯಿತು. ಇವರ ಸಂಸಾರವು ಬಲು ಸೊಗಸೆಂದು ಜನರು ಆಡಿಕೊಳ್ಳುತ್ತಿದ್ದರು. ತಾವು ಸಂಸಾರದಲ್ಲಿದ್ದೂ ಸನ್ಯಾಸಿಯಾಗಬೇಕಾಯಿತೆಂದು ಆ ಯಜಮಾನರು ಹಾಡಿಕೊಳ್ಳುತ್ತಿದ್ದರು. ಅವರಲ್ಲಿ ಕೊಪ್ಪರಿಗೆ ತುಂಬ ಹೊನ್ನಿತ್ತು ; ಕೊನೆಗೆ ಅವರು ಉಪ್ಪರಿಗೆಯ ಮೇಲಿಂದ ಹಾರಿ ಪ್ರಾಣಬಿಟ್ಟರಂತೆ !

ಭೀಮಣ್ಣ — ಸರಿ, ಸರಿ ! ಇನ್ನೂ ಕೆಲವು ದಿವಸ ಹೀಗೆಯೇ ಹೋದರೆ ನನ್ನ ಅವಸ್ಥೆಯೂ ಹೀಗಾಗಬಹುದು ನೋಡು !

ಕರಿಯ—ಅಯ್ಯೋ ! ಶಿವನೇ ! ಇಂಥ ಮಾತುಗಳನ್ನೇಕಾಡುತ್ತೀರಿ ಧಣಿಯರು, ಇವತ್ತು ? (ತುಸು ಹೊತ್ತು ತಡೆದು) ಆ ಲಾವಣಿಯಲ್ಲಿಯ ತತ್ವವು ನಿಜವಿರಬಹುದೇನು ಧಣಿಯರೆ ?

ಭೀಮಣ್ಣ—(ಚಕಿತನಾಗಿ) ನಿನಗೇನೆನ್ನಿಸುತ್ತಿದೆ, ಕರಿಯ ?

ಕರಿಯ—ಭೂಮಿತಾಯಿಯನ್ನು ಸ್ಮಶಾನವೆಂದು ಬಯ್ದರೆ ಹೇಗೆ ನೋಡಿರಿ, ಬುದ್ಧಿ ! ಬರವೆದ್ದಾಗ, ಸಿಡುಗು ಬಂದಾಗ,—ಒಂದೊಂದು ಸಲ ಹಾಗೆ ನಿಸಬಹುದು. ಆದರೂ ದೇವರನ್ನು 'ಜೋಕುಮಾರ,' 'ಮಾಟಗಾರ' ಎಂದು ಬಯ್ಯುವುದು ನನ್ನ ಜನ್ಮದಲ್ಲಿಯೇ ಆಗದ ಮಾತು, ಧಣಿಯರೆ !

ಭೀಮಣ್ಣ — ಕರಿಯ, ನೀನು ಪುಣ್ಯವಂತನಿದ್ದೀಯೆ. ಪುಣ್ಯವಂತರಿಗೆ ಇದರ ಅರ್ಥವು ತಿಳಿದೀತು, ಅದರ ಸತ್ಯವು ಮಾತ್ರ ಹೊಳೆಯಲಾರದು.

(ರಾಮಣ್ಣನವರು ಪ್ರವೇಶಿಸುವರು)

ರಾಮಣ್ಣ -- ಏನು ಮಾಡುತ್ತಿರುವೆ ! ಭೀಮಣ್ಣನಾಯಕ ! ತಲೆಮನೆಯಿಂದ ಒಳಬಾಗಿಲವರೆಗೆ ಒದರುತ್ತ ಬಂದೆ. ಯಾರೂ ಓ ಕೊಡಲಿಲ್ಲ ! ಇದೇ ಏನು ನೀನು ಮನೆಯನ್ನು ಕಾಯುವ ರೀತಿ, ಏ ! ಕರಿಯ ! ನಡೆ, ಮುಂಚಿಬಾಗಿಲಲ್ಲಿ ಕಾದಿರು. ನೀನೇಕೆ ಎದ್ದು ಕುಳಿತಿ, ಭೀಮು ? ಮಲಗಿಕೊಂಡಿರು. ಹೇಗಿದೆ ಈಗ ಪ್ರಕೃತಿ ? (ಕೈಮುಟ್ಟಿ ನೋಡುತ್ತಾರೆ)

ಭೀಮಣ್ಣ—ಹೀಗೆ, ಇಲ್ಲಿ ಕುಳಿತುಕೊಳ್ಳಿರಿ, ನೆಟ್ಟಗಿದೆ. ಏ ಕರಿಯ, ಆ ದೀಪ ಹಚ್ಚಿ ಹೋಗಿ ತಲೆಬಾಗಿಲಿನಲ್ಲಿ ಕಾಯ್ದಿರು. ಈಗ ಅಪ್ಪನವರು ಬರಬಹುದು.

ರಾಮಣ್ಣ—ಎಲ್ಲಿ ಹೋಗಿದ್ದಾರೆ ಲಕ್ಷ್ಮಮ್ಮನವರು ? ಸುಭದ್ರಾಬಾಯಿಯೂ ಮನೆಯಲ್ಲಿಲ್ಲವೆಂದು ಕಾಣುತ್ತದೆ ?

ಭೀಮಣ್ಣ—ಇಲ್ಲಿಯೇ ಗುಡಿಗೆ ಹೋಗಿದ್ದಾರೆ.

ರಾಮಣ್ಣ—ಇಷ್ಟು ಹೊತ್ತುಮಾಡಿ ? ಬೇವಿನಹಳ್ಳಿಯಲ್ಲಿ ನಾಯಕರ ಬಳಗದವರೆಲ್ಲರೂ ಬಲು ಜೋಕೆಯಿಂದಿರಬೇಕೆಂಬುದನ್ನು ಅವರಿಗೆ ನೀನು ತಿಳಿಸಲಿಲ್ಲವೇನು ! ಇಂದಿನ ಪ್ರಸ್ತಾಪವೇನದು ಭೀಮು ? ವಿಪರೀತಕ್ಕೆ ಹೋಯಿತಂತಲ್ಲ ?

ಭೀಮಣ್ಣ—ಕೇಳಿ ತಿಳಿದವರಿಗೆ ನಾನು ಹೆಚ್ಚಿಗೆ ಏನು ಹೇಳುವುದಿದೆ ?

ರಾಮಣ್ಣ—ಭೀಮಣ್ಣ ! ಲಕ್ಕಣ್ಣೊಡೆಯರ ಉಪ್ಪುಂಡು ಬೆಳೆದವರು ಅಲ್ಲಿ ಹೇಳ ಹೆಸರಿಲ್ಲವೆ ಬಾಳಬೇಕಾಗಿದೆ. ನಿನ್ನ ಮೇಲೆ ಕೈಯೆತ್ತಲು ಅವರು ತೋರಿಸಿದ ಕಾರಣಗಳಾದರೂ ಏನು ?

ಭೀಮಣ್ಣ—ಕೈಯೆತ್ತಲು ಕಾರಣ ಬೇಕಿದೆಯೆ, ರಾಮಣ್ಣನವರೆ ? ನಾನು ಅವರ ಕಣ್ಣಲ್ಲಿ ಒತ್ತುವದೇ ಒಂದು ಕಾರಣ.

ರಾಮಣ್ಣ—ನಾವೀಗ ಮುದುಕರು, ಭೀಮು. ನಮ್ಮ ಮಾತು ಯಾರೂ ಕೇಳುವುದಿಲ್ಲ. ನೀನೊಬ್ಬನು ಮಾತ್ರ ಹೊಸಬನಿದ್ದರೂ ಹಳಬನಾಗಿದ್ದೀಯೆ.

ಭೀಮಣ್ಣ—ಲಕ್ಕಣ್ಣೊಡೆಯರಿಗೆ ಕೊಟ್ಟ ವಚನವನ್ನು ಕಾಯಲು ಇಷ್ಟು ದಿವಸ ಹೆಣಗಿದೆ. ಸಾಧಿಸದೆ ಹೋಯಿತು. ನೀವು ಎಳೆದ ಗೆರೆಯನ್ನು ದಾಟಬಾರದೆಂದು ಸಾಹಸಪಟ್ಟೆ. ಹಿರಿಯರು ಕ್ಷಮಿಸಬೇಕು. ಇನ್ನು ನನ್ನ ಬುದ್ಧಿಯಂತೆ ಕೆಲವು ದಿವಸ ಬಾಳಿ ಆಯುಷ್ಯವನ್ನು ಸಾರ್ಥಕವಾಗಿಸಬೇಕೆಂದಿದ್ದೇನೆ. ನಿಮ್ಮ ಆಶೀರ್ವಾದವಿರಲಿ.

ರಾಮಣ್ಣ—ನನ್ನ ಮಾತಿಗಾಗಿ ನೀನು ಸಹಿಸಿದ ಅಪಮಾನವನ್ನು ಇಲ್ಲಿಯವರೆಗೆ ನಾನು ನಿರಾಕರಿಸಲು ಹೆಣಗಾಡಿದೆ. ನೀನು ನನ್ನ ವಚನವನ್ನು ನಡೆಸಿದುದಕ್ಕೆ ಪ್ರತಿಫಲವಾಗಿ ನಾನೇನು ಮಾಡಬಲ್ಲವನಾಗಿದ್ದೇನೆ, ಹೇಳು ? ಆದರೂ ನನ್ನ ಇನ್ನೊಂದು ಮಾತನ್ನು ನೀನು ಕೇಳಬೇಕು ಭೀಮು.

ಭೀಮಣ್ಣ—ಅಪ್ಪಣೆಯಾಗಬೇಕು.

ರಾಮಣ್ಣ—ನಾನು ನನ್ನ ದಿವಸಗಳನ್ನು ಎಣಿಸುತ್ತ ಕೂತಿದ್ದೇನೆ, ಭೀಮು. ನಾನಿದ್ದ ಜಗತ್ತೆಲ್ಲ ಸುಟ್ಟುಹೋಗಿ ಈಗ ಒಬ್ಬನೇ ಹಿಂದುಳಿದಿದ್ದೇನೆ. ಮೇಲಾಗಿ ಇಲ್ಲಿ—ಈ ದೇಹದಲ್ಲಿ—ಬಲವಿಲ್ಲ. ಯಾವಾಗ ಬಿದ್ದು ಹೋಗುವೆನೋ ಯಾರಿಗೆ ಗೊತ್ತು ?

ಭೀಮಣ್ಣ—ಬಿದ್ದರೂ ಸಹ ನಿಮ್ಮ ದೇಹವು ವೀರಗಲ್ಲಿನಂತೆ ಹೀಗೆಯೇ ನಿಂತಿರುವದು.

ರಾಮಣ್ಣ—ಇನ್ನು ನನ್ನಿಂದ ನಿನ್ನ ರಕ್ಷಣವಾಗುವದು ಅಷ್ಟರಲ್ಲಿಯೇ ಇದೆ. ಈಗ ಬೇವಿನಹಳ್ಳಿಯನ್ನು ಬಿಟ್ಟುಬಿಡುವದು ಉಚಿತ, ಭೀಮು. ಇಲ್ಲಿದ್ದರೆ ನಿನ್ನ ಜೀವಕ್ಕೆ ಅಪಾಯ.

ಭೀಮಣ್ಣ—ಹಿರಿಯರು ಹೀಗೆ ಆಜ್ಞಾಪಿಸಬಹುದೆಂದು ನಾನು ಎಣಿಸಿರಲಿಲ್ಲ. ಬೇವಿನಹಳ್ಳಿಯನ್ನು ಬಿಟ್ಟು ಹೋಗುವದೆಲ್ಲಿಗೆ ? ನನ್ನ ಹೊಲಮನೆಳನ್ನು ಮೊನ್ನೆ ಆ ಭೃಗು ಹೇಳಿದಂತೆ ದಾನಮಾಡಿ ಹೋಗಲೇ ? ನನ್ನನ್ನು ನಂಬಿ ನಿಂತ ಜನರ ವಿಶ್ವಾಸಘಾತ ಮಾಡಲೇ ?

ರಾಮಣ್ಣ—ನೀನು ಹೋಗಿ ಇಲ್ಲಿಂದ ನಾಲ್ಕು ಮೈಲಿನಾಚೆಗಿದ್ದ ಇಂಚಲಾಪುರದಲ್ಲಿ ಇರಹತ್ತಿದೆಯೆಂದು ತಿಳಿ. ಅದು ಶ್ರೀಮಂತರ ಸೀಮೆಯಲ್ಲ ; ಸರಕಾರದ್ದು. ಅಲ್ಲಿ ನಿಂತು ನೀನು ನಿನ್ನ ಹೊಲ-ಮನೆಗಳನ್ನು ಕಾಯಬಹುದು. ಜನರ ಹಿತವನ್ನು-ಮುಂದುವರಿಸಬಹುದು. ನೋಡು ವಿಚಾರಮಾಡು.

ಭೀಮಣ್ಣ—ಆಗಲಿ. ವಿಚಾರಮಾಡುತ್ತೇನೆ. ಆದರೂ ರಾಮಣ್ಣ, ಬೊಗ್ಗಿ ನಡೆದು ನನ್ನ ಜೀವನದ ಶೆಲೆಯು ಬತ್ತಿಹೋಗಿದೆ. ಒಮ್ಮೆ ಎತ್ತರವಾಗಿ ನಿಂತು, ಹೆಜ್ಜೆಯನ್ನು ಹಿಂದಿಡದೆ, ಹೇಳುವದನ್ನು ಹೇಳಿ, ಮಾಡುವದನ್ನು ಮಾಡಿ—ತೂರಿಕೊಳ್ಳಬೇಕಿಂದಿದ್ದೇನೆ ರಾಶಿಯನ್ನು !

ರಾಮಣ್ಣ—ದುಡುಕಬೇಡ. ಭೀಮು. ಜೀವನದಲ್ಲಿ ಸಂಯಮವಿರಲಿ.

ಭೀಮಣ್ಣ—ಸಂಯಮವೇ ಧ್ಯೇಯವೆಂತಾಗಬಹುದು, ರಾಮಣ್ಣನವರೆ ? ಅದೊಂದು ಸಾಧನವಹುದು. ಅದನ್ನು ಇಷ್ಟು ದಿವಸ ನಾನು ಸಾಧಿಸಿದ್ದಾಯಿತಲ್ಲವೆ ?

ರಾಮಣ್ಣ—ಬುದಿಂಗನೆ ದಳ್ಳುರಿಯಂತೆ ಉರಿದು ಹೋದರೆ ಏನು ಮಾಡಿದ

ಹಾಗಾಯಿತು ? ನಿನ್ನ ಜೀವನದ ಆದರ್ಶವು ಜನಜೀವನದಲ್ಲಿ ಬಿಂಬಿಸುವಂತೆ ಮಾಡಬೇಕು. ಇದು ದುಡುಕುವದಕ್ಕಿಂತ ಹಿರಿದಾದ ಕಷ್ಟ. ಇದಕ್ಕಾಗಿ ನಿನ್ನ ಪುಣ್ಯವನ್ನೆಲ್ಲ ಸಂಗ್ರಹಿಸಿಡು. ಅದಿರಲಿ. ಸೆಟ್ಟರೆಲ್ಲಿ ಭೀಮು ? ಅವರನ್ನು ಕಾಣದೆ ಅನೇಕ ದಿನಗಳಾದವು. ಅವರಿಗೂ ಇದನ್ನೇ ಹೇಳಬೇಕಾಗಿದೆ.

ಭೀಮಣ್ಣ—ಅವರೀಗ ಊರಿಗೆ ಹೋಗಿದ್ದಾರೆ. ನಾಳೆ ಬರಬಹುದು. ಅವರ ಮೇಲೂ ಶ್ರೀಮಂತರ ಕೃಪಾದೃಷ್ಟಿ ಸಂಪೂರ್ಣವಾಗಿ ಬೀಳುವಂತೆ ತೋರುತ್ತದೆ.

ರಾಮಣ್ಣ—ಯಾರ ಕೃಪಾದೃಷ್ಟಿ ಯಾರ ಮೇಲಿದ್ದರೇನು ? ಅದೃಷ್ಟದ ದೃಷ್ಟಿ ಎಲ್ಲರ ಮೇಲಿದೆ. ನಾನೀಗ ಹೋಗುತ್ತೇನೆ, ಭೀಮು. ಮತ್ತೆ ಮಾತನಾಡುತ್ತ ಕುಳಿತರೆ ನಿನಗೇ ಶ್ರಮವಾದೀತು. ನಾಳೆ ಬರುತ್ತೇನೆ.

ಭೀಮಣ್ಣ—ಹೋಗಿಬನ್ನಿರಿ, ರಾಮಣ್ಣನವರೇ. ಏ ಕರಿಯ, ರಾಮಣ್ಣನವರಿಗೆ ದಾರಿ ತೋರಿಸು.

(ರಾಮಣ್ಣನವರು ಹೋಗುತ್ತಾರೆ. ತೆರೆಯು ಬೀಳುತ್ತದೆ.)

---

## ಪ್ರವೇಶ ೫

(ಬೇವಿನಹಳ್ಳಿಯ ಈಶ್ವರಾಲಯದ ಪವಳಿಯಲ್ಲಿ. ಮುಚ್ಚಂಜೆಯ ವೇಳೆ. ಕಪ್ಪುರೇನಕೋಟನ್ನು ಹಾಕಿದ ದೇಸಾಯರೊಡನೆ ಕಪ್ಪು ನಿಲುವಂಗಿ ಹಾಗು ಟೊಪ್ಪಿಗೆಯನ್ನು ಹಾಕಿದ ಸಣತಮ್ಮನು ಬರುತ್ತಾನೆ.)

ಸಣತಮ್ಮ—ನೋಡಿರಿ, ಒಡೆಯರೆ, ಇಲ್ಲಿಯ ಕತ್ತಲೆಯು ಹೇಗೆ ಅಚಲವಾಗಿದೆ! ದೇವರ ಸನ್ನಿಧಿಯಲ್ಲಿ ಹೀಗೆ ಕಾಡುಗತ್ತಲೆಯಿರಬೇಕೆ? ನೂರು ಮತಾಪಿನ ಪೆಟ್ಟಿಗೆಗಳನ್ನು ಸುಟ್ಟರೂ ಇದು ಸರಿಯಲಾರದು.

ದೇಸಾಯಿ—ಪವಳಿಯಲ್ಲಿ ನಮ್ಮ ಬೇಟೆಯು ಅನಾಯಾಸವಾಗಿ ಕೈಗೆ ಸಿಕ್ಕುವದು. ನಮ್ಮೆದುರು ಹಾಯ್ದು ಹೋದಾಗ,-ಆ ಕೆಂಪು ನಿಶಾನೆಯನ್ನು ಬಿಟ್ಟು ಕಸೂತಿಯ ಸುಂದರಿಯನ್ನು ಮಾತ್ರ ಹಿಡಿದಿರಬೇಕು ನೋಡು!

ಸಣತಮ್ಮ—ಅದರ ಕಾಳಜಿ ಬಿಡಿರಿ, ಒಡೆಯರೆ! ಎಲ! ಇದೇನು ನೆನೆಸುವದರಲ್ಲಿ ಬೇಟೆಯೇ ನಮ್ಮೆದುರು ಬಂದು ಬಿಟ್ಟಿತಲ್ಲ!

(ಮೊದಲು ಲಕ್ಷ್ಮಮ್ಮನವರು ಆಮೇಲೆ ಅವರನ್ನು ಹಿಂಬಾಲಿಸುತ್ತ ಸುಭದ್ರಾಬಾಯಿಯವರೂ ಪ್ರದಕ್ಷಿಣೆ ಹಾಕಿಕೊಂಡು ಬರುವರು.)

ದೇಸಾಯಿ—(ಕಿರುದನಿಯಲ್ಲಿ) ಇವರೇ ನೀನು ಹೇಳಿದ ಬೇಟೆಯೇನು, ಸಣತಮ್ಮ?

ಸಣತಮ್ಮ—(ಅದೇ ದನಿಯಲ್ಲಿ) ಹೌದು ಇವರೇ ಅವರು.

ದೇಸಾಯಿ—ಈ ಸಲ ತುಸು ಮುಂದೆ ಜಾರಿದರು. ಮುಂದಿನ ಸಲದ ಪ್ರದಕ್ಷಿಣೆಗೆ ಖಂಡಿತವಾಗಿ ಹಿಡಿದುಬಿಡೋಣ.

ಸಣತಮ್ಮ—ಹೌದು, ಒಡೆಯರೆ! ನನ್ನಂಥವನಿಗೂ ಸಹ ನೊಣ ಕಡಿದ ಹಾಗಾಗಿ ಹಿಂದೆಗೆದೆ. ಮುಂದಿನ ಸಲ ಯಮ ಬಂದರೂ ಬಿಡುವದಿಲ್ಲ.

ದೇಸಾಯಿ—ಇದೋ ಬಂದರು ನೋಡು ಸಜ್ಜಾಗಿರು. (ಮೊದಲಿನಂತೆ ಪ್ರದಕ್ಷಿಣೆ ಹಾಕುತ್ತ ಲಕ್ಷ್ಮಮ್ಮನವರು ಹಾಗು ಸುಭದ್ರಾಬಾಯಿಯವರು ಬರುವರು.

ಸಣತಮ್ಮ—(ಬೆಚ್ಚಿಬಿದ್ದು) ಇದೇನು, ಒಡೆಯರೇ! ಮುದುಕಿಯ ಹಿಂದೆ ಹೆಣ್ಣಿನ ಬದಲು ಆ ಯಮನೇ ಬಂದಂತೆ ಕಾಣುತ್ತದೆ! ಜಟ್ಟಿಯಂತಹ ಮೈ, ಅಮಾವಾಸ್ಯದ ರೂಪು, ನಿಮಿರಿ ನಿಂತ ಮೀಸೆ, ಉಕ್ಕಿನಂತಹ ಕೈ....

ದೇಸಾಯಿ—(ಗಾಬರಿಯಿಂದ) ಯಮನಲ್ಲ, ಸಾಕ್ಷಾತ್ ಈಶ್ವರನೀತ. ಯಮನ ಯಮ. ಜಟೆಯಲ್ಲಿ ಶುಭ್ರಳಾಗಿ ನಿಂತ ಗಂಗೆಯನ್ನು ನೋಡು ! ಬೂದಿ ಬಡಕ ಮೈ, ಕೈಯಲೆತ್ತಿದ ತ್ರಿಶೂಲ, ಕೆಂಡವಂತಹ ಕಣ್ಣು....

ಸಣತಮ್ಮ—ಘಾತವಾಯಿತು, ಒಡೆಯರೆ ! ಇದೇನೋ ಕಣ್ಣು ಕಟ್ಟಾಯಿತು, ಬೇಟೆಯು ಮತ್ತೆ ಕೈತಪ್ಪಿ ಹೋಯ್ತು. ನಡೆಯಿರಿ, ಈ ಸಲ ಬೆನ್ನು ಹತ್ತಿ ಹಿಡಿದುಬಿಡೋಣ.

ದೇಸಾಯಿ—ಹೌದು ನಡೆ ಸಣತಮ್ಮ. (ಇಬ್ಬರೂ ಹೋಗಲನುವಾದಾಗ ಎದುರಿನಿಂದ ಮುದುಕ ಪೂಜಾರಿಯು ಬರುವನು)

ಪೂಜಾರಿ—ಇದೇನು ? ದೇವರ ಗುಡಿಯಲ್ಲಿಯೂ ಗಲಾಟೆಯೆ ? ಯಾರವರು ? ತೊಲಗಿರಿಲ್ಲಿಂದ. ಎಲ ! ಲಕ್ಷ್ಮವ್ವನವರು ಬೇರೆ ಬಂದಂತೆ ಕಾಣುತ್ತಾರಲ್ಲ ! ಲಕ್ಷ್ಮಮ್ಮನವರೆ ! ಇಷ್ಟು ಸಂಜೆ ಮಾಡಿ ಬಂದಿರೇಕೆ ಇವತ್ತು ? ಬಾಯಿಯವರನ್ನು ಬೇರೆ ಸಂಗಡ ತಂದಿರುವಿರಲ್ಲ ! ಇನ್ನು ಮೇಲೆ ನಾಯಕರಿಗೆ ಹೇಳಿಬಿಡಿರಿ. ತಾಯಿ ! ಗುಡಿ ಮಗ್ಗುಲಿಗೆ ನನಗೊಂದು ಮನೆ ಕಟ್ಟಿಸಿಕೊಡಲು ಹೇಳಿರಿ. ಅಂದರೆ ನೀವು ಅಪರಾತ್ರಿಯಲ್ಲಿ ಬಂದರೂ ಇಲ್ಲಿ ಯಾವ ಭಯವಿರುವದಿಲ್ಲ !

(ಇಷ್ಟರಲ್ಲಿ ಒಂದು ಕಡೆಯಿಂದ ದೇಸಾಯಿ-ಸಣ್ಣತಮ್ಮರು ಹೋಗಿಬಿಟ್ಟಿರುತ್ತಾರೆ. ಇನ್ನೊಂದು ಕಡೆಯಿಂದ ಲಕ್ಷ್ಮವ್ವನವರಿದ್ದೆಡೆಗೆ ಪೂಜಾರಿಯು ಹೋಗುತ್ತಾನೆ.)

# ಅಂಕ ೨

## ಪ್ರವೇಶ ೧

(ಭೀಮಣ್ಣನಾಯಕನು ಪಲ್ಲಂಗದ ಗಾದಿಯ ಮೇಲೆ ಒರಗಿಕೊಂಡಿರುತ್ತಾನೆ. ಗುಡಿಯಿಂದ ತಿರುಗಿ ಬಂದಿದ್ದ ಸುಭದ್ರಾಬಾಯಿಯು ನಾಯಕನ ಬಳಿಗೆ ಹೋಗಿ ನಿಲ್ಲುತ್ತಾಳೆ.)

ಭೀಮಣ್ಣ—ಬಂದೆಯಾ, ಬಾ ಹೀಗೆ. ಇಲ್ಲಿ ಕೂಡು. ಹೋಗಿ ಬಂದಿರಾ, ಗುಡಿಗೆ ?

ಸುಭದ್ರಾ—ಹೂಂ.

ಭೀಮಣ್ಣ—ಆದೇಕೊ ? ದೇವರ ಮೇಲೆ ಇಷ್ಟೊಂದು ಭಕ್ತಿ ಉಕ್ಕಿಬಂದಿತ್ತು ?

ಸುಭದ್ರಾ—ಅತ್ತೆಯವರು ಕರೆದುಕೊಂಡು ಹೋಗಿದ್ದರು.

ಭೀಮಣ್ಣ—ಓಹೊ ! ಹಾಗಾದರೆ ದೇವಭಕ್ತಿಗಿಂತ ಶ್ವಶ್ರೂಭಕ್ತಿ ಹೆಚ್ಚಾಗಿ ದಯೋ ನಿನ್ನಲ್ಲಿ ?

ಸುಭದ್ರಾ—(ತುಸು ತಡೆದು) ಇಂದು ಏನು ಮಾಡಲಿ ನಿಮಗೆ ?

ಭೀಮಣ್ಣ—(ನಕ್ಕು) ನನಗೇನು ಮಾಡುತ್ತೀ ? ನನಗೇನು ಮಾಡಬೇಕೆನ್ನುವಿ ನೀನು ?

ಸುಭದ್ರಾ—ಸಾಕು ನಿಮ್ಮ ಕುಂಟಚೇಷ್ಟೆ. ಜಡ್ಡಾಗಿ ಮಲಗಿದರೂ ಸುಮ್ಮನೆ ಇರುವದೇ ನಿಮ್ಮ ನಾಲಗೆಗೆ ಗೊತ್ತಿಲ್ಲ.

ಭೀಮಣ್ಣ—ಛೀ ! ಇದೇನು ಹೇಳುತ್ತಿ ? ಸುಮ್ಮನಿದ್ದರೊಂದು ಕಷ್ಟ, ಇರದಿದ್ದರೊಂದು ಕಷ್ಟ. ರಾತ್ರಿ ನಾನು ಊಟಮಾಡುವೆನೋ ಇಲ್ಲೋ ಎಂದು ಕೇಳಿದೆಯೇನು ?

ಸುಭದ್ರಾ—ಹೂಂ, ರಾತ್ರಿ ನೀವು-ಧಣಿಯರು-ಊಟ ಮಾಡುವಿರೋ ? ಇಲ್ಲೋ ? ಎಂದು ಕೇಳಿದೆ.

ಭೀಮಣ್ಣ—ಇಲ್ಲವೆಂದು ಮೊದಲೇ ಹೇಳಿದ್ದೆನಲ್ಲ ? ಸ್ವಲ್ಪ ಬಿಸಿ ಹಾಲು ಕುಡಿದು ಮಲಗುತ್ತೇನೆ.

ಸುಭದ್ರಾ—ಅನ್ನವನ್ನು ತುಸು ಅಳ್ಳಕಾಗಿ ಮಾಡಿ ಗೊಡ್ಡು ಸಾರು ಮಳ್ಳಿಸುತ್ತೇನೆ. ಊಟ ಮಾಡಿ ಮಲಗಿರಿ. ನಾಳಿಗೆ ಗುಣವಾಗುವದು.

ಭೀಮಣ್ಣ—ಗೊಡ್ಡುಸಾರಿನ ವಿಷಯು ಕಟ್ಟಪ್ಪಣೆಯೋ ಏನು ?

ಸುಭದ್ರಾ—ಹೌದು. ಕಟ್ಟಪ್ಪಣೆ.

ಭೀಮಣ್ಣ—ಮಹದಾಜ್ಞೆ ! ರಾಣಿಯವರ ಮಾತನ್ನು ಮೀರಲು ನಾನೆಷ್ಟರವನು ?

ಸುಭದ್ರಾ—ಹಾಗಾದರೆ ನಾನು ಹೊರಡುತ್ತೇನೆ.

ಭೀಮಣ್ಣ—ಏ ! ಇಲ್ಲಿ ನಿಲ್ಲು. ತುಸು ಇಲ್ಲಿ ಬಾ.

ಸುಭದ್ರಾ—ಏನು ?

ಭೀಮಣ್ಣ—ಇಂದು ಇಷ್ಟೇಕೆ ಬಾಡಿದೆ ನಿನ್ನ ಮುಖ ಅಂಥದೇನಾಯಿತು ಹೇಳು ?

ಸುಭದ್ರಾ—ಇಲ್ಲ, ಏನೂ ಇಲ್ಲ.

ಭೀಮಣ್ಣ—ನಿನ್ನ ನಾಲಗೆಯು ಇಲ್ಲವೆಂದರೆ ಅದರುತ್ತಿರುವ ನಿನ್ನ ತುಟಿಗಳು ಅಲ್ಲವೆನ್ನುತ್ತವೆ. ತುಂಬಿ ಬಂದ ನಿನ್ನ ಕಣ್ಣುಗಳು ಒಂದು ಕರುಣ ಕಥೆಯನ್ನೇ ಹೇಳುತ್ತಿವೆ.

(ಹತ್ತಿರ ಕೈಹಿಡಿದು ಕೂರಿಸುತ್ತಾನೆ.)

ಸುಭದ್ರಾ—ಇಲ್ಲ—ಏನೂ ಇಲ್ಲ ! (ಬಿಕ್ಕುತ್ತಾಳೆ).

ಭೀಮಣ್ಣ—ನಿನಗೇನಾಯಿತು ಹೇಳು ? ನಿನ್ನ ದುಃಖವನ್ನು ಕಳೆಯದಷ್ಟು ನಿತ್ರಾಣನು ನಾನೆಂದು ತಿಳಿದೆಯಾ ?

ಸುಭದ್ರಾ—(ಕಣ್ಣೊರಿಸುತ್ತಾ) ನಾನು ...ಇನ್ನು....ಗುಡಿಗೆ....ಹೋಗುವದಿಲ್ಲ.

ಭೀಮಣ್ಣ—ಅದೇನಾಯಿತು ಗುಡಿಯಲ್ಲಿ ಅಂಥದು ? ಇಷ್ಟು ಹೊತ್ತಾಗಿ ಹೋಗುವದು ಬೇಡೆಂದು ನಾನು ಅವ್ವನಿಗೆ ಹೇಳಿದ್ದೆ.

ಸುಭದ್ರಾ—ಅತ್ತೆಯವರ ಮನಸ್ಸನ್ನು ಮುರಿಯಲಾರದೆ ಹೋಗಬೇಕಾಯಿತು ನನಗೆ. ಗುಡಿಯ ಪವಳಿಯಲ್ಲಿ ಮೊದಲೇ ಕತ್ತಲು. ಅಲ್ಲಿ ಇಬ್ಬರು ನಿಂತಂತೆ ಕಂಡಿತು.

ಭೀಮಣ್ಣ—ಅವರೇನೆಂದರು ನಿನಗೆ ?

ಸುಭದ್ರಾ—ತಮ್ಮತಮ್ಮೊಳಗೆ ಗೊಣಗುಟ್ಟಿದರು. 'ಇವರೇ ಅವರು' ಎಂದು

ಒಂದು ದನಿಯೆಂದಿತು.

ಭೀಮಣ್ಣ— ಮುಂದೆ ?

ಸುಭದ್ರಾ—ಅತ್ತೆಯವರು ಇನ್ನೊಂದು ಪ್ರದಕ್ಷಿಣೆ ಹಾಕಿದರು. ನಾನು ಮಾತ್ರ ಹೆದರಿ ಸುಮ್ಮನೆ ದೇವರೆದುರಿಗೆ ನಿಂತೆ. ಅಷ್ಟರಲ್ಲಿ ಪೂಜಾರಿಯು ದೀಪ ಹಚ್ಚಲು ಬಂದ. ಆಗ ನನಗೆ ಜೀವದಲ್ಲಿ ಜೀವ ಬಂತು.

ಭೀಮಣ್ಣ—ಸುಭದ್ರಾ ! ಇನ್ನು ನೀನು ಗುಡಿಗೆ ಹೋಗಬೇಡ. ಇಂದು ನೀನು ಪಾರಾಗಿದ್ದೇ ಹೆಚ್ಚಿನ ಮಾತು. ದೇವರ ದಯೆಯಿತ್ತೆನ್ನಬೇಕು.

ಸುಭದ್ರಾ—ನೀವೇ ಅತ್ತೆಯವರಿಗೆ ಹೇಳಿರಿ. ಇನ್ನು ನಾನು ಗುಡಿಗೆ ಹೋಗುವದಿಲ್ಲ.

ಭೀಮಣ್ಣ—ನನಗೆ ಒಂದು ಹಂಚಿಕೆ ಹೊಳೆದಿದೆ, ಈ ಊರನ್ನೇ ಬಿಟ್ಟರೆ ಹೇಗೆ?

ಸುಭದ್ರಾ—ಅಪ್ಪಯ್ಯಾ ! ಈ ಊರನ್ನು ಬಿಟ್ಟು ಹೋಗುವದೆಲ್ಲಿ ?

ಭೀಮಣ್ಣ—ಇಲ್ಲಿಯೇ ನಾಲ್ಕು ಮೈಲಿನ ಮೇಲೆ ಇಂಚಲಾಪುರವಿದೆಯಲ್ಲ ? ಅದು ದೇಸಗತ್ತಿಯದಲ್ಲ ; ಸರಕಾರದ ಹಳ್ಳಿ. ಅಲ್ಲಿಯೇ ಮನೆ ಮಾಡಿ ಇಲ್ಲಿಯ ವ್ಯವಹಾರವನ್ನು ನೋಡಿಕೊಳ್ಳುತ್ತ ಕಾಲ ಕಳೆಯಬಹುದು.

ಸುಭದ್ರಾ—ಏನೋ ! ನೀವೇ ವಿಚಾರಿಸಿರಿ. ನೀವೆಲ್ಲಿಯೋ ಅಲ್ಲಿ ನಾನು. ನೀವು ಇಟ್ಟಲ್ಲಿ ಇದ್ದು ಕೊಟ್ಟಿದ್ದನ್ನು ಉಂಡು ಬಿಟ್ಟಿದ್ದನ್ನು ಬೇಡವೆಂದು ಬಾಳುವವಳು ನಾನು. ಇದಕ್ಕೂ ಹೆಚ್ಚು ನನಗೇನು ತಿಳಿಯುವದು ?

ಭೀಮಣ್ಣ—ಹಳ್ಳಿಗಿಂತ ತೀರ ಹಳ್ಳಿಯೆಂದು ನೊಂದುಕೊಳ್ಳಲಿಕ್ಕಿಲ್ಲವಷ್ಟೆ ?

ಸುಭದ್ರಾ—ಆ ಮಾತನ್ನೇ ಎತ್ತಬೇಡಿರಿ. ಇಲ್ಲಿ ಇದ್ದಾಗ ಸಹ ನಾನೆಂದ ಊರೆಲ್ಲ ತಿರುಗಬಯಸಿದ್ದು ?

ಭೀಮಣ್ಣ—ಹಾಗಾದರೆ ಇನ್ನು ಇಂಚಲಾಪುರದಲ್ಲಿಯೇ ಇದ್ದುಬಿಡೋಣವಂತೆ. ಅಲ್ಲಿ ಒಂದು ಮನೆಯನ್ನು ಹಿಡಿಯೋಣ. ಹತ್ತಿರದಲ್ಲಿಯೇ ನದಿ. ಸುತ್ತೆಲ್ಲ ಹಸಿರು. ಅಡವಿಯ ಹುಲ್ಲುಗಾವಲಿನಾಚೆ ಗಂಧದ ಮರಗಳ ಸಾಲಿದೆ. ಕೆಲವು ಸಣ್ಣವಿವೆ. ಹಲವು ದೊಡ್ಡವಾಗಿ ನಿಂತಿವೆ. ಇಂಥ ಗಂಧದ ಮರಗಳನ್ನು ಕೆಲವು ಮಲ್ಲಿಗೆ ಬಳ್ಳಿಗಳು ಸುತ್ತಿಕೊಂಡು

ನಿಂತಿವೆ. ಆ ಮರದ-ಬಳ್ಳಿಗಳನ್ನು ಒಳಗೊಂಡ ಬನಕ್ಕೆ ನಾವಿಬ್ಬರು ಹೆಚ್ಚೆ ? ಅಲ್ಲಿಯ ಚೆಲುವನ್ನು ನೋಡಿದರೆ ನಿಮ್ಮ ತವರೂರಿನ ನೆನಪು ಬರುತ್ತಿದೆ ನೋಡು ! ಮಲೆನಾಡಿನಲ್ಲಿ ಚಿಗಿತ ಬಳ್ಳಿಯಂತಿದ್ದ ನಿನ್ನನ್ನು ಕಿತ್ತುಕೊಂಡು ಬಂದೆ. ತಿರುಗಿ ಬೆಳೆಸಲಾರದೆ ಹೋಗಿದ್ದೇನೆ. ಇನ್ನು ಈ ಹಾಳು ಬೇವಿನಹಳ್ಳಿಯನ್ನು ಬಿಟ್ಟುಬಿಡೋಣ. ನಾನೊಬ್ಬನೇ ಇಲ್ಲಿ ಬಂದು ಹೋಗಿ ಮಾಡುತ್ತೇನೆ.

ಸುಭದ್ರಾ—ಅತ್ತೆಯವರ ಮನಸ್ಸಿಗೆ ಬಂದೀತೇ ಈ ಮಾತು ? ಇಷ್ಟು ವರ್ಷ ಬೇವಿನಹಳ್ಳಿಯಲ್ಲಿ ಇದ್ದವರವರು ?

ಭೀಮಣ್ಣ—ಬರದೆ ಏನು ? ರಾಮಣ್ಣನವರು ಹೇಳಿದಾಗ ಎಲ್ಲವೂ ಸರಿ ಹೋಗುತ್ತದೆ.

ಲಕ್ಷ್ಮಮ್ಮ—(ಒಳಗಿನಿಂದ) ಸುಭದ್ರಾಬಾಯಿ, ಏ ಸುಭದ್ರಾಬಾಯಿ, ಇಷ್ಟೊತ್ತು ಏನು ಮಾಡುತ್ತೀ ? ಭೀಮೂನಿಗೆ ಅನ್ನದೂಟವು ನಡೆಯುವದೇನು ಕೇಳಿ ಬಾ ಎಂದರೆ ಇಷ್ಟು ನಾಜೂಕೇನೆ ?

ಸುಭದ್ರಾ—ಬಂದೆ. (ಹೋಗುತ್ತಾಳೆ.)

ಲಕ್ಷ್ಮಮ್ಮ—(ಬಂದು) ಈಗ ನಿನಗೆ ಹೇಗಿದೆಯಪ್ಪಾ, ಭೀಮೂ ? ಇಕಾ. ಗುಡಿಯಿಂದ ಅಂಗಾರ ತಂದಿದ್ದೇನೆ. ಹಣೆಗೂ ಕೊರಳಿಗೂ ಹಚ್ಚುತ್ತೇನೆ ಹಿಡಿ. ಗುಡಿಯಲ್ಲಿ ಇಂದು ಯಾರ ಗಲಾಟೆಯೂ ಇದ್ದಿಲ್ಲ. ನಾವೇ ನಾವು ; ದೇವರೇ ದೇವರು. ಪುರಾಣವೂ ಮುಗಿದು ಹೋಗಿತ್ತು ನಾವು ಹೋಗುವ ಹೊತ್ತಿಗೆ.

ಭೀಮಣ್ಣ—ಆ ಪೂಜಾರಿಯು ಸಹ ಇರಲಿಲ್ಲೇ ಅವ್ವ ?

ಲಕ್ಷ್ಮಮ್ಮ—ಅಯ್ಯ ! ಹೌದೋ ಭೀಮು. ಆ ಪೂಜಾರಿಗೊಂದು ಮನೆ ಕಟ್ಟಿಸಿಕೊಡಬಾರದs ? ಮನಿ, ಮನಿ ಅಂತ ಬಡಕೋತಾನ ಪ್ರಾಣಿ. ದೇವರ ಕೆಲಸಕ್ಕೆ ಹಾಂಗ ಇಲ್ಲನಬಾರದಪ್ಪ !

ಭೀಮಣ್ಣ—ಕಟ್ಟಿಸೋಣ, ಅವ್ವಾ. ಅದಕ್ಕೇನು ?

ಲಕ್ಷ್ಮಮ್ಮ—ಇಕಾ ! ಮೈಯ್ತುಂಬ ಸವರಿಕೊ ದೇವರ ಅಂಗಾರ. ಒಲ್ಲೆನ್ನ ಬಾರದು.

ಭೀಮಣ್ಣ—ಸವರಿಕೊಂಡಿದ್ದೇನೆ ಅವ್ವಾ.

ಲಕ್ಷ್ಮವ್ವ—ಅಲ್ಲೋ, ಭೀಮು, ಈ ಸಲ ಸುಭದ್ರಾಬಾಯಿಯ ಬಾಣಂತನವನ್ನು ಇಲ್ಲಿಯೇ ಮಾಡೋಣ.

ಭೀಮಣ್ಣ—ಮಾಡೋಣ, ಅದಕ್ಕೇನು ?

ಲಕ್ಷ್ಮವ್ವ—ಇಲ್ಲಿ ಬೇವಿನಹಳ್ಳಿಯಲ್ಲಿ ಎಲ್ಲ ಸೋವಿಯಿರುತ್ತದೆ. ಯಾವ ಅನಾನುಕೂಲವೂ ಇಲ್ಲ. ನೀರು-ನಿಡಿ-ಪಲ್ಯ-ಕಾಯಿ-ಎಲ್ಲದಕ್ಕೂ ಸೌಖ್ಯ. ಬೆಚ್ಚಗೆ ಹಿರಿಯರು ಕಟ್ಟಿಸಿಟ್ಟ ಮನೆಯಿದೆ. ಒಂದು ಹಂಚು ಕೂಡ ಹೊಸದಾಗಿ ಹೊಚ್ಚಬೇಕಾಗಿಲ್ಲ. ಒಳಮನೆಯ ಕೋಣೆಯನ್ನು ಬಾಣಂತಿಗೆ ಕೊಟ್ಟರಾಯಿತು.

ಭೀಮಣ್ಣ—ಹಾಗೇ ಆಗಲಿ. ವಿಚಾರ ಮಾಡೋಣ.

ಲಕ್ಷ್ಮವ್ವ—ಈಕೆಯನ್ನು ತವರೂರಿಗೆ ಕಳಿಸಿದರೆ ಅಲ್ಲಿಯ ಮಳೆ-ಗಾಳಿ-ಚಳಿ, ಎಂಥೆಂಥವರಿಗೋ ಬಾಧಿಸುವದು. ಇನ್ನು ಬಾಣಂತಿಯ ಗತಿಯೇನು?

ಭೀಮಣ್ಣ—ಹಾಗೇ ಆಗಲಿ.

ಲಕ್ಷ್ಮವ್ವ—ಏಕೆ, ಭೀಮೂ. ಬಹಳ ನಿದ್ದೆ ಬಂದಂತೆ ಕಾಣುತ್ತದೆ? ತೂಕಡಿಸುತ್ತೀ ?

ಭೀಮಣ್ಣ—ಇಲ್ಲ ಅವ್ವಾ ! ಜಾಡ್ಯವಾಗಿದೆ, ಅಷ್ಟೆ.

ಲಕ್ಷ್ಮವ್ವ—ಅಷ್ಟು ಬಿಸಿ ತರುತ್ತೇನೆ. ಮಲಗಿಕೋ ನಮ್ಮಪ್ಪಾ. (ಹೋಗುವಳು.)

ಭೀಮಣ್ಣ—(ಎದ್ದು ಕುಳಿತವನು ಮಲಗಿಕೊಂಡು) ಈ ಎಲ್ಲ ಪ್ರಶ್ನೆ ಹೇಗೆ ಬಗೆಹರಿಯುತ್ತದೋ ನೋಡಬೇಕು. ಈ ಹೊಲೆಯರು ಇಂದು ಮುಂಜಾನೆ ನನ್ನ ಧೋತರಕ್ಕೆ ಕೈ ಹಚ್ಚಿದರು. ಇನ್ನು ನನ್ನ ಮಾನಕ್ಕೆ ಮಸಿ ತೊಡೆಯುವರೆ ? ಸಾಹಸಧನನಾಗದವನು ಮಾನಧನನಾಗಲಾರ. ಇಷ್ಟು ದಿವಸ ಸಾಹಸಕ್ಕೆ ಮೇರೆಯೆಳೆದಿದ್ದೇ ತಪ್ಪು.

(ತೆರೆಯು ಬೀಳುತ್ತದೆ.)

———

## ಪ್ರವೇಶ ೨

(ಡಂಗುರದವನು ಬರುತ್ತಾನೆ. ಕರಿಯನು ಕೈಯಲ್ಲಿ ಕಿನ್ನರಿಯೊಂದನ್ನು ಹಿಡಿದುಕೊಂಡು ನಡೆದಿರುತ್ತಾನೆ.)

ಡಂಗುರದವ—ಯಾಕಪಾ, ಕರಿಯಪ್ಪ, ಹರೇದಾಗ ಎದ್ದು ಕಾಣಬೇಕೆಂದ ಕ್ಯಾಸ ಬಂದರ, ನನಕಿಂತಾ ಮೊದಲು ಸೀನs ಹೊಂಟು ನಿಂತೀ ಯಲ್ಲಪಾ ? ಅಲಲಲ ! ಕೈಯಾಗ ತಂಬೂರಿ ಬ್ಯಾರೆ ಐತೆಲ್ಲ ! ಕೀರ್ತನಾ ಮಾಡೋ ಹರಿದಾಸಗೋಳು ಆಗತೀಯೇನು ? ಇಷ್ಟು ಜನ ಯಾಕ ನೆರದೈತಿ ಅಲ್ಲೆ ?

ಕರಿಯ—ಬಂದೀ, ನೆಟ್ಟಗಾತು ಬಿಡೋ ನಿನ. ಇನ್ನ ನನ್ನದು ನಿನ್ನದು ಭೆಟ್ಟಿ ಆಗೋದು ಯಾವ ಮಾತೋ ಏನೋ ! ಕುಂತಗೋ ಇಲ್ಲೆ,—ನಮ್ಮ ಮನಿ ಅಂಗಳದ ಪರಸುಗಲ್ಲಿನ ಮ್ಯಾಲ. ಒಂದು ಗಳಿಗೆ ಹೊತ್ತು ಮಾತಾಡಿ ಹೋಗೂನು.

ಡಂಗುರದವ—(ಕುಳ್ಳಿರುತ್ತ) ಅದು ಯಾಕೋ ಕರಿಯಪ್ಪ, ಈ ಮಾತ ಯಾಕ ಬಂತು ನಿನ್ನ ಬಾಯಾಗ ?

ಕರಿಯ—ಧಣೇರು ಇನ್ನು ನಿಮ್ಮ ಊರು ಬಿಟ್ಟ ನಡಿತಾರು. ಇಂಚಲಾಪುರಕ ಇನ್ನ ನಾಳಿನಿಂದ ನಮ್ಮ ವಸ್ತಿ. ಸಾಮಾನೆಲ್ಲಾ ಹೇರಿ ಗೀರಿ ಆತು. ನನ್ನ ಜೀನಸು ಅಷ್ಟು ಚಕಡ್ಯಾಗ ಹಾಕೋದು ಉಳಿತು ನೋಡಿನ್ನ.

ಡಂಗುರದವ—ಅದ್ಯಾಕೋ ಕರಿಯಪ್ಪ ? ನಾಯಕರು ಊರ ಬಿಟ್ಟರ ಇಲ್ಲಿ ಇರಬೇಕು ಯಾರಿನ್ನ ? ಇಷ್ಟು ದಿವಸ ಅವರು ಊರಾಗ ಇದ್ದರು. ಜೀವದಾಗ ಜೀವಿತ್ತು. ಇನ್ನ ಏನಂತ ನಾವು ಜೀವ ಹಿಡಿಯೂನು ಇಲ್ಲೆ ? (ಅಳುವನು)

ಕರಿಯ—ಊರು ಬಿಟ್ಟರ ಏನಾತು ಬಿಡೋ ! ಇಲ್ಲೇ ಲಗತಿನಾಗ ಇರತಾರು. ಅದಕ್ಯಾಕ ಕಾಳಜಿ ನಿನಗ ?

ಡಂಗುರದವ—ಅಲ್ಲಾ, ಊರು ಬಿಡಾಕ ಕಾರಣಾರs ಏನಾತೋ ಕರಿಯಪ್ಪ ? ಅದನ್ನಾರ ತುಸು ಹೇಳಬಾರದs ?

ಕರಿಯ—ಬೇವಿನಹಳ್ಳಿ ಬಿಡಾಕ ಕಾರಣಾರs ಯಾಕ ಬೇಕೋ, ಹುಚ್ಚ. ಮಾನವಂತರು ಇರೋ ಊರಲ್ಲೀಳಿದು. ಶ್ರೀಮಂತರ ಆಳಿಕಿ ರೀತೀನ

ಹಾಂಗ. ಮತ್ತ ಸಣತಮ್ಮಪ್ಪನವರ ಕಾರಕೂನಕಿ ಬ್ಯಾರೆ !

ಡಂಗುರಡವ—ಅಂತೂ ನಮ್ಮೂರ ಬಿಟ್ಟು ನಡದರಪಾ, ನಾಯಕರು. ಈ ಸುದ್ದಿ ಕೇಳಾಕ ಬಂದಿದ್ದಿಲ್ಲ ಬಿಡು ನಾ ಇಲ್ಲೆ. ನನ್ನ ಕಿವ್ಯಾಗ ಬೆಂಕೀನ ಬಿತ್ತು. ಓಟು ತಂಬೂರಿ ಬಾರಿಸಿ ಒಂದು ಪದ ಅರೆ ಹೇಳಬಾರದs ? ಇನ್ನ ನಮ್ಮ-ನಿಮ್ಮ ಬೆಟ್ಟಿ ಆಗೋದು ಕಮ್ಮ.

ಕರಿಯ—ಊರಿಗೆ ಹೊಂಟು ನಿಂತಾಗ ಎಲ್ಲೀ ಪದಾ ಬಿಡೋ ನಿನ. ಮತ್ತ ಬಂದೇನಂತ. ಆದರೂ ಊರ ಬಿಟ್ಟ ಕಾರಣ ಕೇಳಿದೆಲ್ಲs ನೀನು ? ಹೇಳತೀನಿ ನೋಡು ಒಂದು ಪದದಾಗ !

ದುರುಳರ ಸಂಗದೊ । ಳಿರುತಿಹ ನರನಿಗೆ ।
ಪರಿಪರಿ ಕಷ್ಟಗಳ್ । ಬರುವುದು ಸತ್ಯವು ॥ ಪಲ್ಲ ॥

ತಿರಿದುಂಡರು ಸಹ ದುಷ್ಟರ ನೆರಳೊಳ ।
ಗಿರಬೇಡಿರಿ ಈ ಧರೆಯೊಳಗೆ ॥ ಅನುಪಲ್ಲ ॥

ಹುಲಿಯ ಕ್ರೋಧದಿಂದುಳಿಯಲುಬಹುದು ।
ತುಳಿದು ಹಾವಿನ ಹೆಡೆ ಜೀವಿಸಬಹುದು ॥
ಮುಳಿದ ದ್ವಿಪವನ್ನೊಲಿಸಲುಬಹುದು ।
ಖಲರ ಜಾಲದಿಂದುಳಿವುದಸಾಧ್ಯವು ॥ ೧ ॥

ಮಾರೀಚನಿಂದಲಿ ರಾವಣನಳಿದನು ।
ಕೌರವ ಕೆಟ್ಟನು ಶಕುನಿಯಿಂದ ॥
ಶೂರ ಸಂಭಾಜಿಯು ಕಲುಷನಿಂದಲಿ ಕೆಟ್ಟ ।
ಯಾರಿಗು ತರವಲ್ಲ ದುರ್ಜನ ಸಂಗವು ॥ ೨ ॥

ಕಾಮಾಸಕ್ತಿಯಿಂ ಕಾಮಿನಿಯರನು ।
ಕಾಮಿಸುತವರ ನಿರ್ನಾಮವ ಮಾಳ್ವರು ॥
ಶ್ರೀಮುದದಿಂದಲಿ ರಾಮೇಶ್ವರ ವರ ।
ನಾಮವ ಭಜಿಸದೆ ಭೂಮಿಯಲ್ಲಿರುವವರು ॥ ೩ ॥

ಡಂಗುರದವ—ಹೌದು ಬಿಡು, ಎಂತಾ ಮಾತು. ಶ್ರೀಮಂತ ಜನರ ಸಂಗ ತೀನ ಕಠಿಣ. ನಾಯಕರಿಗೆ ನಾನು ಓಟು ಬೆಟ್ಟೆ ಆಗತೇನೋ ಕರಿಯಪ್ಪ. ಜನ ರೇಜಿಟ್ಟ್ಯೃತಿ ನೋಡು ನಾಯಕರ ಮನಿಗೆ. ಮುಂಜಾನೆ ಎದ್ದು ಊರೆಲ್ಲ ಎಲ್ಲಿ ಹೊಂಟ್ಯೆತೆಪಾ ಅಂತಿದ್ದೆ ನಾನು.

ಕರಿಯು—ಜಗತ್ತಿನ ರೀತೀನ ಇದು. ನಡಿ, ಹೋಗೋಣ ಏಳಿನ್ನ, ನನಗೂ ಹೊತ್ತಾತು.

ಡಂಗುರದವ—ನಡಿಯುಪಾ. ನಾಯಕರ ಪಾದಕ ಓಟು ಬಿದ್ದು ಬರತೇನು.

(ಹೋಗುತ್ತಾರೆ.)

---

## ಪ್ರವೇಶ ೩

(ಹಣುಮಪ್ಪ ದೇಸಾಯರ ಮನೆ. ದೇಸಾಯರು ಸುಖಾಸನದಲ್ಲಿ ಕುಳಿತಿದ್ದಾರೆ. ಸಣತಮ್ಮಪ್ಪನು ಬರೆಯುತ್ತ ಕೆಳಗೆ ಕುಳಿತಿದ್ದಾನೆ. ಸೆಟ್ಟಿಯು ಬಂದು ನಿಂತಿದ್ದಾನೆ.)

ಸಿದರಾಮಸೆಟ್ಟಿ—ಶ್ರೀಮಂತರಿಂದ ಇಂಥ ಅನ್ಯಾಯವಾಗಬಾರದು. ನಾನು ತಪ್ಪು ಮಾಡಿದ್ದರೆ ಪ್ರಭುಗಳು ಮನ್ನಿಸಬೇಕು. ನನ್ನ ಆಸ್ತಿಯನ್ನು ಹೀಗೆ ಇಲ್ಲದಾಗಿ ಮಾಡಿ ನನ್ನ ಸಂಸಾರಕ್ಕೆ ಮಣ್ಣು ಹೊಯ್ಯಬೇಡಿರಿ, ಶ್ರೀಮಂತರೆ !

ದೇಸಾಯಿ—ಸೆಟ್ಟರೆ ! ನೀವು ನಿಮ್ಮ ಸ್ಥಿತಿ-ಗತಿಯನ್ನು ಮರೆತಂತೆ ಕಾಣುತ್ತದೆ. ನಮಗೆ ತಿಳಿದಂತೆ ಮಾಡಿದ್ದೇವೆ. ಇದಕ್ಕಿಂತ ಹೆಚ್ಚಿನ ನ್ಯಾಯ ಬೇಕಾಗಿದ್ದರೆ ನೀವು ಮನಬಂದತ್ತ ಹೋಗಿರಿ. ಕಾರಕೂನರೆ, ಇವರ ಅಪರಾಧಗಳನ್ನು ಇನ್ನೊಮ್ಮೆ ಇವರೆದುರಿಗೆ ಓದಿ ಹೇಳಿರಿ.

ಸಣತಮ್ಮ—(ಎದ್ದು ನಿಂತು ಓದುತ್ತ) ದೇಸಗತ್ತಿಯು ಆಚಂದ್ರಾರ್ಕವಾಗಿ ವೃದ್ಧಿಂಗತವಾಗಲಿ. ಲಕ್ಕಣ್ಣೊಡೆಯರ ವಂಶವು ಅಜರಾಮರವಾಗಲಿ. ಶ್ರೀಮಂತ ಹಣುಮಪ್ಪ ದೇಸಾಯರಿಗೆ ಜಯಜಯಕಾರವಿರಲಿ. ತರುವಾಯ ದೇಸಗತ್ತಿಯ ತಲೆವಳ್ಳಿಯಾದ ಬೇವಿನಹಳ್ಳಿಯಲ್ಲಿ ಸಿದರಾಮಸೆಟ್ಟಿ ಎಂಬಾತನು ದುರ್ವರ್ತನದಿಂದ ಶ್ರೀಮಂತರಿಗೂ ಜನರಿಗೂ ಬೇಡಾಗಿದ್ದಾನೆ. ಶ್ರೀಮಂತರ ಅಧಿಕಾರಕ್ಕೆ ಧಕ್ಕೆ ಬರುವ ಹಾಗೆ ವರ್ತಿಸುವ ಪುಂಡರ ತಂಡವನ್ನು ಸೇರಿದ್ದಾನೆ. ಶ್ರೀಮಂತರ ಶಾಸನಗಳನ್ನು ನಿರಾಕರಿಸುವದಲ್ಲದೆ ಸಂಸ್ಥಾನದ ಅಸ್ತಿತ್ವಕ್ಕೆ ಧಕ್ಕೆ ತಗಲುವ ಕೆಲಸದಲ್ಲಿ ಕೈಹಾಕಿದ್ದಾನೆ. ತನ್ನ ಹೊಲದ ತೆರಿಗೆಯನ್ನು ಕಳೆದ ಮೂರು ವರ್ಷಗಳಲ್ಲಿ ಕೊಟ್ಟಿಲ್ಲ. ಕೊಡಲಿರುವ ಉಳಿದ ರಾಜನಿಷ್ಠರಿಗೆ ಕೊಡಬೇಡಿರೆಂದು ಬುದ್ಧಿ ಕಲಿಸುತ್ತಾನೆ. ದೇಸಗತ್ತಿಯ ಗುಡಿಯ ಜೀರ್ಣೋದ್ಧಾರ ಮಾಡಲು ಸಹಾಯ ಮಾಡದೆ ಶ್ರೀಮಂತರ ಶತ್ರುಗಳ ತವರುಮನೆಯಂತಿದ್ದ ಈಶ್ವರಾಲಯವನ್ನು ಕಟ್ಟಿಸಲು ದುಡ್ಡನ್ನು ಆಣೆಕಲ್ಲಿನಂತೆ ಸುರಿಸುತ್ತಾನೆ. ಈ ಸಿದರಾಮಸೆಟ್ಟಿಗೆ ಬುದ್ಧಿ ಬರಲೆಂದು ಅವನ ಹೊಲಗಳನ್ನೆಲ್ಲ ದೇಸಗತ್ತಿಗೆ ಸೇರಿಸಿದೆ. ಅವನಿಗೆ ಬುದ್ಧಿ ಬಂದಾಗ ಇವನ್ನು ತಿರುಗಿ ಕೊಡಲಾಗುವದು. (ಕುಳಿತುಕೊಳ್ಳುವನು.)

ದೇಸಾಯಿ—ಕೇಳಿದಿರಾ ಸೆಟ್ಟರೆ! ನಿಮ್ಮ ಪ್ರತಾಪದ ಫಲವನ್ನು ? ಇನ್ನು ಅದನ್ನು ಯಥೇಚ್ಛವಾಗಿ ಭೋಗಿಸಿರಿ.

ಸೆಟ್ಟಿ—ಶ್ರೀಮಂತರೆ ! ಹೊಲಗಳ ಬೆಳೆಗಿಂತ ನಿಮ್ಮ ತೆರಿಗೆಯೇ ಭಾರವಾದರೆ ಅದನ್ನು ನೀಗಿಸುವದು ಹೇಗೆ ? ನಿಮ್ಮ ಶ್ರೀಮಂತಿಕೆಗೆ ನಾವು ಮಾಡಿದ ಧರ್ಮಾರ್ಥವೆಲ್ಲ ದ್ರೋಹವಾಗಿ ಕಾಣುತ್ತದೆ. ಅಧಿಕಾರದಲ್ಲಿದ್ದವರು ವಿಚಾರ ಮಾಡಬೇಕು ; ಹೀಗೆ ಅನಾಚಾರ ಮಾಡಬಾರದು.

ಸಣತಮ್ಮ—ಓಹೋ ! ಸೆಟ್ಟರ ಗಂಟು ಮಟಾಮಾಯವಾಗಲು ಅವರಿಗೆ ನೀತಿ ನೆನಪಾದಂತೆ ತೋರುತ್ತದೆ !

ದೇಸಾಯಿ—ಏ, ಗಂಗಜ್ಜಾ ! ಇಲ್ಲಿ ಬಾ.

ಗಂಗಜ್ಜ—(ಬಂದು) ಬಂದೆ, ದೇವರು !

ದೇಸಾಯಿ—ಈ ಸೆಟ್ಟರು ನೀತಿ ಕಲಿಸಲು ಬಂದಿದ್ದಾರೆ. ಇವರಿಗೊಂದು ಗುದ್ದು. ನೋಡೋಣ !

ಸೆಟ್ಟಿ—ಎಲ ! ಇದೇನು ? ನಾನೇನು ನಿಮ್ಮ ಅಂತಃಪುರಕ್ಕೆ ಸೇರಿದ ಸೂಳೆ ಬೆಡಗಿನವಳೆಂದು ತಿಳಿದಿರಾ ? ಏನು ನೀವು ಮುರಿದ ಸಂಸಾರಗಳಿಗೆ ಸೇರಿದ ಒಬ್ಬ ದುರ್ದೈವಿ ಹೆಣ್ಣು ಮಗಳೆಂದೊ ?

ದೇಸಾಯಿ—ಹಾಗೆ ತಿಳಿದಿದ್ದರೆ ಅಷ್ಟು ಕೆಲಸವನ್ನು ನಾನೇ ಮಾಡುತ್ತಿದ್ದೆ. ಅಲ್ಲವೆಂದು ಈ ಗಂಗಜ್ಜನಿಗೆ ಹೇಳಿದ್ದೇನೆ. ಹೂಂ ! ಗಂಗಜ್ಜಾ ! ಏಕೆ ? ಹಿಂದುಮುಂದು ನೋಡುತ್ತಿ ?

(ಗಾಬರಿಯಾದ ಗಂಗಜ್ಜನು ಗುದ್ದಲು ಸೆಟ್ಟರೆಡೆಗೆ ಸಾಗುತ್ತಾನೆ.)

ಸೆಟ್ಟಿ—(ಗಂಗಜ್ಜನ ಕೆನ್ನೆಯ ಮೇಲೆ ಒಂದು ಬಲವಾಗಿ ಕೊಟ್ಟು) ಏ ! ಹುಚ್ಚಿ ! ಹಿಂದೆ ಸರಿ. ನನ್ನ ಮೈಗೆ ನಿನ್ನ ಕೈ ತಟ್ಟಿದರೆ ನಿನ್ನ ಕಣ್ಣು ಕಳೆದು ಬಿಟ್ಟಾವು! ಓಹೋ . . . . . ಮರೆತೆ ! ನೀನು ಗಂಗಜ್ಜ . . . . . ಮನುಷ್ಯ . . . ನರಪಶುವಲ್ಲ , . . ಇಲ್ಲಿದ್ದ ಉಳಿದಿಬ್ಬರ ಮೈ ಮುಟ್ಟಿದರೆ ನನ್ನ ಕೈ ಮಾಸಿ ಹುಳಿಯುವವು. ನೀನು ನಮ್ಮವ. ಬಾ. ನಿನ್ನನ್ನು ತಬ್ಬಿಕೊಳ್ಳುತ್ತೇನೆ. ಶ್ರೀಮಂತರಾದರೆ, ಅವರಿಗೆ ಸರಕಾರದ ತುಬಾಕಿಯು ಹೇಗಿರುತ್ತದೆಯೆಂಬುದನ್ನು ತೋರಿಸಬಹುದಾಗಿತ್ತು. ಕಾರಕೂನರಾದರೆ-ಮನುಷ್ಯನು ಹೇಗೆ ಊನನಾಗುತ್ತಾನೆಂಬುದನ್ನು

ಪ್ರಯೋಗಿಸಬಹುದಾಗಿತ್ತು. ನೀನು ಆಳು ಮನುಷ್ಯನಾಗಿದ್ದೀಯೆ. ಬಾ, ನಿನ್ನನ್ನು ತಬ್ಬಿಕೊಳ್ಳುತ್ತೇನೆ. (ಗಂಗಜ್ಜನನ್ನು ಅಪ್ಪಿಕೊಂಡು ಹೊರಟು ಹೋಗುವನು)

ದೇಸಾಯಿ—ಹ್ಹ ! ಹ್ಹ ! ಹ್ಹ ! ಹ್ಹ !

ಸಣತಮ್ಮ—ಹ್ಹ ! ಹ್ಹ ! . . . . ಆದರೆ, ಶ್ರೀಮಂತರೆ ! ಈ ಒಂದು ನಿಮ್ಮ ಸನ್ನಿಧಿಯಿಂದ ತೆರಳುವದಕ್ಕೆ ಹೊಸದೊಂದು ಯೋಜನೆಯನ್ನು ಮಾಡಿ ದಂತೆ ಕಾಣುತ್ತದೆ. ತಳ್ಳುವದಕ್ಕಿಂತ ಮೊದಲು ಹೊಳ್ಳಿ ಹೋಗುತ್ತಾರೆ. ಆ ನಾಯಕರಮೂ ಹೀಗೆಯೆ ಆಯಿತು.

ದೇಸಾಯಿ—ಸೆಟ್ಟಿಗೆ ಇಷ್ಟು ಬರಗುಣಿ ಸಾಕು.

ಸಣತಮ್ಮ—ಏ ! ಗಂಗಜ್ಜಾ ! ಇಲ್ಲೇಕೆ ನಿಂತಿ ಎಬಡನ ಹಾಗೆ ?

ಗಂಗಜ್ಜ—ಧಣಿಯರ ಹುಕುಮಿನಂತೆ ಆ ಕರಿಯಪ್ಪನನ್ನು ಹಿಡಿದು ತಂದಿ ದ್ದೇನೆ. ಅಪ್ಪಣೆಯಾಗಬೇಕು, ಮಹಾಪ್ರಭೋ ?

ದೇಸಾಯಿ—ಹೋಗು, ಅವನನ್ನು ಕರೆದುಕೊಂಡು ಬಾ ಇಲ್ಲಿ. (ಗಂಗಜ್ಜನು ಹೋಗುತ್ತಾನೆ.) ಮತ್ತೇನು ಸಮಾಚಾರ, ಸಣತಮ್ಮ ? ರಾಮಣ್ಣನವರು ಇಂದು ಕಾಣುವದಿಲ್ಲ ?

ಸಣತಮ್ಮ—ಅವರ ಪ್ರಕೃತಿ ನೆಟ್ಟಗಿಲ್ಲವಂತೆ, ಶ್ರೀಮಂತರೆ. ಇಂದು ಬರುವ ದಿಲ್ಲೆಂದು ಹೇಳಿ ಕಳಿಸಿದ್ದಾರೆ.

ದೇಸಾಯಿ—ಇನ್ನು ಅವರ ಪ್ರಕೃತಿ ಹೀಗೆಯೇ ಕಾಣುತ್ತದೆ. ನೀನು ಮಾತ್ರ ಕಾರಭಾರಿಯಾಗಲು ಸಿದ್ಧನಾಗಿರು. ಮುಂದೆ ?

ಸಣತಮ್ಮ—ಚಿಕ್ಕ ಶ್ರೀಮಂತರ ಪತ್ರ ಬಂದಿದೆ ಮುಂಬಯಿಯಿಂದ.

ದೇಸಾಯಿ—ಹಾ ! ಎಲ್ಲಿ ? ನೋಡೋಣ ! ಕಡೆಗೆ ಉತ್ತರ ಬರೆದನೋ ಈ ನಮ್ಮ ಮಗ ! ನಾಲ್ಕು ಬಾರಿ ಪತ್ರ ಹಾಕಿ ಎರಡು ತಾರು ಬಿಟ್ಟಾಗ ಇದೊಂದು ಪತ್ರ ಬಂತು. ತಂದೆಯ ಮೇಲೆ ಇಷ್ಟು ಪ್ರೀತಿ ಇವನಿಗೆ! ಚಿಕ್ಕಂದಿನಲ್ಲಿ ಇವನ ತಾಯಿ ತೀರಿದರೆಂದು ಅಕ್ಕರತೆಯಿಂದ ಬೆಳೆಸಿದರೆ- ಅದಕ್ಕೆ ಪ್ರತಿಫಲವಾಗಿ ಈ ಸೊಕ್ಕು,-ಈ ಸೆಡವು. ಎಲ ! ಇವನ : ಸ್ಮಶಾನ ಪತ್ರದಂತೆ ಮೂರೇ ಸಾಲು ಬರೆದಿದ್ದಾನಲ್ಲ ಕಾರ್ಡಿನಲ್ಲಿ ! 'ನಾನು ಸೂಟಿಗೆ ಊರಿಗೆ ಬರುವದಿಲ್ಲ. ಅಭ್ಯಾಸಕ್ಕಾಗಿ ಇಲ್ಲಿಯೇ ಇರು

ತ್ತೇನೆ. ಹಣ ಕಳಿಸಬೇಕು.' ಊರು ಬಿಟ್ಟು ಎರಡು ವರುಷವಾಗುತ್ತ ಬಂತು, ದುಡ್ಡು ಕೊಡುವ ತಂದೆಗೆ ಮೋರೆ ತೋರಿಸಬಾರದೆಂದರೆ? ಇವನು ಮುಂಬಯಿಯಲ್ಲಿ ಮಾಡುವ ಶತಕೃತ್ಯವನ್ನು ತಿಳಿದುಕೊಳ್ಳೆಂದು ನಿನಗೆ ಹೇಳಿದ್ದೆ. ಗೊತ್ತು ಹಚ್ಚಿದ್ದೀಯಾ, ಸಣತಮ್ಮ?

ಸಣತಮ್ಮ—ಮಾಡುವದೇನು? ನಾಟಕಗೃಹ, ರಂಗತಾಲೀಮು, ಮಂಗತಾಲೀಮು, ನಾಟಕಗೃಹ, . . . .

ದೇಸಾಯಿ—ಒಳ್ಳೆ ಮಗ ಹುಟ್ಟಿದ ನನ್ನ ಹಣೆಬರಹಕ್ಕೆ. ಸಣತಮ್ಮ, ಸೂಟಯಲ್ಲಿ ಊರಿಗೆ ಬರದ ವಿನಾ ದುಡ್ಡು ಕಳಿಸುವದಿಲ್ಲೆಂದು ಬರೆ, ಈ ಶುಂಭನಿಗೆ.

ಸಣತಮ್ಮ—ಹಿಂದೊಮ್ಮೆ ನಿಮ್ಮ ಹೇಳಿಕೆಯ ಪ್ರಕಾರ ಹಾಗೆ ಬರೆದಿದ್ದೆ, ಧಣಿಯರೆ! ದುಡ್ಡು ಕಳಿಸದಿದ್ದರೆ ತಲೆಯೊಡೆದುಕೊಂಡು ಪ್ರಾಣ ಬಿಡುವೆವೆಂದು ಬರೆದಿದ್ದರು ಚಿಕ್ಕ ಶ್ರೀಮಂತರು. ಮತ್ತೆ ಕಳಿಸಬಹುದೆಂದು ಆಗ ತಾವೇ ಹೇಳಿದ್ದಿರಿ ನನಗೆ.

ದೇಸಾಯಿ—ಆಗಲಿ, ಸಣತಮ್ಮ, ಈಗ ಕೆಲವು ಹಣವನ್ನು ಕಳಿಸು. ಒಮ್ಮೆ ನಾನೇ ಮುಂಬಯಿಗೆ ಹೋಗಿ ವಿಚಾರಿಸುತ್ತೇನೆ. ಏ! ಗಂಗಜ್ಜ, ಯಾಕೊ? ಬಂದನೇನು ಆ ಕರಿಯ?

ಗಂಗಜ್ಜ— ಕರೆದುಕೊಂಡು ಬಂದಿದ್ದೇನೆ, ಮಹಾಪ್ರಭೋ! ಏ! ಕರಿಯಪ್ಪಾ, ಇಲ್ಲಿ ಹೀಗೆ ಬಾ. ದೊರೆಗಳಿಗೆ ಬೊಗ್ಗಿ ಮುಜುರೆ ಮಾಡು. (ಕರಿಯಪ್ಪನು ಮುಜುರೆ ಮಾಡುತ್ತಾನೆ.)

ದೇಸಾಯಿ—ಏನೋ! ಏ! ಕರಿಯ! ನಿಮ್ಮ ನಾಯಕನು ಊರು ಬಿಟ್ಟು ಹೋದನಂತೆ, ಹೌದೇನು?

ಕರಿಯ—ಹೌದು, ಧಣಿಯರೆ, ಭೀಮಣ್ಣನಾಯಕರು ಇಂಚಲಾಪುರದಲ್ಲಿ ಮನೆ ಹಿಡಿದಿದ್ದಾರೆ.

ದೇಸಾಯಿ—ಏಕೆ, ಊರೇಕೆ ಬಿಟ್ಟರು?

ಕರಿಯ—ಅದೇನು ನನಗೆ ಗೊತ್ತಿಲ್ಲ, ಒಡೆಯರೆ. ನಾನು ಅವರ ಮನೆಯ ಆಳು.

ದೇಸಾಯಿ—ಆ ನಾಯಕನಿಗೆ ತಕ್ಕ ಲಫಂಗ ಶಿಷ್ಯನಾಗಿದ್ದೀ ನೀನು! ಹಣು

ಪುಪ್ಪನ ಬಾಲದಂತೆ ನೀನೇಕೆ ಇನ್ನೂ ಇಲ್ಲಿ ?

ಕರಿಯ—ಸಾಮಾನುಗಳನ್ನು ಒಯ್ಯುಬೇಕಾಗಿದೆ, ಧಣಿಯರೆ. ಕಡೆಯ ಸಾರಿಗೆಯನ್ನು ಇದೇ ಹೊಡೆದುಕೊಂಡು ಹೋಗುತ್ತಿದ್ದೆ.

ದೇಸಾಯಿ—ನಾಯಕನಿಗೆ ಒಂದು ಮಾತು ಮುಟ್ಟಿಸಬೇಕಾಗಿದೆ. ಒಯ್ದು ಅವನ ಕಿವಿ ಮೇಲೆ ಹಾಕುವಿಯೇನು ?

ಕರಿಯ—ಹೇಳುವೆನು, ಬುದ್ಧಿ.

ದೇಸಾಯಿ—ಇನ್ನು ಮೇಲೆ ಬೇವಿನಹಳ್ಳಿಯಲ್ಲಿ ಕಾಲಿಟ್ಟಷ್ಟು ಸಲ ನಿನ್ನ ಮೇಲೆ ಶ್ರೀಮಂತರ ಸಿಟ್ಟು ಹೆಚ್ಚುವದೆಂದು ಅವನಿಗೆ ತಿಳಿಸು.

ಕರಿಯ—ಆಗಲಿ, ಬುದ್ಧಿ.

ದೇಸಾಯಿ—ಶ್ರೀಮಂತರ ಸಂಸ್ಥಾನದ ಹದ್ದು ಮೀರಿ ಹೋಗಿರುವೆನೆಂಬ ಹಮ್ಮು ಬೇಡೆಂದು ಹೇಳು ಅವನಿಗೆ. ದೇವರಂತೆ ಸರ್ವಾಂತರ್ಯಾಮಿ ಯಾಗಿದ್ದಾರೆ ಶ್ರೀಮಂತರು.

ಕರಿಯ—ಹೇಳುತ್ತೇನೆ, ಬುದ್ಧಿ.

ಸಣತಮ್ಮ—ಏ ! ಕರಿಯ ! ಇಲ್ಲಿ ನಿಲ್ಲು.

ಕರಿಯ—ನಿಂತೆ, ಧಣಿಯರೆ.

ಸಣತಮ್ಮ—ಕಾರಕೂನರು ತಮ್ಮ ಸವಿನಯ ನಮಸ್ಕಾರಗಳನ್ನು ಸಲ್ಲಿಸಿದರೆಂದು ತಿಳಿಸು ನಾಯಕರಿಗೆ

ಕರಿಯ—ಆಗಲಿ, ಧಣಿಯರೆ.

ಸಣತಮ್ಮ—ನಡೆ, ಏ ಗಂಗಜ್ಜ. ಇವನನ್ನು ಬಿಟ್ಟು ಬಾ ಹೊರಂಗಳದಾಚೆ.

ಗಂಗಜ್ಜ—ಬಿಟ್ಟು ಬರತ್ತೇನೆ, ರಾಯರೆ.

(ಕರಿಯಪ್ಪ ಹಾಗು ಗಂಗಜ್ಜ ಹೊರಡುತ್ತಾರೆ. ತೆರೆ ಬೀಳುತ್ತದೆ. ಅದರ ಮುಂದೆ ಇವರಿಬ್ಬರೂ ಬರುತ್ತಾರೆ.)

ಗಂಗಜ್ಜ—ಈ ಧಣಿಯರು-ಧಣಿಯರ ನಡುವೆ ನನಗೆ ಸಾಕುಬೇಕಾಗಿದೆ, ಕರಿಯ ! ನಾನು ಬಾಳುವದೇ ಕಷ್ಟವಾಗಿದೆ.

ಕರಿಯ—ಏಕೊ ? ಅದೇಕೊ ? ಗಂಗಜ್ಜ ! ಗಂಡಸಾಗಿ ಕಣ್ಣೀರು ಹಾಕುವ ರೇನೋ ಹುಚ್ಚ !

ಗಂಗಜ್ಜ—ಮೊನ್ನೆ ನೋಡಿದರೆ ನಾಯಕರ ಧೋತರವನ್ನು ಕಸಿಯಲು ಹೇಳಿ

ದರು ನನಗೆ. ಶ್ರೀಮಂತರ ಮಾತು ಮೀರಿದರೆ ಪ್ರಾಣ ಕುತ್ತಿಗೆ ಮುಟಿ ಬಂದೀತೆಂದು ಕಸಿದ ಹಾಗೆ ಮಾಡಿದೆ. ಈಗ ನಾಯಕರಿಗೆ ಮೋರೆ ತೋರಿಸುವದೇ ಕಷ್ಟ, ಕರಿಯ ! ಇವತ್ತು ನೋಡಿದರೆ (ಬಿಕ್ಕುತ್ತ) . . ಇವತ್ತು ನೋಡಿದರೆ,-ಆ ಸಿದರಾಮುಸೆಟ್ಟರು ಇದ್ದಾರಲ್ಲ . . . .

ಕರಿಯ—ಹೌದು, ಸೆಟ್ಟರು. ಅವರಿಗೇನಾಯಿತು . . . . ಸೆಟ್ಟರಿಗೆ ?

ಗಂಗಜ್ಜ—(ಅಳುತ್ತ) ಅವರಿಗೆ ಗುದ್ದೆಂದು ಗುಡುಗು ಹಾಕಿದರು ಶ್ರೀಮಂತರು ಕೇಳಿದ್ದೀಯಾ, ಕರಿಯ ಇಂಥ ವ್ಯವಹಾರವನ್ನು ಎಲ್ಲಿಯಾದರು ?

ಕರಿಯ—ಮುಂದೇನಾಯಿತು, ಗಂಗಜ್ಜ ? ನೀನೇನು ಮಾಡಿದಿ, ಆವಾಗ ?

ಗಂಗಜ್ಜ—ಏನು ಮಾಡಬೇಕಪ್ಪಾ ! ಜೀವದ ಸುತ್ತು ಬಂತು ನನಗೆ. ಕಣ್ಣು ಮುಚ್ಚಿಕೊಂಡು ಬಾಯಿ ತೆಗೆದು ಸೆಟ್ಟರ ಹತ್ತಿರ ಹೋದೆ. ಕೆನ್ನೆಯ ಮೇಲೊಂದು ಕೊಟ್ಟರು ನೋಡು, ಸೆಟ್ಟರು ! ಆ ಕಾರಕೂನರು . . .

ಕರಿಯ—ಅವರದೇನು ಸುದ್ದಿ ?

ಗಂಗಜ್ಜ—ಅವನ ಮೇಲೆ ಸಿಟ್ಟು ಬೆಂಕಿ ಬಂದಿದೆ ನೋಡು, ನನಗೆ ! 'ಯಾಕೆ, ಮಲ್ಲವ್ವಾ ! ಗಂಗಜ್ಜನ ಗುಡಿಸಲಕ್ಕಿಂತ ನಮ್ಮ ಮನೆ ದಿವಾಣಖಾನೆ ಚಂದಾಗಿಲ್ಲವೆ ? ವಿಚಾರ ಮಾಡು' ಎಂದು ನನ್ನ ಮಲ್ಲಿಗೆ ಸಂಚ ಕಾರವನ್ನು ಕೊಡಬಂದನಂತೆ ಆ ನೀಚ ! ' ಬಡವರಿಗೆ ಗುಡಿಸಲು ಸಾಕು, ಧಣಿಯರೆ !' ಎಂದು ಲಗುಬಗೆಯಿಂದ ಸಾಗಿ ಬಂದಳಂತೆ, ಮಲ್ಲವ್ವ ! ಈಗ ಗಾಬರಿಯಾಗಿ ಈ ಊರು ಬಿಟ್ಟು ಹೋಗೋಣ ವೆಂದು ಕನವರಿಸುತ್ತಾಳೆ,-ದಿನ ಬೆಳಗಾದರೆ. ಏನು ಮಾಡಲಿ, ಕರಿಯ!

ಕರಿಯ—ಹಾಗಾದರೆ ನಿಮ್ಮ ಕಾರಕೂನರ ಸ್ವಭಾವ . . . .

ಗಂಗಜ್ಜ—ಏನು ಹೇಳಲಿ, ಕರಿಯ ! ನಮ್ಮ ಶ್ರೀಮಂತರನ್ನು ಕೆಡಿಸಿದವ ಈ ಸಣತಮ್ಮನೇ ನೋಡು. ಅವನ ಹಿಡಿತ, ಉಡದ ಹಿಡಿತ.

ಕರಿಯ—ಈ ಊರನ್ನೇ ಬಿಟ್ಟು ಗುಡಿಚಾಪಿ ಕಿತ್ತಿದ್ದೇವೆ. ನಮಗೆ ಇನ್ನು ಶ್ರೀಮಂತರ ಕಾಟವೆ ?

ಗಂಗಜ್ಜ—ಹೇಳಲಿಕ್ಕೆ ಬರುವದಿಲ್ಲ, ಕರಿಯಪ್ಪ. ಆ ಸಣತಮ್ಮ ಪಿಶಾಚಿ ನೋಡು. ಇನ್ನು ನನ್ನ ಗತಿಯೇನು, ಕರಿಯಪ್ಪ ? ನಿಮ್ಮ ಧಣಿಯರಿಗೆ ನನ್ನ ಆಚನ್ನಷ್ಟು ತಿಳಿಸಿ ಹೇಳು. ನನ್ನ ಸಂಸಾರಕ್ಕೆ ಪಿಡುಗು ಬರದಂತೆ

ಕಾಯಲು ಬೇಡು ಅವರಿಗೆ.

ಕರಿಯ—ಶ್ರೀಮಂತರ ಚಾಕರಿ ಹೆಚ್ಚೆಂದು ಹೇಳುತ್ತಿದ್ದೆಯಲ್ಲ, ಗಂಗಜ್ಜ ? ಹಾಗಿದ್ದರೆ . . . . .

ಗಂಗಜ್ಜ—ಛೀ ! ನಿನ ! ಆ ದಿನಗಳು ಹೋಗಿ ಯಾವ ಮಾತಾಯಿತು. ಈಗ ಮಾನ ಉಳಿಸಿಕೊಂಡು ಅವರ ಚಾಕರಿಯಿಂದ ಹೊರಬಿದ್ದರೆ ಸಾಕೆಂದು ಎನಿಸಹತ್ತಿದೆ. ನನ್ನಾಣೆ ಕರಿಯ, ನನಗೆ ಜೀವ ಸಾಕಾಗಿದೆ.

ಕರಿಯ— ಹಾಗಾದರೆ ಇಲ್ಲಿ ನೋಡು. ಅಂಥ ಪ್ರಸಂಗ ಮೈಮೇಲೆ ಬಂದಾಗ ಇಂಚಲಾಪುರಕ್ಕೆ ಬರಲು ತಪ್ಪಬೇಡ. ನಾನು ಧಣಿಯರಿಗೆ ಹೇಳಿಟ್ಟಿರುತ್ತೇನೆ. ಅಷ್ಟರಲ್ಲಿ ನಮ್ಮ ಧಣಿಯರ ವಿಷಯಕ್ಕೆ ಏನಾದರೂ ಮಾತಾದರೆ ಹೇಳಲು ಮರೆಯಬೇಡ . . . . ಏನು ?

ಗಂಗಜ್ಜ—ತಿಳಿಸುತ್ತೇನೆ ; ಅದರ ಕಾಳಜಿ ಬೇಡ ನಿನಗೆ. ಅದಿರಲಿ. ನಿನಗೊಂದು ದೇಸಾಯರ ಲಾವಣಿ ಬರುತ್ತಿತ್ತಲ್ಲ, ಕರಿಯ ? ಆಗ ಅದು ಗೊಡ್ಡು ಲಾವಣಿಯೆಂದು ಹೇಳಿದ್ದೆ. ಈಗ ಅದು ತಿಳಿದಿದೆ, ನೋಡು.

ಕರಿಯ—ಈಗ ಬೇಡ ಗಂಗಜ್ಜ. ಇಲ್ಲಿ ನಮ್ಮವರು ಯಾರಾದರೂ ಕೇಳಿದರೆ ನನ್ನ-ನಿನ್ನ ಜೀವ ಉಳಿಯಲಿಕ್ಕಿಲ್ಲ.

ಗಂಗಜ್ಜ— ಹೇಳೋ, ಕರಿಯ. ಹೇಳು, ನಾನೂ ಅದನ್ನು ಕಲಿತು ನಾಲ್ಕು ಜನರಿಗೆ ಹೇಳಿಕೊಡುತ್ತೇನೆ.

ಕರಿಯ—ಆಗಲಿ, ಹೇಳುತ್ತೇನೆ.

ಬಡವರ ಮನಿಯಾಗ ಭಣಾಭಣಾ
ಆಗ
ದೇಸಾಯ್ರ ಮನಿಯಾಗ ಝಣಾ ಝಣಾ !
ಬಡವರ ಮನಿಯಾಗ ಹೊಗೀ ಹೊಗಿ
ಆದ್ರ
ದೇಸಾಯ್ರ ಮನಿಯಾಗ ನಗೀ ನಗಿ !
ಬಡವರು ತಿರುಗ್ಯಾರ ಮನೀ ಮನಿ
ಆಗ
ದೇಸಾಯಿ ಕುಂತಾನ ಧಣೀ ಧಣಿ !

ಕಾಸಿಲ್ಲ ಜನರ ಮನಿಯೊಾಗ
ಬೇಸಿಲ್ಲ ಜನರ ಮೈಯ್ಯಾಗ
ಮೋಸಿಲ್ಲ ಅವರ ಮನದಾಗ !

ಕಸಿಯೆಂದು ದೇಸಾಯಿ ಮುಸಿಯೆಂದು ಈಸಾಯಿ, ಹಾಳುಮಾಡಿ ಬೇಸಾಯ ಹತ್ತೀ ಬಿತ್ತಿ

ಬಡವರ್ನ ಕೊಲ್ಲತಾರ, ಹರಿದು ಮುರಿದು ಚೆಲ್ಲತಾರ ಹದ್ದಿನ್ಹಂಗ ಕುಕ್ಕಿ ಕುಕ್ಕಿ ನೆತ್ತೀ ನೆತ್ತಿ !

**ಗಂಗಜ್ಜ—**

ಬಡವರ ಮನಿಯಾಗ ಭಣಾ ಭಣಾ
ಆಗ
ದೇಸಾಯ್ರ ಮನಿಯಾಗ ಝಣಾ ಝಣಾ !

**ಕರಿಂಯ—**

ಬಡವರ ಬಾಯಾಗ ಹುಳಾ ಹುಳಾ
ಆಗ
ದೇಸಾಯ್ರಂಗಳಾದಾಗ ಝುಳಾ ಝುಳಾ
ಬಡವರ ಕೈಯಾಗ ತುಣೂಕ್ ತುಣೂಕ್
ಆಗ
ದೇಸಾಯ್ರ ಮನಿಯಾಗ ಮಿಣೂಕ್ ಮಿಣೂಕ್.
ಬಡವರ ಕೇರ್ಯಾಗ ಹೆಣಾ ಹೆಣಾ
ಆಗ
ದೇಸಾಯ್ರ ದಾರ್ಯಾಗ ಹಣಾ ಹಣಾ.
ದಿಕ್ಕಿಲ್ಲ ಊರ ಬಡವರಿಗೆ,
ಸಿಕ್ಕಿಲ್ಲ ಕೂಳು ಕೆಲವರಿಗೆ,
ದಕ್ಕಿಲ್ಲ ಬಾಳು ಹೆರವರಿಗೆ.

ಮದ್ದು ಬಾಣಾ ಬಿರುಸು ಬಿಟ್ಟು ಜರತಾರಿ ಅಂಗಿ ತೊಟ್ಟು ತಿರುಗುತಾರ ಊರೆಲ್ಲ ಪಿರೀ ಪಿರಿ !

ಸದ್ದಿಲ್ಲದ ಸಾಯತಾರ ಹೊಟ್ಟೆಗಿಲ್ಲದ ಕಾಯತಾರ,–ಹಾಯತಾರ ಇವರ ಮ್ಯಾಲ ಹರೀ ಹರಿ !

ಗಂಗಜ್ಜ—

ಬಡವರ ಮನಿಯಾಗ ಭಣಾ ಭಣಾ !

ಆಗ

ದೇಸಾಯ್ರ ಮನಿಯಾಗ ಝಣಾ ಝಣಾ !

ಕರಿಯ—

ಬಡವರ ಮನಿಯಾಗ ಭಣಾ ಭಣಾ

ಆಗ

ದೇಸಾಯ್ರ ಮನಿಯಾಗ ಝಣಾ ಝಣಾ !

ಗಂಗಜ್ಜ—ವಾಹವಾ ! ಇದ್ದರೆ ಲಾವಣಿ ಹೀಗಿರಬೇಕು. ಇದು ಯಾರು ಕಟ್ಟಿದ್ದು, ಕರಿಯ ?

ಕರಿಯ—(ಕಿವಿಯಲ್ಲಿ) ಯಾರಿಗೂ ಹೇಳಬೇಡ ಗಂಗಜ್ಜ. ಇದನ್ನು ನಾನೇ ಕಟ್ಟಿದ್ದು. ಇನ್ನು ನಾನು ಹೊರಡುತ್ತೇನೆ. ಇಂಚಲಾಪುರಕ್ಕೆ ಬರಲು ಮರೆಯಬೇಡ. ಅಲ್ಲಿ ಒಂದು ಮೇಳ ಕೂಡಿಸಿದ್ದೇನೆ. ಇನ್ನೂ ಪದ ಗಳನ್ನು ಕಲಿತೀಯಂತೆ.

ಗಂಗಜ್ಜ—ಆಗಲಿ ಕರಿಯ, ನೆನಪಿರಲಿ ನಾನು ಹೇಳಿದ ಮಾತು.

(ಹೋಗುತ್ತಾರೆ.)

## ಪ್ರವೇಶ ೪

(ಇಂಚಲಾಪುರದಲ್ಲಿ ಭೀಮಣ್ಣನಾಯಕನ ಮನೆ. ಭೀಮಣ್ಣನಾಯಕನು ಸುಖಾಸನದ ಮೇಲೆ ಒರಗಿದ್ದಾನೆ. ಕೆಳಗೆ ಹಾಸಿದ ಜಮುಖಾನೆಯ ಮೇಲೆ ಸುಭದ್ರಾ ಬಾಯಿಯು ಹೆಣಿಗೆ ಕೆಲಸವನ್ನು ಮಾಡುತ್ತ ಕುಳಿತಿದ್ದಾಳೆ.)

ಭೀಮಣ್ಣ—ಏನು, ಇನ್ನೂ ಆ ಹೆಣಿಕೆ ಹಾಕುವ ವಸ್ತ್ರ ಮುಗಿದಿಲ್ಲವೇನು ? ತಿರುಗಿ ನೋಡಿದರೆ ಸಂಕ್ರಮಣ ಬಂತು, ವಸ್ತ್ರವಿಲ್ಲದೆ ಎಳ್ಳು ಬೀರಲು ಹೋಗಬೇಕಾದೀತು ನೋಡು ! ಹೊತ್ತಿಗೆ ಒದಗಿ ಬರದಿದ್ದರೆ ಈ ವಸ್ತ್ರ ಹಾಕಿದ್ದರ ಫಲವೇನು ?

ಸುಭದ್ರಾ—ನಿಮಗ ಗೊತ್ತಿಲ್ಲದ ಕೆಲಸದಲ್ಲಿ ನೀವು ಕೈ ಹಾಕಬೇಡಿರಿ. ಹಗಲೂ ರಾತ್ರಿ ಕೂತು ನಾನು ಮುಗಿಸುತ್ತೇನೆ, ಅಂಚೊಂದು ಉಳಿದಿದೆ. ಕೆಣಕಿ ಕೆಣಕಿ ಮಾತಾಡುತ್ತೀರಿ.

ಭೀಮಣ್ಣ—ಹೌದು, ಬಿಡು. ನಿನ್ನ ಕೆಲಸವು ನನಗೇನು ಗೊತ್ತು. ಏನು ವಸ್ತ್ರ ಹಾಕುತ್ತಿದ್ದೀಯೋ ಮತ್ತ ಮಗುವಿಗೆಂದು ಅಂಗಿಯನ್ನು ಹೆಣಿಯುತ್ತೀಯೋ ? ಅವ್ವ ಮೊನ್ನೆ ನಿನಗೆ ಹೆಣೆಯಲು ಹೇಳಿದ್ದನ್ನು ಕೇಳಿದ್ದೆ, ಅದಕ್ಕಾಗಿ ಈ ಪ್ರಶ್ನೆ.

ಸುಭದ್ರಾ—ಸಾಕು, ಬಿಡಿರಿ. ತಾಯಿ, ಮಗ ಕೂಡಿ 'ಮಗು' 'ಮಗು' ಎಂದು ದಿನ ಬೆಳಗಾದರೆ ಕನವರಿಸುತ್ತೀರಿ ! ಏನು ರಾಜ್ಯಕ್ಕೆ ಹೊರತಾಗಿ ನಿಮಗೇ ಒಂದು ಮಗು ಹುಟ್ಟುವದಿದೆಯೆ ? ಹುಟ್ಟುತ್ತಿರುತ್ತವೆ ; ಬೆಳೆಯುತ್ತಿರುತ್ತವೆ. ನಿಮಗೇಕೆ ಅಷ್ಟೊಂದು ಅಭಿಮಾನ ?

ಭೀಮಣ್ಣ—ಹೂಂ ! ನಿನಗೇನು ಅಭಿಮಾನವಿಲ್ಲವೆಂದು ಕಾಣುತ್ತದೆ ! ನಿರ್ಲಿಪ್ತಜೀವಿ ನೋಡು, ನೀನು ಮೊನ್ನೆ 'ಈ ಊರಲ್ಲಿ ಸಾಲೆಯಿಲ್ಲ, ಮೂಲೆಯಿಲ್ಲ, ಕೊನೆವರೆಗೆ ಹೇಗಿರಬೇಕು ಇಲ್ಲಿ ?' ಎಂದು ಗೊಣುಗುಟ್ಟುತ್ತಿದ್ದಿ. ಹಾಗಾದರೆ ಆ ಸಾಲೆ ಯಾರಿಗೆ ಬೇಕಾಗಿದೆ ಹೇಳು ? ಏನು ಕಲಿಯಬೇಕೆಂದು ನೀನು ಮನಸ್ಸು ಮಾಡಿದ್ದೀಯೊ ?

ಸುಭದ್ರಾ—ಸುಮ್ಮನಿರ್ರಿ ಸಾಕು. ನಿಮ್ಮ ಮಾತಿನಲ್ಲಿ ನನ್ನ ಹೆಣಿಗೆ ತಪ್ಪು ಬಿದ್ದಿತು. ನಿಮ್ಮ ಮಾತಿಗೆ ಪ್ರಾರಂಭವಾದೊಡನೆ ನನ್ನ ಕೆಲಸವೇ ಮುಂದೆ ಸಾಗುವುದಿಲ್ಲ. ನೀವು ಮನೆಯಲ್ಲಿ ಕೂತರೆ ಇದೇ ಹಾಡು,

ಹುಡುಗರ ಹಾಗೆ ಬೆನ್ನು ಹತ್ತಿ ತಿರುಗುವದು, ನಗೆಯಾಡುವದು, ಚಿಟಕು ಮುಳ್ಳಾಡಿಸುವದು. ಬೇವಿನಹಳ್ಳಿಯನ್ನು ಬಿಟ್ಟುಬಂದಿದ್ದೇ ಒಂದು ಚಲ್ಲಾಟವಾಗಿದೆ ನಿಮಗೆ. ಅಲ್ಲಿಯ ನಿಮ್ಮ ನ್ಯಾಯ, ನಿಗದಿ, ಜಗಳ....

ಭೀಮಣ್ಣ—ಬೇವಿನಹಳ್ಳಿ ಮರೆತುಹೋಗಲಿ· ಮತ್ತೆ ಅದನ್ನೇಕೆ ಕೆದರಿ ತೆಗೆಯುತ್ತಿ ?

ಸುಭದ್ರಾ—ಇಲ್ಲ, ಇಲ್ಲ ! ತಪ್ಪಾಯಿತು. ಸುಮ್ಮನೆ ವಿನೋದಕ್ಕಾಗಿ ಅಂದೆ, ಅಷ್ಟೆ. ನಾವಿಬ್ಬರೂ ಇಲ್ಲಿ ಕೂಡಿ ಇರುವದು ನನಗೊಂದು ದೊಡ್ಡ ಹಬ್ಬವಾಗಿದೆ, ಗೊತ್ತಿದೆಯೆ ?

ಭೀಮಣ್ಣ—ಬೇವಿನಹಳ್ಳಿಯನ್ನು ಮರೆತುಬಿಡಬೇಕೆಂದಲ್ಲ. ಅಲ್ಲಿ ಹೋಗುತ್ತೇನೆ. ಆದಷ್ಟು ಜನರಿಗಾಗಿ ದುಡಿಯುತ್ತೇನೆ. ಒಮ್ಮೊಮ್ಮೆ ಅಲ್ಲಿಯ ಅನ್ಯಾಯಗಳು ನೆನಪಿಗೆ ಬಂದಾಗ ಮೈಮೇಲೆ ಮುಳ್ಳೇಳುತ್ತವೆ, ಮುಳ್ಳು !

ಸುಭದ್ರಾ—ಇಕಾ ! ಈ ವಿಷಯುವನ್ನು ನಾನಂತೂ ಎತ್ತಿಲ್ಲ, ನೀವೇ ಕನವರಿಸುತ್ತಿರುವಿರಿ.

ಭೀಮಣ್ಣ—ಇನ್ನು ನಮಗಿಂತ ಕೀಳಸ್ಥಿತಿಯಲ್ಲಿದ್ದವರ ಗತಿಯೇನು ? ಬಡಜನರು ಈ ದುಷ್ಟರ ಕೈಯ್ಯಲ್ಲಿ ಸಿಕ್ಕು ಸಾಯುತ್ತಾರಲ್ಲ ?

ಸುಭದ್ರಾ—ಆಗ ಏನು ಮಾಡಲಿಕ್ಕಾಗುತ್ತದೆ ? ಮರ ಮರ ಮನಸ್ಸಿನಲ್ಲಿ ಮರುಗಿ ಸುಮ್ಮನಿರುವದು. ದಿನಾಲು ಜನರು ಸಾಯುತ್ತಾರೆ ; ಮಗುಗಳು ಮರಣ ಹೊಂದುತ್ತವೆ ; ಮತ್ತೈಪೆಯರು ವಿಧವೆಯರಾಗುತ್ತಾರೆ ? ಇದನ್ನೆಲ್ಲ ತಪ್ಪಿಸುವದು ನಿಮಗೆ ಶಕ್ಯವಿದೆಯೆ ?

ಭೀಮಣ್ಣ—ನೀನು ಹೇಳುವದೇನೋ....ನಿಜ. ಹಿಂದೊಮ್ಮೆ ನಾನೂ ಹೀಗೆಯೇ ತಿಳಿಯುತ್ತಿದ್ದೆ. ಆದರೆ....ಇಷ್ಟಕ್ಕೆ....ಆ ಮಾತನ್ನು ನಿಲ್ಲಿಸಲು ಬರುವದಿಲ್ಲ, ಹುಚ್ಚು ಹುಡುಗಿ ! ಇಂಥವರ ನಾಶವಾಗಲೆಂದು ಇವರನ್ನು ಹುಟ್ಟಿಸಿದ ದೇವರೇ ಇನ್ನೂ ಕೆಲವರಲ್ಲಿ ಒಂದು ಶಕ್ತಿಯನ್ನು ಇಟ್ಟಿರುತ್ತಾನೆ. ಅದರ ಉಪಯೋಗವಾಗಬೇಕು.

(ಲಕ್ಷ್ಮಮ್ಮನವರು ಬರುವರು)

ಲಕ್ಷ್ಮಮ್ಮ--ಏನಪ್ಪಾ ! ಭೀಮು ! ಏನು ನಡೆಸಿದ್ದೀರಿ ನೀವಿಬ್ಬರೂ ? ಕೂಡೇ, ಕೂಡು. ನೀನೇಕೆ ಎದ್ದು ನಿಂತೆ ? ಮುಂದಿಯಿದ್ದಾಗ ಸಣ್ಣ, ಸೂಕ್ಷ್ಮ. ಈಗ ಊರನ್ನೇ ಬಿಟ್ಟು ಇಲ್ಲಿ ಬಂದಿದ್ದೇವೆ. ಏನು, ಭೀಮು? ನೀವಾಡುವ ಮಾತುಗಳು ನನಗೆ ಹೇಳುವ ಹಾಗಿಲ್ಲವೇನು ನಾವು ಮುದುಕರು....

ಭೀಮಣ್ಣ—ಹಾಗಲ್ಲ, ಅವ್ವ ! ನಿನಗೆ ಹೇಳದೆ ಇರುವಂಥದು ಏನಿದೆ ಇದರಲ್ಲಿ? ದುಷ್ಟರನ್ನು ಕಂಡರೆ ದೂರ ಸರಿಯಬೇಕೆಂದು ಈಕೆಯ ಮತ. ಸಾಧ್ಯವಿದ್ದಷ್ಟು ಅವರನ್ನು ನಿಗ್ರಹಿಸಲು ಹೆಣಗಬೇಕೆಂದು ನನ್ನ ಅಭಿಪ್ರಾಯ. ನಿನ್ನ ಅನುಭವವೇನು ಇದರಲ್ಲಿ ? ತಿಳಿಸಿ ಹೇಳಬಹುದೆ ?

ಲಕ್ಷ್ಮಮ್ಮ....ನನಗೇನು ಗೊತ್ತು, ತಮ್ಮ ! ಈಗಿನ ಹೆಂಗಸರಂತೆ ನಾನೇನು ಗಂಡಸರೊಡನೆ ವಾದ ಹಾಕಲು ಕಲಿತವಳೆ ? ಅವರು ಇರುತ್ತಿದ್ದಾಗ ಕೆಲವು ಮಾತುಗಳನ್ನು ಕೇಳಿ ಮಾತ್ರ ಗೊತ್ತಿದೆ. ಚಿನಿವಾಲರ ರಂಗಪ್ಪ ನಾಯಕನ ಹೆಸರು ಕೇಳಿ ಬಲ್ಲೆಯಾ ನೀನು ? ರಂಗಪ್ಪ ನಾಯಕನೂ ಅವರೂ ಕೂಡಿ ಕೆಲವು ದಿನ ಒಟ್ಟು ಚಿನಿವಾಲಕಿ ಮಾಡುತ್ತಿದ್ದರು. ಅವರ ನಡುವೆ ಒಂದೇ ಒಂದು ಖಜಾನೆ. ಅಷ್ಟು ಸ್ನೇಹ ಅವರಿಗೆ. ಹೀಗೆ ಎಷ್ಟೋ ದಿವಸ ಕಳೆದವು. ರಂಗಪ್ಪನಾಯಕನ ಮನೆಯಲ್ಲಿ ದುಡ್ಡು ಕೂಡಿ ಬಿದ್ದಿತು. ಅವನ ಹೆಂಡತಿಯ ಮೈಮೇಲೆ ವಸ್ತುಗಳ ಭಾರ ಅಷ್ಟಿಷ್ಟೆಂದಲ್ಲ. ನನಗೆ ಒಂದು ಜೋಡು ಪಾಟ್ಲಿ ಕೂಡ ಇರಲಿಲ್ಲ. ರಂಗಪ್ಪನ ಮಕ್ಕಳ ಡೌಲಿಗೆ ಸೀಮೆಯೇ ಇರಲಿಲ್ಲ. ನೀನು ಮಾತ್ರ ಬಡವರ ಹುಡುಗನ ಹಾಗೆ ಹೊಲಸು ಅಂಗಿ ಹಾಕಿಕೊಂಡು ಇರುತ್ತಿದ್ದೆ. ಇದನ್ನೆಲ್ಲ ನುಂಗಿಕೊಂಡು ಸುಮ್ಮನಿದ್ದೆ. ಒಮ್ಮೆ ಗಣೇಶಚವತಿ ಬಂತು. ನಮ್ಮ ಮನೆಯಲ್ಲಿದ್ದ ಎಳ್ಳು ಕಾಳಿನಂಥ ಗಣಪತಿಗೆ ಮಂತರ-ಪುಷ್ಪವಾಗಬೇಕಾದರೆ ಸಾಕಾಗಿಹೋಯಿತು. ರಂಗಪ್ಪನ ಮನೆಯಲ್ಲಿ ಭಾರಿ ಗಣಪತಿ, ಮದ್ದು, ಬಜಂತ್ರಿ, ಬ್ರಾಹ್ಮಣರಿಗೆ ಪಂಚಪಕ್ವಾನ್ನ,— ನನಗೆ ಅಳುವು ಬಂದಿತ್ತು.. ಮುಳುಮುಳು ಅಳುತ್ತ ಕುಳಿತಿದ್ದೆ ಮೂಲೆಯಲ್ಲಿ. ಅವರು ಮನೆಗೆ ಬಂದರು....ನಾನು ಅಳುವುದನ್ನು ನೋಡಿದರು....

ಭೀಮಣ್ಣ—ಅಳಬೇಡ. ಅವ್ವ ! ಅಳಬೇಡ. ಮಿಂಚಿ ಹೋದ ಮಾತು.

ಲಕ್ಷ್ಮವ್ವ—ಮರುದಿವಸ ನನ್ನ ಸಮಾಧಾನಕ್ಕಾಗಿ ಒಬ್ಬೊಬ್ಬರ ವ್ಯವಹಾರವು ಬೇರೆಯಾಯಿತು. ಹಿಂದಿನ ಲೆಕ್ಕಪತ್ರ ನೋಡಲು ರಂಗಪ್ಪನ ಕಡೆಗೆ ೫೦೦೦ ರೂ. ಹೆಚ್ಚಾಗಿದ್ದದ್ದು ಕಂಡು ಬಂತು. ಕೊಡಬಹುದೇನೆಂದು ಇವರು ಕೇಳಿದರು. ಈಗ ಆಗುವದಿಲ್ಲೆಂದು ರಂಗಪ್ಪ ಹೇಳಿದ.

ಭೀಮಣ್ಣ—ಆ ಮಾತಾಡಿದಾಗ ಆರಿದ ದೀಪ ಇನ್ನೂ ಅವರ ಮನೆಯಲ್ಲಿ ಹೊತ್ತಿಲ್ಲ !

ಲಕ್ಷ್ಮವ್ವ—ಹೌದು ಭೀಮು ! ಮುಂದೆ ರಂಗಪ್ಪ ಆ ರಕಮ್ಮನ್ನು ಕೊಡಲೇ ಇಲ್ಲ. ದೇವರ ದಯೆಯಿತ್ತು. ನಮ್ಮ ಮನೆ ಬೆಳೆಯುತ್ತ ಬಂತು. ರಂಗಪ್ಪನ ಮನೆತನ ಮಾತ್ರ ಕ್ರಮೇಣ ಸವೆಯುತ್ತ ಬಂತು. ರಂಗಪ್ಪ ಬರೆದುಕೊಟ್ಟ ಪರಮೇಶ್ವರಿ ಲೋಟು ಇತ್ತು ಅವರ ಹತ್ತಿರ. ಆದರೆ ಒಂದು ದಿವಸವಾದರೂ ಕಚೇರಿಯ ಮೆಟ್ಟಿಲು ಹತ್ತಿದರೇನು ಅವರು ? ಅಂಥ ಪುಣ್ಯವಂತರು ಯಜಮಾನರು ! ಅಂಥ ಪುಣ್ಯವಂತರು .. ! ರಂಗಪ್ಪ ಜಡ್ಡಾಗಿ ಮಲಗಿದ್ದ, ಸಾವು ಬಂದು ಎದೆಗೆ ಹಾಯುತ್ತಿತ್ತು ಅವನಿಗೆ. ಇವರನ್ನು ಕರೆಕಳಿಸಿದ. ಅಲ್ಲಿಯವರೆಗೆ ರಂಗಪ್ಪನೊಡನೆ ಪಿಟ್ಟೆಂದು ಅವರು ಮಾತನಾಡಿದ್ದಿಲ್ಲ. ಆದರೂ ಅಂದು ಹೋದರು. 'ನಿಮಗೆ ಕೊಡಬೇಕಾದ ದುಡ್ಡು ಕೊಡಲಾಗುವದಿಲ್ಲ. ಮಕ್ಕಳು,—ಮರಿ,—ಅವರ ಮೇಲೆ ಸಾಲ ಹೊರಸಿ ಹೋಗುವದಿದೆಯೋ ?' ಎಂದ ರಂಗಪ್ಪ. 'ಆಗಲಿ' ಇವರೆಂದರು. 'ಒಮ್ಮನಸ್ಸಿನಿಂದ ನನ್ನನ್ನು ಕ್ಷಮಿಸಿದ್ದೀರಾ ?' ಎಂದು ರಂಗಪ್ಪ ಕೇಳಿದ. 'ಹೌದು' ಎಂದು ಇವರು ಅಶ್ವಾಸನಕೊಟ್ಟರು. 'ಆ ಪರಮೇಶ್ವರಿ ಲೋಟು ?' ಎಂದು ರಂಗಪ್ಪ ಪ್ರಶ್ನೆ ಮಾಡಿದ. ಚರ್ರೆಂದು ಹರಿದು ಅದನ್ನು ರಂಗಪ್ಪನ ಕೈಯಲ್ಲಿ ಕೊಟ್ಟರು ಅವರು. ನಮ್ಮ ದುರ್ದೈವ, ಭೀಮು. ಅವರನ್ನು ಕಳೆದುಕೊಂಡೆವು. ಇಲ್ಲಿದಿದ್ದರೆ ಈ ದೇಸಾಯರ ಹಾರ್‍ಯಾಟ ಹೇಳುತ್ತಿದ್ದೆ. ಏನೇ, ನೀನೇಕೆ ಅಷ್ಟು ಸಣ್ಣ ಮೋರೆ ಮಾಡಿದ್ದೀ ? ಇಂಥ ಕಥೆ ಕೇಳಬಾರದು ಹೋಗ ನೀನು. ಇಂದು ಬಸಿರಿ-ನಾಳೆ ಬಾಣಂತಿ....

ಭೀಮಣ್ಣ—ಇರಲಿ ಬಿಡು ಅವ್ವಾ. ಅದಕ್ಕೇನಾಗುತ್ತದೆ ? ಇಕಾ, ಇಲ್ಲಿ ಕರಿಯ

ಬಂದನು ನೋಡು. ಏನೋ ಕರಿಯ ?

ಕರಿಯ—ಏನೂ ಇಲ್ಲ ಧಣಿಯರೆ. ನಾಡಿದ್ದು ಬಯಲಾಟ ಹಾಕುತ್ತೀವೆ. 'ಯಜಮಾನರು ಊರಲ್ಲಿರುವರೋ ಇಲ್ಲೋ ಕೇಳಿ ಬಾ' ಎಂದರು ಪಂಚರು.

ಭೀಮಣ್ಣ—ವಾಹವಾ ! ಅದರಲ್ಲಿ ನೀನೊಂದು ಪಾತ್ರ ವಹಿಸಿರಬೇಕಲ್ಲ, ಮತ್ತೆ ?

ಕರಿಯ—ಹೌದು, ಧಣಿಯರೇ ! (ನಾಚುವನು)

ಭೀಮಣ್ಣ—ಯಾವುದು ?

ಕರಿಯ—ರಾವಣನದು, ಧಣಿಯರೆ.

ಲಕ್ಷ್ಮಮ್ಮ—ಅಯ್ಯ ! ರಾಮ, ಹನುಮಂತದೇವರು, ಸೀತಾದೇವಿ ಏನಾದರೂ ಆಗಬಾರದಾಗಿತ್ತೇ ಕಪಿ ! ರಾವಣನ ವೇಷ ಯಾಕೆ ಹಾಕುತ್ತೀ ?

ಕರಿಯ—ಎಲ್ಲರೂ ಪಲ್ಲಕ್ಕಿಯಲ್ಲಿ ಕುಳಿತರೆ ಹೊರಬೇಕಾರು, ನನ ತಾಯಿ ?

ಲಕ್ಷ್ಮಮ್ಮ—ಇಂಥಾ ದುಷ್ಟರ ವೇಷ ತೊಗೊಬಾರದು ಕರಿಯ !

ಕರಿಯ—ಯಾರಾದರೂ ರಾವಣನಾಗಬೇಕಲ್ಲ ? ಇಲ್ಲದೆ ಹೋದರೆ ದುಷ್ಟರು ಹೀಗಿರುವರೆಂದು ಗೊತ್ತಾಗುವದು ಹೇಗೆ, ಅವ್ವಾ ? ಅವರಿಗೆ ಆಗುವ ಶಿಕ್ಷೆಯನ್ನು ಜನರು ಕಣ್ಣಾರೆ ನೋಡಬೇಕು.

ಭೀಮಣ್ಣ—ದೇವರೇ ಒಮ್ಮೆ ಅವರಿಗೆ ಶಿಕ್ಷೆ ಮಾಡಿಬಿಟ್ಟಿರುವನಲ್ಲ !

ಕರಿಯ—ಅದು ಜನರ ಕಣ್ಣೆದುರಿಗೆ ಯಾವಾಗಲೂ ಇರಬೇಕು, ಧಣಿಯರೆ. ಬೈಲಾಟ, ನಾಟಕ, ಲಾವಣಿ, ಇವರಿಂದ ಒಳ್ಳೆಯವರು ಹೇಗೆ, ಕೆಟ್ಟವರು ಹೇಗೆ—ನಾಯಕರು ಹೇಗೆ, ಸೇಸಾಯರು ಹೇಗೆ—ಜನರಿಗೆ ಗೊತ್ತಾಗಬೇಕಲ್ಲ. ದೇವರು !

ಭೀಮಣ್ಣ—ಕರಿಯ, ಬಲು ಜಾಣನೋ ನೀನು. ಮಾತಿನಲ್ಲಿ ನಿನ್ನನ್ನು ಹಿಡಿದವರಿಲ್ಲ.

ಕರಿಯ—(ನಕ್ಕು) ಅದು ಏನಾದರೂ ಇರಲಿ, ಧಣಿಯರೆ. ನೀವು ಅಂದು ಊರಲ್ಲಿ ಇರುವಿರಷ್ಟೆ ?

ಲಕ್ಷ್ಮಮ್ಮ—ಅಲ್ಲೋ ಕಪಿ ! ಭೀಮು ಎಲ್ಲಿ ಹೋಗುತ್ತಾನೆ ? ಎಲ್ಲವನ್ನೂ ಬಿಟ್ಟು ಇಲ್ಲಿ ನಿಶ್ಚಿಂತವಾಗಿ ಇರಲು ಬಂದಿದ್ದೇವೆ. ಮತ್ತೆಲ್ಲಿ ಹೋಗುವಿ

ಯಪ್ಪಾ, ಭೀಮು ?

ಭೀಮಣ್ಣ—ಎಲ್ಲಿಯೂ ಇಲ್ಲ, ಅವ್ವ. ನಾನು ಈ ಮನೆ ಬಿಟ್ಟು ಸರಿದಾಡುವದಿಲ್ಲ.

ಸುಭದ್ರಾ—ಏನೋ ಕನಸು ಕರಿಯಪ್ಪನಿಗೆ. ಊರೂರು ತಿರುಗುವ ಚಟ ಬಿದ್ದಿದೆ ಅವನಿಗೆ.

ಸೆಟ್ಟಿ—(ಹೊರಗಿನಿಂದ) ನಾಯಕರೆ, ನಾಯಕರೆ !

ಭೀಮಣ್ಣ—(ಗಡಿಬಡಿಸಿ ಎದ್ದು) ಓಹೋ ! ಯಾರವರು ? ಸಿದರಾಮಸೆಟ್ಟಿಯ ಧ್ವನಿಯದು ! ಬನ್ನಿರಿ ಸೆಟ್ಟರೆ. ಏನು ಕಾರಣ ಈಗ ಬಂದಿದ್ದು ? ಹೀಗೆ ಕುಳಿತುಕೊಳ್ಳಿರಿ.

(ಸುಭದ್ರಾಬಾಯಿ-ಲಕ್ಷ್ಮಮ್ಮನವರು ಒಳಗೆ ಹೋಗುವರು. ಕರಿಯನು ಸೆಟ್ಟರಿಗಾಗಿ ಜೋಡು ಸರಿಪಡಿಸಿ ಇಡುತ್ತಾನೆ.)

ಭೀಮಣ್ಣ—ಮತ್ತೇನು ಸೆಟ್ಟರೆ ? ಏನು ಕಾರಣ ಬಂದಿದ್ದು ? ಬೇವನಹಳ್ಳಿಯಲ್ಲಿ ಎಲ್ಲವೂ ಕ್ಷೇಮವೇ ?

ಸೆಟ್ಟಿ—ನೀವಿದ್ದಲ್ಲಿ ಮಾತ್ರ ಕ್ಷೇಮ ನಾಯಕರೆ.

ಭೀಮಣ್ಣ—ಅಂದರೆ ? ಮತ್ತೇನು ಪ್ರಸಂಗ ಒದಗಿತು ?

ಸೆಟ್ಟಿ—ರಾಮಣ್ಣನವರಿಗೆ ಜಡ್ಡು ಬಲು ಜೋರಾಗಿದೆ. ನಿಮ್ಮನ್ನು ಕರೆತರಲು ಹೇಳಿದ್ದಾರೆ.

ಭೀಮಣ್ಣ—ಓಹೊ ! ನಡುವೆ ಗುಣವಾಗಿದ್ದು ಮತ್ತೆ ಈ ಮನೆಗೆ ಬಂದಿತೆ ?

ಸೆಟ್ಟಿ—ಡಾಕ್ಟರುಗಳೆಲ್ಲ, ಅವರು ಉಳಿಯುವದು ಯಾವ ಮಾತೊ ಎಂದು ನಿಟ್ಟುಸಿರು ಬಿಡುತ್ತಾರೆ.

ಭೀಮಣ್ಣ—ಹುಂ.

ಸೆಟ್ಟಿ—ಇದೇ ಹೊತ್ತಿನಲ್ಲಿ ಶ್ರೀಮಂತರ ಅನ್ಯಾಯವು ಶಿಖರವನ್ನು ಕಂಡಿದೆ. ಕೆಲವು ದಿನಗಳ ಹಿಂದೆ ಅವರು ನನ್ನನ್ನು ಕರೆಕಳಿಸಿದ್ದರ ವಿಷಯವು ತಮಗೆ ಗೊತ್ತಿರಬಹುದಲ್ಲ ?

ಭೀಮಣ್ಣ—ಹೂಂ. ಗೊತ್ತಿದೆ.

ಸೆಟ್ಟಿ—ರಾಮಣ್ಣನವರ ಹೇಳಿಕೆಯ ಮೇಲಿಂದ ನೀವು ಇಲ್ಲಿಗೆ ಬರಬಹುದೆಂದು ನಾವು ಒಪ್ಪಿಕೊಂಡೆವು. ಸದ್ಯಕ್ಕೆ ಶ್ರೀಮಂತರ ಕಾಟ ಊರಲ್ಲಿ ಹೆಚ್ಚಿದೆ.

ಭೀಮಣ್ಣ—ಹುಂ.

ಸೆಟ್ಟಿ—ಅದನ್ನು ಹಿಂದಿನಿಂದ ನೋಡಬಹುದು. ಈಗ ರಾಮಣ್ಣನವರನ್ನು ಕಾಣಲು . . . .

ಭೀಮಣ್ಣ—ಅವ್ವಾ ! ಏ ಅವ್ವಾ !

ಲಕ್ಷ್ಮಮ್ಮ—(ಬಂದು) ಯಾಕಪ್ಪ ಭೀಮು ? ಸೆಟ್ಟರು ಬಂದಿದ್ದಾರಲ್ಲ. ಮತ್ತೇನು ಅನಾಹುತ ?

ಭೀಮಣ್ಣ—ಏನೂ ಇಲ್ಲ, ಅವ್ವ. ರಾಮಣ್ಣನವರಿಗೆ ಮತ್ತೆ ಜಡ್ಡಾಗಿದೆಯಂತೆ. ಬೇವಿನಹಳ್ಳಿಗೆ ಹೋಗಿ ಅವರನ್ನು ಕಂಡುಬರುತ್ತೇನೆ.

ಲಕ್ಷ್ಮಮ್ಮ—ಅಯ್ಯ ! ಮತ್ತೆ ರಾಮಣ್ಣನವರಿಗೆ ಜಡ್ಡೆ ? ಸುಳ್ಳು ಬೇರೆ ಹೇಳುತ್ತಿಲ್ಲವಲ್ಲ ನೀವು ಸೆಟ್ಟರೆ ?

ಸೆಟ್ಟಿ—ಇಲ್ಲ, ತಾಯಿ. ಹಾಸಿಗೆ ಹಿಡಿದು ಮಲಗಿದ್ದಾರೆ. ಮಿತಿ ಮೀರಿ ಜ್ವರ. ಔಷಧೋಪಚಾರ ನಡೆದಿದೆ.

ಲಕ್ಷ್ಮಮ್ಮ—ಹೋಗಿ ಬಾರಪ್ಪಾ. ರಾಮಣ್ಣನವರನ್ನು ನೀನು ಉಪಚರಿಸದೆ ಮತ್ತಾರು ನೋಡಿಕೊಳ್ಳಬೇಕು. ಆದರೆ, ಇಲ್ಲಿ ನೋಡು ಭೀಮು, ಅವರನ್ನು ಕಂಡು ಜ್ವರವಾರಿದೊಡನೆ ಬೇಗ ಇತ್ತ ಬಾ. ಮತ್ತೆ ಅಲ್ಲಿಯ ಗೊಂದಲದಲ್ಲಿ ಸಿಕ್ಕಿಕೊಳ್ಳಬೇಡ. ಸೆಟ್ಟರೆ, ರಾಮಣ್ಣನವರ ಜ್ವರವು ಇಳಿದೊಡನೆ ನಮ್ಮ ಹುಡುಗನನ್ನು ತೀವ್ರ ಕಳಿಸಿಕೊಡಿರಿ.

ಭೀಮಣ್ಣ—ಬರುತ್ತೇನೆ, ಅವ್ವ. ಮನೆಯಲ್ಲಿ ಮಾತ್ರ ಎಲ್ಲವೂ ಜೋಕೆ. ಏ ಕರಿಯ !

ಕರಿಯ—ಬಂದೆ, ಧಣಿಯರೆ.

ಭೀಮಣ್ಣ—ನಾನು ಇಷ್ಟರಲ್ಲಿಯೇ ಬರುತ್ತೇನೆ. ಬರುವನಕ ಮನಿಯನ್ನು ಸುರಕ್ಷಿತವಾಗಿ ಕಾಯ್ದುಕೊಂಡಿರು. ನಿಮ್ಮ ಬೈಲಾಟದ ರಂಗತಾಲೀಮು ನಡೆಯಬಹುದಲ್ಲ ರಾತ್ರಿಯೆಲ್ಲ ? ಅದನ್ನು ನಮ್ಮ ಮನೆಯ ಹೊರಂಗಳದಲ್ಲಿಯೇ ಸಾಗಿಸಿರಿ. ಊರ ಪಂಚರಿಗೆ ಹೇಳು. ಹೋಗಿ ಬರತ್ತೇನೆ ಅವ್ವಾ.

(ನಮಸ್ಕರಿಸಿ ಹೊರಡುತ್ತಾನೆ. ಸೆಟ್ಟಿಯು ಅವನನ್ನು ಹಿಂಬಾಲಿಸುತ್ತಾನೆ.)

ಲಕ್ಷ್ಮಮ್ಮ—ಏ, ಕರಿಯ ! ಇದೇನು, ಬೇವಿನಹಳ್ಳಿಗೆ ಹೋಗಿಬರಬೇಕೆಂದು

ನಿಮ್ಮ ನಾಯಕರು ಹಾಕಿದ ಸೋಗೇನಿದು ಮತ್ತೆ ? ಆ ಸೆಟ್ಟಿಯೂ ಒಳ್ಳೇ ಹೊತ್ತಿಗೆ ಬಂದ.

ಕರಿಯ—ಇಲ್ಲ ಅಪ್ಪನವರೇ ! ರಾಮಣ್ಣನವರಿಗೆ ಜಡ್ಡು ಬಹಳ ಹೆಚ್ಚಾಗಿದೆ ಯಂತೆ. (ಕೆಳದನಿಯಲ್ಲಿ) ಆ ಕಾರಕೂನ ಸಣತಮ್ಮಪ್ಪನು ಅವರಿಗೆ ವಿಷ ಹಾಕಿಸಿದನೆಂದು ಜನರಾಡಿಕೊಳ್ಳುತ್ತಾರೆ.

ಲಕ್ಷ್ಮವ್ವ—ಆಂ ? ಇದೇನು ಹೇಳಿದಿ ? ನಮ್ಮ ರಾಮಣ್ಣನವರಿಗೆ ವಿಷವೆ ? ಮುತ್ತಿನಂಥ ಜೀವ ಅವರದು.

ಕರಿಯ—ಅನ್ಯಾಯವನ್ನು ಮಾಡಲೇಬೇಕೆಂದರೆ ಕಾರಣವು ಬೇಕಾಗುವುದಿಲ್ಲ, ಅಪ್ಪನವರೆ. ಬೇವಿನಹಳ್ಳಿಯಲ್ಲಿ ಈಗ ಸ್ಥಿತಿಯು ಈ ಮಟ್ಟಕ್ಕೆ ಮುಟ್ಟಿದೆ.

ಲಕ್ಷ್ಮವ್ವ—ಇದನ್ನೆಲ್ಲ ಮೊದಲೇ ಹೇಳಬಾರದಿತ್ತೇ, ಕರಿಯ ! ಈಗಾದರೂ ಏನಾಯಿತು. ಅಲ್ಲಿ ಯಾರ ಮನೆಯಲ್ಲಿಯೂ ಊಟ ಮಾಡಬೇಡ ವೆಂದು ಓಡಿ ಹೋಗಿ ಭೀಮೂನಿಗೆ ಹೇಳು. ಅಪ್ಪಿತಪ್ಪಿ ಮಾಡಿದ ನಾದರೆ ಸಿಪ್ಪಿವರಸಿಯಾಗಿ ಯಾಲಕ್ಕಿಯನ್ನು ತಿನ್ನಲಿ. ಊರನ್ನು ಬಿಟ್ಟು ಬಂದರೂ ಕರೆಯಲು ಬರುವವರು ಬೇರೆ ತಪ್ಪುವದಿಲ್ಲ.

ಸುಭದ್ರಾ—ಅದು ! ತಪ್ಪಬೇಕಾದರೆ ಇಲ್ಲಿಂದ ದೂರ-ಬಹು ದೂರ ಹೋಗ ಬೇಕು.

ಲಕ್ಷ್ಮವ್ವ—ಅಯ್ಯ ! ನೀನೂ ಇಲ್ಲಿ ಕೇಳುತ್ತ ನಿಂತಿದ್ದೀಯೇನೆ ? ನಡೆ ಒಳಗೆ. ಭೀಮೂನಿಗೆ ಏನಾಗುತ್ತದೆ ? ಸುರಕ್ಷಿತವಾಗಿ ತಿರುಗಿ ಬರುತ್ತಾನೆ.

(ಹೋಗುವರ.)

---

## ಪ್ರವೇಶ ೫

(ಕರಿಯಪ್ಪನೂ ರೇವಣ್ಣನೂ ಅಡವಿಯ ಒಂದು ಸೀಳುದಾರಿಯಲ್ಲಿ ಸಂಜೆಯ ಹೊತ್ತಿಗೆ ಬರುತ್ತಿರುತ್ತಾರೆ.)

ರೇವಣ್ಣ--ಹೂಂ, ನಡಿ, ಕರಿಯಪ್ಪ. ಹೋಗೋಣ, ಹೊತ್ತು ಮುಳುಗಿ ಹೋತು, ಊರು ಮುಟ್ಟಬೇಕು ಇನ್ನೂ.

ಕರಿಯ—ಒಂದಿಷ್ಟು ತಡಿ, ರೇವಣ್ಣ. ಈ ಅಡವಿ ಬಿಟ್ಟು ಹೋಗುವದೆಂದರೇನು ? ಬಾಯಿಯವರಿಗೆ ಕವಳಿ ಹಣ್ಣಿನ ಬಯಕೆಯಾಗಿತ್ತು. ಈಗ ನನ್ನ ಧೋತರದಲ್ಲಿ ತುಂಬಿನೆ ನೋಡು ! ನಿನಗಷ್ಟು ಕೊಡಲೇನು, ರೇವಣ್ಣ ?

ರೇವಣ್ಣ—ಬೇಡಪ್ಪಾ, ಬಾಯಿಯವರಿಗೆ ಬೇಕಾದರೆ ?

ಕರಿಯ—ಹಿಡಿ, ಅದಕ್ಕೇನು ! ಬೇಕಾದಷ್ಟಿವೆ. ನಿನ್ನ ಎತ್ತು ಎಲ್ಲಿ ಬಿಟ್ಟೆ ?

ರೇವಣ್ಣ—ಇವೇ, ಮಾವ ಹೊಡೆದುಕೊಂಡು ಹೋದ. ನಾನು ಕಬ್ಬಿನ ಹೊಲದ ಮೇಲೆ ಹಾಯ್ದು ಬಂದೆ.

ಕರಿಯ—ಹುಲುಸಾಗಿ ಬೆಳೆದಿದೆಯೇ ಕಬ್ಬು ?

ರೇವಣ್ಣ—ಬೆಳೆಯದೆ ಏನು ಕರಿಯಪ್ಪ ? ಇನ್ನೂ ಬಲಿತಿಲ್ಲ. ಬಲಿತ ಮೇಲೆ ನಿನಗೊಂದು ಸಿವುಡು ಕಳಿಸುತ್ತೇನೆ.

ಕರಿಯ—ನಾನೂ ಅದಕ್ಕೇ ಕೇಳಿದ್ದು ರೇವಣ್ಣ. ಬಾಯಿಯವರಿಗೆ ಒಯ್ದು ಮುಟ್ಟಿಸಬೇಕು ಅದನ್ನು.

ರೇವಣ್ಣ—ನಾಯಕರು ಬೇವಿನಹಳ್ಳಿಗೆ ಹೋಗಿರುವರಂತೆ, ಹೌದೆ ?

ಕರಿಯ—ಹೌದು, ರೇವಣ್ಣ. ಇಷ್ಟರಲ್ಲಿ ನಾನು ಮನೆಗೆ ಹೋಗಬೇಕಿತ್ತು. ಇಂದು ಬಯಲಾಟದ ರಂಗತಾಲೀಮು. ನಮ್ಮ ಮನೆಯ ಹೊರಂಗಳದಲ್ಲಿಯೇ ಹಾಕೋಣ,

ರೇವಣ್ಣ—ಆಗಲಿ, ಅದಕ್ಕೇನು. ಕಾರಭಾರಿಗಳಿಗೇನಾಗಿದೆಯಂತೆ, ಕರಿಯಪ್ಪ?

ಕರಿಯ—ಜೋರು ಜಡ್ಡಾಗಿದೆ, ತಮ್ಮ. ಏನಾಗಿದೆಯೆಂದರೆ ಏನು ಹೇಳಲಿ? ಅದು ಬೇವಿನಹಳ್ಳಿ. ವಿಷ ಹಾಕುವದೊಂದು ರೂಢಿಯಾಗಿದೆ ಅಲ್ಲಿ !

ರೇವಣ್ಣ—ವಿಷವೇ ?

ಕರಿಯ—ಹೂನಪ್ಪ ವಿಷ. ಯಾರು ಹಾಕಿದ್ದು, ಏಕೆ, ಇದೇನೂ ಕೇಳಬೇಡ.

ಬೇವಿನಹಳ್ಳಿಯಲ್ಲಿ ಈ ಪ್ರಶ್ನೆಗಳಿಗೆ ಉತ್ತರವೇ ಸಿಗುವದಿಲ್ಲ.

ರೇವಣ್ಣ—ಇನ್ನು ಗೌಡರಿಗೆ ಹೇಳುತ್ತೇನೆ ತಡಿ, ಒಂದು ದಿವಸವಾದರೂ ನಾಯಕರನ್ನು ಇಲ್ಲಿಂದ ಹೊರಗೆ ಬಿಡಬಾರದೆಂದು.

ಕರಿಯ—ನಾವು ಹೇಳಲಿಲ್ಲವೇ, ರೇವಣ್ಣ. ಅವ್ವನವರು ಎಷ್ಟು ತಿಳಿಸಿ ಹೇಳಿದರೂ ಧಣಿಯರು ಕೇಳುವುದಿಲ್ಲ. ಪ್ರಸಂಗವೇ ಹಾಗೆ ಬಂತು. ಏನು ಮಾಡಬೇಕು ?

ರೇವಣ್ಣ—ಬಿಡೋ ನಿನ, ಎಲ್ಲಿಯ ಪ್ರಸಂಗ ! ಊರ ಪಂಚರಿಗೆಲ್ಲ ತಿಳಿಸುತ್ತೇನೆ. ಅವರು ಬಾಗಿಲಲ್ಲಿ ಬಂದು ನಿಂತು ಅಂಗಲಾಚಿ ಬೇಡಿಕೊಂಡರೆ ಒಲ್ಲೆನ್ನುವರೆ ನಾಯಕರು ? ತಿರುಗಿ ಅವರು ಬರುವುದು ಯಾವಾಗ ? ನಮ್ಮ ಆಟದ ಹೊತ್ತಿಗೆ ಬರದಿದ್ದರೆ ಸೀತಾದೇವಿಯಿಲ್ಲದೆ ನೀನು ಆಟ ಹೂಡಬೇಕಾದೀತು ನೋಡು !

ಕರಿಯ—ಅದು ಯಾಕೆ ರೇವಣ್ಣ ?

ರೇವಣ್ಣ—ನಾನು ವೇಷ ಹಾಕುವದೇ ಇಲ್ಲ. ಅವರೇ ನೋಡದಿದ್ದರೆ ನಾನು ವೇಷ ಹಾಕಿಯಾದರೂ ಏನು ಫಲ ?

ಕರಿಯ—ಬಿಡೋ ನಿನ ! ಅವರು ನಾಳಿಗೇ ಬರುತ್ತಾರೆ.

ರೇವಣ್ಣ—ಹೂಂ ! ಮತ್ತ ನಾನಂದಿದ್ದೂ ಅದೇ. ಅಲ್ಲೋ ಕರಿಯಪ್ಪಾ, ಆಟದಲ್ಲಿ ಕೂಡಿಸಲಿಕ್ಕೆ ನೀನೊಂದು ಹೊಸ ಪದ ಮಾಡೀಯಂತಲ್ಲ ? ಹೇಳು ನೋಡೋಣು ?

ಕರಿಯ—ಆ ಪದವೇ ನೀನು ಹೇಳುವದು ? ಅದು ಇರುವದು ಒಂದು ಚುಟ್ಕ. ಇಲ್ಲಿಯ ಕವಳಿ ಹಣ್ಣಿನ ರುಚಿಗೆ ಹುಟ್ಟಿದ ಹಾಡು !

ಕಣ್ಣು ಕವಳೀ ಹಣ್ಣು, ಇಲ್ಲಿ ನೇರಲ ಹಣ್ಣು
ಮೈಬಣ್ಣ ನಿಂಬೆ ಹಣ್ಣು !
ಈ ನಿನ್ನ ಮೈಬಣ್ಣ ಮಾಡೈತಿ ಏ ! ಹೆಣ್ಣ !
ನನ್ನನ್ನ ಹಣ್ಣು ಹಣ್ಣು ! ॥ ೧ ॥

ಮೂಗು ಸಂಪಿಗೆ ತೆನೆಯು ಹೆರಳು ಬಾಳೀ ಗೊನೆಯು,
ಕಾಲೈತಿ ಕದಳಿ ಕಂಬ,
ಬರಿತ ದಾಳಿಂಬರಿಯು ತುಂಬುಲ್ಲಲ್ಲಿನ ಪರಿಯು
ಹೆಸರೇನು ಹೇಳ, ರಂಭಾ ! ॥ ೨ ॥

ತುಟಿಯು ತೊಂಡೀ ಹಣ್ಣು, ರುಚಿಯು ಮಾವಿನ ಹಣ್ಣು,
ಕರಿಕಬ್ಬು ನಿನ್ನ ಹುಬ್ಬು!
ಹಣ್ಣು-ಹೂ-ಕಾಯೆಲ್ಲ ಕೂಡಿ ಹೆಣ್ಣಾಗೈತಿ,-
ಕಂಡು ಬರುತೈತಿ ಮಬ್ಬು। ॥ ೩ ॥

ಬೆರಳು ಬೆಂಡೀಕಾಯಿ ತಲೆಯು ತೆಂಗಿನಕಾಯಿ
ತೆಂಗು ಮೊಳಕಾಲ ಪರಟಿ!
ಯಾರ ಹಂಗೇನಿಲ್ಲ. ಹ್ಯಾಂಗಿತ್ತು ಹಾಂಗ್ಹೇಳ್ದೆ!
ಏ! ಹೆಣ್ಣ! ಎಲ್ಲಿ ಹೊರಟಿ! ॥ ೪ ॥

ರೇವಣ್ಣ—ಅಂತೂ ಇಂಚಲಾಪುರಕ್ಕೆ ಬಂದು ಹೆಣ್ಣಿನ ಪದ ಕಟ್ಟಲಿಕ್ಕೆ ಕಲಿತೆಪಾ! ಅಂಥ ಚೆಲುವು ಹೆಣ್ಣು ಯಾವುದಪಾ ನಮ್ಮೂರಾಗ, ನಿನ್ನ ಕಣ್ಣಿಗೆ ಬಿದ್ದಿದ್ದು?

ಕರಿಯ—ಇಲ್ಲ ಬಿಡೋ, ನಿನ! ಈ ಊರಾಗಿನ ಹೆಣ್ಣಿನ ಪದ ಇದು. ಹೆಣ್ಣಿನ ದಲ್ಲ.

ರೇವಣ್ಣ—ಅಲ್ಲ, ತಗಿ. ಅದು ಯಾಕಾದೀತು? ಇನ್ನೆರಡು ದಿವಸದಲ್ಲಿ ಪತ್ತೆ ಹಚ್ಚಿ ಬಿಡಬೇಕು?

ಕರಿಯ—ಹೆಣ್ಣಿನಮೇಲಿನದೇ ಇದ್ದರೆ, ಪತ್ತೆ ಹಚ್ಚಲು ಪ್ರಯತ್ನಿಸುವವರ ಮೇಲಿನ ಪದ ಇದು. ತಿಳಿತೇನು ರೇವಣ್ಣ?

ರೇವಣ್ಣ—ಸಾಕು ಬಿಡು ನಿನ್ನ ನಗೆಮಾತು. ಅಲ್ಲೋ, ಕರಿಯಪ್ಪಾ, ಆಟ ದಾಗ ಇದನ್ನ ಎಲ್ಲಿ ಕೂಡಿಸಬೇಕು?

ಕರಿಯ—ನೀನೇ ಹೇಳು ನೋಡೋಣ!

ರೇವಣ್ಣ—ಬಲು ಸೊಗಸಾಗಿದೆ, ಪದ. ರಾವಣ ಸೀತಾದೇವಿ ವಿಷಯಕ್ಕ ಅನ್ನಬೇಕು ನೋಡು ಇದನ್ನ. ಇಲ್ಲದಿದ್ದರ ನಾನು ಸೀತಾದೇವಿ ಆಗೋದೇ ಇಲ್ಲ.

ಕರಿಯ....ಭಪ್ಪರೆ! ಒಳ್ಳೆ ಹುಡುಗ! ಈ ರೀತಿ ಕೂಡಿಸಲಿಕ್ಕೆ ಸುರುವಾದರ ಬಯಲಾಟ ಬಡದಾಟಾದೀತು. ನಡಿ!

(ಹೋಗುವರು.)

---

## ಪ್ರವೇಶ ೬

(ಮಧ್ಯರಾತ್ರಿ. ಮನೆಯ ಬಾಗಿಲಿನ ಮುಂದಿನ ಕಟ್ಟೆಯ ಮೇಲೆ ಕರಿಯನು ಮಲಗಿಕೊಂಡಿದ್ದಾನೆ.)

ಕರಿಯ—ಝಣತೋಂ ತಕ, ಝಣತ್ಕೈ ತಕ, ಝಣತದಿನ !
ಝಣತೋಂ ತಕ, ಝಣತ್ಕೈ ತಕ, ಝಣತದಿನ !
ಏ ! ಸಾರಥಿ !.... ಹಾ ! ಏ ! ಸಾರಥಿ. . .ಹಾ !

ಲಕ್ಷ್ಮಮ್ಮ—(ಒಳಗಿನಿಂದ) ಯಾಕೊ, ಏ ಕರಿಯ! ಏಕೆ ಹಗಲು ರಾತ್ರಿ ಒದರಾಡಿ ನಮ್ಮನ್ನು ನಿದ್ದೆಗೆಡಿಸುತ್ತಿ? ಊರಿಂದ ಬಂದ ಮೇಲೆ ನಾಯಕರಿಗೆ ಹೇಳಿದರೆ ಅವಸ್ಥೆ ನೆಟ್ಟಗಾಗಲಿಕ್ಕಿಲ್ಲ ನೋಡು ! ರಾತ್ರಿಯೆಲ್ಲ ಎಚ್ಚರಿಕೆಯಿರಂದರೆ ಹೀಗೆ ಒದರಾಡುತ್ತ ಕೂಡಬೇಕೆ ? ಅಯ್ಯ, ಓ ಕೂಡ ಕೂಡಬಾರದೆ ? ಕರಿಯ, ಏ ಕರಿಯ !

ಕರಿಯ—(ಗಡಿಬಿಡಿಸಿ ಎದ್ದು) ಯಾಕೆ, ತಾಯಿ! ಏನಾಯಿತು ? ಯಾರು ಬಂದರು ?

ಲಕ್ಷ್ಮಮ್ಮ—ಏನಾಗಿಲ್ಲ, ನಮ್ಮಪ್ಪ. ನೀನೇ ಹತ್ತುಮಂದಿಗಿಂತ ಹೆಚ್ಚಾಗಿ ಒದರಾಡುತ್ತಿ. ಏನು ಕನಸಿನಲ್ಲಿ ಬಡಬಡಿಸಿದೆಯೊ ?

ಕರಿಯ—ಇಲ್ಲ, ತಾಯಿ, ಈಗ ಜಂಪು ಹತ್ತಿತ್ತು. ಮತ್ತೆ ಎಚ್ಚರಾಗಿದೆ. ಈಗ.

ಲಕ್ಷ್ಮಮ್ಮ—ಎಚ್ಚರಗೊಳಿಸಿದಾಗ ಎಚ್ಚರ ನಿನಗೆ. ಇದೇ ಏನು ಮನೆ ಕಾಯುವ ರೀತಿ ? ಈಗಿನ ಹುಡುಗರಿಗೆ ಎಷ್ಟು ನಿದ್ದೆಯೇ ನಮ್ಮವ್ವ ! ಕೊಡುವ ಪುರಸತ್ತಿಲ್ಲ, ನೆಲಕ್ಕೇ ಉರುಳುತ್ತಾರೆ, ಆ ಭಗವಂತರಾಟದೊಳಗಿನ ಮಾತುಗಳು ಬೇರೆ! ಆ ವೇಷ ಬೇಡ, ಆ ಭಾಷೆ ಬೇಡ, ಎಂದು ಹೇಳಲಿಲ್ಲವೆ ನಾ ನಿನಗೆ? ಮತ್ತೆ ರಾವಣನಾಗಿದ್ದಾನೆ ನಮ್ಮಪ್ಪ ಚಂದಕ್ಕೆ, ರಾವಣ! ಹತ್ತು ದಿಕ್ಕಿಗೆ ಹತ್ತು ಮೋರೆ ಮಾಡಿ ನೀನು ಕಿಲಿಬಿಲಿ ಹಚ್ಚಿದೆಂದರೆ ನೋಡು ಎಚ್ಚರವಾಗಿರು.

ಕರಿಯ—(ಎದ್ದು ಕುಳಿತು ಗೊಂಗಡಿ ಜಾಡಿಸುತ್ತ) ಇಷ್ಟರಲ್ಲಿ ಧಣಿಯರು ತಿರುಗಿ ಬಂದರೆ ಪಾಡಿತ್ತು. ಮನೆಯ ವಿಷಯಕ್ಕೆ ನಿಶ್ಚಿಂತನಾಗಿರುತ್ತಿದ್ದೆ, ಇರಲಿ. ಇದೊಂದು ಒಳ್ಳೆಯದೇ ಆಯಿತು. ಆಟವಾಡುವ ದಿನ ಸಮೀಪಕ್ಕೆ ಬಂತು. ರಾತ್ರಿಯೆಲ್ಲ ಕುಳಿತು ಮಾತು ಗಟ್ಟಿಮಾಡುತ್ತೇನೆ.

ಹಲ, ಹಲಲಲ ! (ಎಂದು ಹಾರಿ ನಿಲ್ಲುತ್ತಾನೆ.) ಏನಿದು ? ರಾಮನು ಎದುರಿಗೆ ಬಂದಾಗ ಏನೆನ್ನಬೇಕು ? 'ಏ ! ಹೇಡಿ ! ಹುಚ್ಚು ಖೋಡಿ! ನಾನಿದ್ದೇನೆ ರಾವಣ, ಹೃದಯವಿಧ್ರಾವಣ ! ಯುದ್ಧಕ್ಕೆ ಸಿದ್ಧನಾಗುವಂಥವನಾಗು ! ಹಲ ! ಹಲಲ ! (ಕುಣಿಯುತ್ತಾನೆ) ಏ ! ಸಾರಥಿ ನನ್ನ ಮನೋರಥವನ್ನು ಅಲ್ಲ, ಮಹಾರಥವನ್ನು ಶೀಘ್ರವಾಗಿ ಮುಂದಕ್ಕೆ ಒಯ್ಯುವಂಥವನಾಗು. ಇಲ್ಲದಿದ್ದರೆ ನಾನು ಒಯ್ಯುವಂಥವನಾಗುತ್ತೇನೆ. ಏ, ದಶರಥಸೂನು, ಮಾಡೇನು ನಿನ್ನ ಖೂನು. ನೀನು ಅಗ್ನ್ಯಾಸ್ತ್ರವನ್ನು ಬಿಟ್ಟರೆ ನಾನು ವರುಣಾಸ್ತ್ರವನ್ನು ಬಿಡುತ್ತೇನೆ. ನೀನು ನಾರಾಯಣಾಸ್ತ್ರವನ್ನು ಬಿಟ್ಟರೆ ನಾನು ಪಲಾಯನಾಸ್ತ್ರವನ್ನು ಬಿಡುತ್ತೇನೆ ಏ, ಹೇಡಿ, ಹುಚ್ಚು ಖೋಡಿ !' ಎಲ, ಕತ್ತಲೆಯಲ್ಲಿ ಅದೇನೋ ಸರಿಯುವದು ? ಡಾವಣಗಿರಿಯ ಕಂಬಳಿಯಂತೆ ಸರಿದಾಡುತ್ತಿದೆಯಲ್ಲ ? ಏನು ರಾಮನೇ ಬಂದನೊ? ಹಲ ! ಹಲಲ ! ಯುದ್ಧಕ್ಕೆ ಸಿದ್ಧನಾಗುವಂಥವನಾಗು !

(ದರದರ ಹಿಡಿದು ಗಂಗಜ್ಜನನ್ನು ಎಳೆದುಕೊಂಡು ಬರುತ್ತಾನೆ.)

ಗಂಗಜ್ಜ—ನಾನು ರಾಮನಲ್ಲೋ, ಕರಿಯ ! ನನ್ನನ್ನು ಹೊಡೆಯಬೇಡ. ಬಿಟ್ಟು ಬಿಡು.

ಕರಿಯ—ಎಲ, ಗಂಗಜ್ಜನೇನು ? ಈಗೇಕೆ ಬಂದಿದ್ದು, ಗಂಗಜ್ಜ ?

ಗಂಗಜ್ಜ—ಕರಿಯ, ಕಠಿಣ ಹೊತ್ತು ಬಂದಿದೆ. ನಾನು ಇಲ್ಲಿಗೆ ಬಂದದ್ದು ಯಾರಿಗೂ ಗೊತ್ತಾಗಬಾರದು.

ಕರಿಯ—ಅಂಥದೇನು, ಗಂಗಜ್ಜ ?

ಗಂಗಜ್ಜ—ಕೆಳದನಿಯಲ್ಲಿ ಮಾತನಾಡು. ಇಬ್ಬರ ಗುಟ್ಟು ಹೊರಬಿದ್ದೀತು. ಆ ನೀಚ ಸಣತಮ್ಮ ಇಂದು ರಾತ್ರಿ ನಾಲ್ಕು ಆಳುಗಳನ್ನು ಕಳಿಸಿದ್ದಾನೆ. ಇಷ್ಟರಲ್ಲಿ ಅವರು ಇಲ್ಲಿ ಬರಬಹುದು.

ಕರಿಯ—ಅದೇತಕ್ಕೆ ಗಂಗಜ್ಜ ?

ಗಂಗಜ್ಜ—ಹೇಳುವದಕ್ಕೆ ಎದೆ ಬಿಗಿದು ಬರುತ್ತದೆ. ಬಾಯಿಯವರನ್ನು ಹಿಡಿದುಕೊಂಡು ಹೋಗಲಿಕ್ಕೆ. ಹೊಲಿಯೆಬ್ಬಿಸು. ಒದರು. ಮನೆಯಲ್ಲಿ ಹುಶಾರಾಗಿರೆಂದು ಹೇಳು. ಬಂದವರನ್ನು ಹೆಡಮುರಿಗೆ ಬಿಗಿಯಿರಿ.

ಹಾಗೆಯೆ ಮೇಲಿನ ಸರಕಾರಕ್ಕೆ ಸಾಗಿಸಿರಿ. ಇನ್ನು ನಾನು ಹೋಗುತ್ತೇನೆ. ಈ ಸಣತನ್ನುನನ್ನು . . (ಮುಷ್ಟಿಯನ್ನು ಅಲ್ಲಾಡಿಸುತ್ತಾನೆ)

ಕರಿಯ—ಇದೇನು, ಗಂಗಜ್ಜ ! ಅಲ್ಲ, ನಿನ್ನದೇನಾಯಿತು ಮತ್ತೆ ?

ಗಂಗಜ್ಜ—ನನ್ನದೇನು ನನ್ನದು ? ನನ್ನದು ಮಣ್ಣುಗೂಡಿ ಹೋಯಿತು, ಕರಿಯ. ನನ್ನ ಬಾಳುವೆಯೆಲ್ಲ ಬಕ್ಕಬರಲಾಯಿತು. ನನ್ನ ಸಂಸಾರದಲ್ಲಿ ವಿಷವನ್ನು ಕೂಡಿಸಿದ ಈ ಸಣತನ್ಮ. ನನ್ನ ಮಲ್ಲಪ್ಪನನ್ನು ಸೂರಿ ಮಾಡಿಬಿಟ್ಟ !

ಕರಿಯ—ಇಂಥ ನೀಚರನ್ನು ನಿಲ್ಲಿಸಿ ಸುಟ್ಟರೂ ಸಿಟ್ಟುಹೋಗದು.

ಗಂಗಜ್ಜ—ನಾನು ಉಳಿದಿರುವದು ಎದಕ್ಕಾಗಿ ಮತ್ತೆ ? ಸೇಡು, ಸೇಡು, ಎಂದು ಮೈಯೆಲ್ಲ ಜಗ್ಗುತ್ತಿದೆ. ಇಕಾ, ಇಲ್ಲಿ ನೋಡು ! ಈ ಕಿರುಗತ್ತಿಯಿಂದ ಅವನ ಕುತ್ತಿಗೆ ಕೊಯ್ದು ರಕ್ತವನ್ನು ಮುಗಿಲುದ್ದ ಚಿಮ್ಮಿಸದಿದ್ದರೆ . . . . . ಹೋಗಿಬರುತ್ತೇನೆ ಕರಿಯ !

ಕರಿಯ—ಈಗ ನೀನಿರುವದೆಲ್ಲಿ, ಗಂಗಜ್ಜ ? ಮತ್ತೆ ಯಾವಾಗ ಭೆಟ್ಟಿ ?

ಗಂಗಜ್ಜ—ಇರುವದು ಸುಡುಗಾಡಿನಲ್ಲಿ. ಭೆಟ್ಟಿ ನನ್ನ ಮನಸ್ಸಿಗೆ ಬಂದಾಗ. ಹೊಲಿಯೆಬ್ಬಿಸು. ಒದರು, ತಡವಾದೀತು ! (ಹೋಗುತ್ತಾನೆ.)

ಕರಿಯ—ಇದೇನು ಗೊಂದಲವೆಬ್ಬಿಸಿ ಹೋದನು ಇವನು ? ಈ ಸುದ್ದಿ ನಿಜವಿರಬಹುದೆ ? ಇಲ್ಲದಿದ್ದರೆ ಇಲ್ಲಿಯ ವರೆಗೆ ತೇಂಕುತ್ತ, ಓಡುತ್ತ ಏಕೆ ಬರುತ್ತಿದ್ದ ? ನಿಜವಿರದಿದ್ದರೆ ಗುಣವಾಯಿತು. ಇದ್ದರೆ—ಹೊಂ ! ಒದರು, ಅಪ್ಪನವರೆ ! ಅಪ್ಪನವರೆ !

ಲಕ್ಷ್ಮವ್ವ—(ಒಳಗಿನಿಂದ) ಮತ್ತೇಕೊ, ಕರಿಯ. ಇವನ ಒದರಾಟಕ್ಕೆ ನಮಗೆ ನಿದ್ದೆಗೇಡು. ನಾಯಕರು ಬಂದ ಮೇಲೆ ಅವಷ್ಟೆ ನೆಟ್ಟಗಾಗುವದಿಲ್ಲ ನೋಡು. ಆ ಭಗವಂತರಾಟವನ್ನು ಸೇರಬೇಡೆಂದು ಹೇಳಲಿಲ್ಲವೆ ನಿನಗೆ?

ಕರಿಯ—ಇಲ್ಲ, ಎಚ್ಚರಿದ್ದೇನೆ, ತಾಯಿ! ಘಾತವಾಯಿತು. ಕಳ್ಳರು ಬರುವರು. ಎದ್ದೇಳಿರಿ, ಅವ್ವಾ !

ಲಕ್ಷ್ಮವ್ವ—ಅಯ್ಯೋ, ಕಳ್ಳರು ! ಭೀಮು, ಭೀಮು, ಭೀಮು ಮನೆಯಲಿಲ್ಲ ! ಏ ಸುಭದ್ರಾ ! ಏಳು. ಕಳ್ಳರು ! ಕಳ್ಳರು !

ಕರಿಯ—ಗಾಬರಿಯಾಗಬೇಡಿರಿ, ತಾಯಿ. ನೀವು ಸುಮ್ಮನೆ ಒಳಗೆ ಕುಳಿತು

ಕೊಳ್ಳಿರಿ. ನಾನು ಗೌಡರನ್ನು ಎಬ್ಬಿಸುತ್ತೇನೆ. ಊರೆಲ್ಲ ನಮ್ಮ ಬೆನ್ನು ಕಟ್ಟುವದು. ನೀವು ಸಮ್ಮನಾಗಿರಿ. (ಮೂರು ಸಲ ಸಿಳ್ಳು ಹಾಕಲು ಗೊಂಗಡಿ ಹೊತ್ತ ಹುಡುಗನು ಬರುವನು.) ಹೋಗು, ಏ, ರೇವಣ್ಣ, ಗೌಡರನ್ನು ಎಬ್ಬಿಸು. ಅವರ ಆಳುಮಕ್ಕಳನ್ನು ಕರೆದುಕೊಂಡು ಬಾ. ಸದ್ದು ಮಾಡಬೇಡ. ಕೆಲಸ ಕೆಟ್ಟು ಹೋದೀತು !

ಲಕ್ಷ್ಮಮ್ಮ—ಕಳ್ಳರು, ಕಳ್ಳರು ! ಭೀಮು, ಏ, ಭೀಮು !

ಕರಿಯ—ಸುಮ್ಮನಿರ್ರಿ, ತಾಯಿ. ಈಗ ಒಂದು ಕ್ಷಣದಲ್ಲಿ ನಮ್ಮ ಹಿಂಡು ಬರುವದು, ನೋಡಿರಿ. ಏ ರೇವಣ್ಣ, ಬೇಗ ಕರೆದುಕೊಂಡು ಬಾ.

(ತೆರೆಯು ಬೀಳುವದು.)

---

## ಅಂಕ ೩

### ಪ್ರವೇಶ ೧

(ರಾಮಣ್ಣನವರ ಮನೆ. ರಾಮಣ್ಣನವರು ಮಂಚದ ಮೇಲೆ ಮಲಗಿದ್ದಾರೆ. ದೇಸಾಯರೂ ಸಣತಮ್ಮನೂ ಬಂದು ಕುಳಿತಿದ್ದಾರೆ.)

ರಾಮಣ್ಣ— (ಕ್ಷೀಣರಾಗಿ) ಹೇಳಿದೆನಲ್ಲ, ಶ್ರೀಮಂತರೆ! ನನಗೀಗ ಮಾತನಾಡಲು ತ್ರಾಣವಿಲ್ಲ. ಅಂತೂ ಬಡವನ ಮನೆಗೆ-ಅವನೇ ಮನೆಯನ್ನು ಬಿಡುವುದಕ್ಕಿಂತ ಮುಂಚೆ, ಒಮ್ಮೆ ಬಂದಿರಿ. ಒಳಿತಾಯಿತು. ಇದಕ್ಕೂ ಹೆಚ್ಚು ನಾನೇನು ಆಡಬಲ್ಲೆ?

ಸಣತಮ್ಮ—ಹಾಗೆಂದರೇನು, ರಾಮಣ್ಣನವರೆ? ತಾವು ಇನ್ನೂ ದೀರ್ಘಾಯುಷಿಗಳಾಗಬೇಕು, ಶ್ರೀಮಂತರು ಇನ್ನೂ ಚಿಕ್ಕವರು. ನಿಮ್ಮ ಅನುಭವದ ಲಾಭವನ್ನು ಅವರಿಗೆ ಕೊಡಬೇಕು ನೀವು.

ರಾಮಣ್ಣ—ಕೊಟ್ಟಿದ್ದೇವೆ, ಕಾರಕೂನರೆ. ಮೇಲಾಗಿ ನೀವಿದ್ದೀರಲ್ಲ? ಹೊಸನೆತ್ತರದ ತರುಣರು ನೀವು. ರಾಜ್ಯಭಾರವನ್ನು ಹೊರಲು ಸಿದ್ಧರಾಗಿದ್ದೀರಿ. ಇನ್ನು ಮುದುಕರಾದ ನಮಗೆ ಅಪ್ಪಣೆ ಕೊಟ್ಟುಬಿಡಿರಿ.

ದೇಸಾಯಿ—ನನಗೇನು ಹೇಳುವಿರಿ, ರಾಮಣ್ಣನವರೆ?

ರಾಮಣ್ಣ—ತಮಗೇನು ಹೇಳಲಿ ನಾನು, ಶ್ರೀಮಂತರೆ. ಆದರೂ ಮತ್ತೊಮ್ಮೆ ಬೇಡಿಕೊಳ್ಳುತ್ತೇನೆ: ಇಲ್ಲಿಯವರೆಗಿನ ಅನ್ಯಾಯಕ್ರಮವನ್ನು ನೀವು ಇನ್ನಾದರೂ ಬಿಡಬೇಕು. ಲಕ್ಕಣ್ಣೊಡೆಯರ ಕೀರ್ತಿಯನ್ನು ನೆನಿಸಬೇಕು. ಒಡೆಯರ ಸನ್ನಿಧಾನಕ್ಕೆ ಈಗ ನಾನು ಹೋಗುತ್ತಿದ್ದೇನೆ. ಅವರಿಗೆ ಏನೆಂದು ಹೇಳಲಿ?

ಸಣತಮ್ಮ—ಇಲ್ಲಿ ಎಲ್ಲರೂ ನೆಟ್ಟಗಿರುವರೆಂದು ತಿಳಿಸಿರಿ.

ದೇಸಾಯಿ—ಒಳ್ಳೇದು ಹಾಗಾದರೆ, ಹೊತ್ತಾಯಿತು. ಇನ್ನು ಹೋಗಿ ಬರುತ್ತೇನೆ ರಾಮಣ್ಣನವರೆ. ನಾಳೆ ಮುಂಜಾವಿನಲ್ಲಿ ಮತ್ತೆ ಭೆಟ್ಟಿಯಾಗುತ್ತೇನೆ.

ರಾಮಣ್ಣ—(ನಕ್ಕು) ಆಗ ಇನ್ನೂ ನಾನು ಇಲ್ಲಿದ್ದರೆ, ಆಗಬಹುದು!

(ಭೀಮಣ್ಣನಾಯಕ, ಸಿದರಾಮುಸೆಟ್ಟರು ಬರುತ್ತಾರೆ ' ರಾಮಣ್ಣಾ ! ರಾಮಣ್ಣಾ ! '—ಎಂದು ಒದರುತ್ತ)

ಭೀಮಣ್ಣ—ಓಹೋ. ಶ್ರೀಮಂತರು ! ನಮಸ್ಕಾರ.

ದೇಸಾಯಿ—(ಹೋಗುತ್ತಾ, ಸಿಟ್ಟಿನಿಂದ) ನಮಸ್ಕಾರ !

ಸಣತಮ್ಮ—ನಮಸ್ಕಾರ, ನಾಯಕರೇ ! ನಮಸ್ಕಾರ, ಸೆಟ್ಟರೇ ! ಎಲ್ಲ ಕ್ಷೇಮವೇ ?

ಭೀಮಣ್ಣ<br>ಸೆಟ್ಟಿ } ನಮಸ್ಕಾರ, ಎಲ್ಲ ಕ್ಷೇಮ. (ಮುಂದೆ ಬಂದು) ಹೂಂ, ಹೇಗಿದೆ ರಾಮಣ್ಣ, ಈಗ ನಿಮ್ಮ ಪ್ರಕೃತಿ ?

ರಾಮಣ್ಣ—ಇತ್ತ ಬಾ, ಭೀಮು. ಇದೇ ನಮ್ಮ ನಿಮ್ಮ ಕೊನೆಯ ಭೆಟ್ಟಿ.

ಭೀಮಣ್ಣ—ಹೀಗೇಕೆ ಅಮಂಗಲವನ್ನು ನುಡಿಯುವಿರಿ ? (ಅಳುವನು)

ರಾಮಣ್ಣ—ಹೀಗೆ ಬಾ, ಭೀಮು ! ನಿನ್ನಂಥ ತಜ್ಞನೂ ಕಣ್ಣೀರು ಸುರಿಸಬೇಕೆ ? ಆಗು-ಹೋಗುವದನ್ನೆಲ್ಲ ನೋಡುತ್ತ ಬಾಳಬೇಕು. ಸಾಕ್ಷಿಯಾಗಿ ಇರಬೇಕು, ಇಷ್ಟೆ.

ಸೆಟ್ಟಿ—ನೀವು ತಿಳಿದವರು, ರಾಮಣ್ಣನವರೇ. ಇದೆಲ್ಲ ನಮಗೆ ತಿಳಿಯದು. ಇಂಥ ಅಮಂಗಲವನ್ನೇಕೆ ನುಡಿಯುವಿರಿ ?

ಭೀಮಣ್ಣ—ಈ ಸ್ಥಿತಿಗೆ ನಿಮ್ಮ ಪ್ರಕೃತಿ ಆಕಸ್ಮಾತ್ತಾಗಿ ಬಂದದ್ದು ಹೇಗೆ, ರಾಮಣ್ಣ ?

ರಾಮಣ್ಣ—ಮಿಂಚಿ ಹೋದ ಮಾತದು. ಯಾರೋ ನೀಚರು ನನ್ನ ಅನ್ನಕ್ಕೇ ಚಕ್ರವನ್ನು ತಂದರು. ಅವರು ಹಾಕಿದ ವಿಷವು ಈ ಹೊಟ್ಟೆಯನ್ನೆಲ್ಲ ವ್ಯಾಪಿಸಿದೆ, ನನ್ನ ದೈವದಲ್ಲಿ ಬರೆದಿದ್ದರೆ ಯಾರೇನು ಮಾಡುವದು ?

ಭೀಮಣ್ಣ—ಅಂಥ ನೀಚರು ಯಾರು, ರಾಮಣ್ಣ ? ವಿಷಮಯವಾದ ಈ ಜೀವನದಲ್ಲಿ ಮತ್ತೆ ವಿಷವನ್ನು ಬೆರಿಸುವವರೂ ಉಂಟೆ ?

ರಾಮಣ್ಣ—ಆ ನೀಚರು ಯಾರೆಂಬುದನ್ನು ಈಗ ನಿರ್ಣಯಿಸಿ ಮಾಡುವದೇನು ? ಮನಸ್ಸಿಗೆ ಅನಾವಶ್ಯಕವಾಗಿ ವೇದನೆಯಾಗಬಹುದು. ನನಗೆ ಆಯುಷ್ಯವಿರುವದು ಇನ್ನೊಂದು ಅರ್ಧ ತಾಸು. ನನಗೆ

ಕೆಲವು ಮಾತುಗಳನ್ನು ಹೇಳುವದಿದೆ, ಭೀಮು. ಸೆಟ್ಟರೇ, ನೀವೂ ಲಕ್ಷ್ಯಗೊಡಬೇಕು.

ಭೀಮಣ್ಣ } ಹಿರಿಯರ ಮಾತಿಗೆ ಕಿವಿ ಸೋತು ನಿಂತಿದ್ದೇವೆ.
ಸೆಟ್ಟ }

ರಾಮಣ್ಣ—ಅದೋ ಅಲ್ಲಿ ನೋಡಿರಿ! ಮುಗಿಲಿನಿಂದ ಅಗಲಿ ಬಂದು ನಿಧಾನವಾಗಿ ಬೀಳುತ್ತಿರುವ ಚಿಕ್ಕೆಯು ಅಲ್ಲಿಯ ಒಂದು ಸ್ಥಾನವು ಬರಿದಾಯಿತೆಂದು ಸೂಚಿಸುತ್ತಿದೆ. ಅನಂತಕಾಲ, ಅನಂತ ದೇಶಗಳ ತೆರೆಯೆದ್ದ ಹೊತ್ತಿನಲ್ಲಿ ನಾನು ನನ್ನ ಮನೆಯ ವಿಚಾರ ಮಾಡಬಾರದು. ಆದರೂ, ಭೀಮು, ಬಡವರ ಬಾಳು ನನಗೆ ಸ್ವರ್ಗಕ್ಕಿಂತ ಅಧಿಕವಾಗಿ ತೋರುತ್ತಿದೆ. ಇದೋ, ನನ್ನ ಮೃತ್ಯುಪತ್ರ. (ಹಾಸಿಗೆಯ ಬುಡದಿಂದ ತೆಗೆಯುತ್ತಾನೆ.) ನೀನೂ ಸೆಟ್ಟರೂ ಇದರ ನೇತೃಗಳು. ನನ್ನ ಮನೆಯು ದಿಕ್ಕಿಲ್ಲದವರಿಗೆ ಮನಿಯಾಗಿರಲಿ. ನನ್ನಲ್ಲಿ ಇದ್ದು-ಬಿದ್ದ ಸಂಪತ್ತು ವಿಪದ್ಗ್ರಸ್ತರಿಗೆ ಆಪದ್ಧನವಾಗಿ ಸಿಗಲಿ. ತಿನ್ನಲಿಕ್ಕೆ ತುಂಬಿದ ಕಣಜವಿದ್ದವರು ನನಗೆ ವಿಷ ಹಾಕಿದರು. ವಿಷ ಕುಡಿಯಲು ಸಹ ಕಾಸಿಲ್ಲದವರಿಗೆ ತಿನ್ನಲು ಒಂದೀಸು ಕಾಳಾದರೂ ನನ್ನಿಂದ ಸಿಗಲಿ.

ಭೀಮಣ್ಣ } ಆಗಲಿ, ರಾಮಣ್ಣನವರೆ! (ಬಿಕ್ಕುತ್ತಾರೆ.)
ಸೆಟ್ಟ }

ರಾಮಣ್ಣ—ಸದ್ಗುಣವೇ ಮೈವೆತ್ತು ಬಂದ ನನ್ನ ಚಿನ್ನರಿರಾ! ದೇವರು ನಿಮಗೆ ಅಖಂಡ ಕಲ್ಯಾಣವನ್ನುಂಟುಮಾಡಲಿ. ನೀವು ನಡೆದು ಬಂದ ದಾರಿಯೇ ನಿಮ್ಮ ಮುಂದಿನ ಪಯಣದ ರಕ್ಷೆಯಿರಲಿ. ಅನ್ಯಾಯದೊಡನೆ ನ್ಯಾಯವನ್ನೆಸಗಿ ಬಲು ದಣಿದಿದ್ದೀರಿ ಮಗುಗಳು ನೀವು. ದೇವರು ನಿಮಗೆ ಫಲಪ್ರದವಾದ ಶಾಂತಿಯನ್ನು ಕೊಡಲಿ!

(ಹರಸುತ್ತಾನೆ. ಇಬ್ಬರೂ ನಮಿಸುವರು.)

ಭೀಮಣ್ಣ—ನಾವು ಯಾವ ಹಾದಿಯನ್ನು ಹಿಡಿಯಬೇಕು, ಹಿರಿಯರೆ?

ರಾಮಣ್ಣ—ನೀಚರ ದರ್ಪ ಹಿರಿದಾಗುತ್ತ ನಡೆಯಿತು, ಭೀಮು. ಅಧಿಕಾರದ ಮೇಲಿನಂತಸ್ತಿಗಿದ್ದ ಅಧಿಕಾರಕ್ಕೆ ಸತ್ಯವನ್ನು ಅರುಹಬೇಕು. ಕೊನೆಯ

ಪಕ್ಷಕ್ಕೆ ಅನನ್ಯವಾದ ಅಧಿಕಾರವು ದೇವದೇವನದೆಂಬುದನ್ನು ಮರೆಯಬೇಡ.

ಭೀಮಣ್ಣ—ತಿಳಿಯಿತು. ಹಿರಿಯರೆ. ಈ ತಿಳುವಳಿಕೆಯ ಬೆಳಕಿನಲ್ಲಿ ಹೆಜ್ಜೆಯೊಗೆಯುತ್ತ ನಡೆಯುವದೇ ನನ್ನ ಕೆಲಸ.

ರಾಮಣ್ಣ—ನಿಜ, ಭೀಮು. ಉಳಿದದ್ದು ದೈವವನ್ನೇ ಕೂಡಿದೆ. ಸುಭದ್ರಾಬಾಯಿ ಈಗ ಗರ್ಭಿಣಿಯಲ್ಲೆ, ಭೀಮು ? ಹೌದು, ಲಕ್ಷಮ್ಮನವರು ಹೇಳುತ್ತಿದ್ದರು. ನಿನ್ನ ಮಗನು ನಿನ್ನಂತೆ ಕುಲದೀಪಕನಾಗಲಪ್ಪಾ! ಇನ್ನು ಅಪ್ಪಣೆ ಕೊಡಿರಿ, ಸೆಟ್ಟರೆ! ನಮ್ಮ ಎಲ್ಲ ಪರಿವಾರಕ್ಕೂ ನನ್ನ ವಂದನೆಗಳನ್ನು ತಿಳಿಸಿರಿ. ನೆಲ-ಮುಗಿಲುಗಳ ನಡುವೆ ಬಹಳ ಅಂತರವಿಲ್ಲ, ಭೀಮು. ಒಂದು ಪರಮಾಣುವಿನಷ್ಟು, ಮನಸ್ಸಿನಷ್ಟು, ಶಿವ ! ಶಿವ ! ಶಿವ !

(ಸಾಯುತ್ತಾನೆ.)

ಭೀಮಣ್ಣ—(ಅಳುತ್ತ) ಇಲ್ಲಿ ನೋಡಿರಿ, ಸೆಟ್ಟರೆ? ದೀಪವು ನಂದಿಹೋಯಿತು. ಒಡನುಡಿಯುತ್ತಿದ್ದ ಮಂತ್ರವಾಣಿಯು ಮೌನಗೊಂಡಿತು. ದಿಕ್ಕುಗಳು ಪರದೇಶೀಯಾದವು. ನಮ್ಮೆಲ್ಲರಿಗೆ ಜೀವವಾದ ಧೈರ್ಯದ ರಾಶಿ ಬಯಲಾಯಿತು. ಸೆಟ್ಟರೆ, ಬಯಲಾಗಿ ಹೋಯಿತು.

ಸೆಟ್ಟಿ—ಹೌದು; ರಾಮಣ್ಣನವರು ತೀರಿ ಹೋದರು. ತೀರಿಹೋಗಿ,-ದಂತಕಥೆಯಾದರು !

(ಪರದೆ ಬೀಳುವುದು.)

---

## ಪ್ರವೇಶ ೨

(ಗಂಗಜ್ಜನ ಮನೆಯ ದಾರಿ. ಮುಚ್ಚಂಜೆಯಾಗಿದೆ. ಮನೆಗೆ ನಡೆದಿರುವ ಗಂಗಜ್ಜನನ್ನು ಹಿಂಬಾಲಿಸಿ ಸಣತಮ್ಮನು ಅಧಿಕಾರದ ವೇಷದಲ್ಲಿ ಬರುತ್ತಾನೆ.)

ಸಣತಮ್ಮ—ಇಲ್ಲಿ ನಿಲ್ಲು ಏ ಗಂಗಜ್ಜ, ಹಾ! ಕೆರಳಬೇಡ. ನಾನು ಇಂದಿಗೆ ಸರ್ವಾಧಿಕಾರಿ; ಜಾಗೀರಿನ ಕಾರಭಾರಿ. ನನ್ನ ಕಣ್ಸನ್ನೆಗೆ ನೀನು ಕುಣಿಯಬೇಕು. ಆದರೆ ಭಿಕ್ಷುಕನಂತೆ ಹೇಗೆ ನಿನ್ನ ಬೆನ್ನು ಹತ್ತಿ ಬಂದಿದ್ದೇನೆ ನೋಡು. ನೀನು ಹೇಳಿದಷ್ಟು ಅಧಿಕಾರವನ್ನು ಕೊಡುವೆನು, ದುಡ್ಡನ್ನು ಕೊಡುವೆನು. ನನ್ನಿಂದಾದ ಪ್ರಮಾದವನ್ನೊಂದು ಮಾತ್ರ ಮರೆತುಬಿಡು.

ಗಂಗಜ್ಜ—ಅದನ್ನೊಂದು ಬಿಟ್ಟು ಉಳಿದುದನ್ನೆಲ್ಲ ನೀನು ಮರೆತುಬಿಡು.

ಸಣತಮ್ಮ—ಮಲ್ಲವ್ವನೊಬ್ಬಳೆ ಹೆಂಗಸಲ್ಲ, ಗಂಗಜ್ಜ, ನಿನ್ನೆದುರಿಗೆ ಹತ್ತು ಹೆಣ್ಣುಗಳನ್ನು ತಂದಿರಿಸುವೆನು. ಒಂದನ್ನು ಆರಿಸಿಕೋ ಮಲ್ಲವ್ವನನ್ನು ನನ್ನವಳಾಗಿ ಮಾಡಿದ್ದನ್ನು ಮಾತ್ರ ಮರೆ.

ಗಂಗಜ್ಜ—ಏ, ಹುಚ್ಚೆ! ತೊಲಗಿಲ್ಲಿಂದ. ನಾನು ಆಳುಮಗನಾಗಿ ಕೆಲಸ ಸುರುವು ಮಾಡಿದೆ. ನೀನು ಆಗ ತೀರ ಕೆಳಗಿನ ಕಾರಕೂನನಿದ್ದೆ. ಸತ್ಯ ರೀತಿಯಿಂದ ನಡೆದ ನನಗೆ ಒಂದು ಕಾಸು ಹೆಚ್ಚು ಸಂಬಳವಿಲ್ಲ. ಆದರೆ ಹೊಂಚಿನ ಮೇಲೆ ಹೊಂಚು ಹಾಕಿ ನೀನು ಈಗ ಕಾರಭಾರಿಯಾಗಿದ್ದೀಯೆ. ನನ್ನ ಸಾಬರಿಯು ನಿನಗಿರದ ವರೆಗೆ ನಾನು ಸುಮ್ಮನಿದ್ದೆ. ಆದರೆ ಈಗೆಲ್ಲಿ ಬಿಡುತ್ತೇನೆ? ನಿನ್ನನ್ನು ಚೂರು ಚೂರು ಮಾಡುತ್ತೇನೆ.

ಸಣತಮ್ಮ—ಎಚ್ಚರ, ಗಂಗಜ್ಜ! ಯಾರೆದುರಿಗೆ ಮಾತಾಡುವಿಯೆಂಬುವರ ನೆನಪಿರಲಿ.

ಗಂಗಜ್ಜ—(ಕಠಾರಿಯನ್ನು ಹಿರಿದು) ನಿಲ್ಲು. ಇಲ್ಲಿಯೇ ನನ್ನ ಸೇಡನ್ನು ತೀರಿಸಿಬಿಡುತ್ತೇನೆ.

ಸಣತಮ್ಮ—ಅಯ್ಯೋ! ಇದು ಬೇರೆ. ಹಾ, ಗಂಗಜ್ಜ, ಅಲ್ಲಿ ನೋಡು, ನಿನ್ನ ಮಲ್ಲವ್ವ ನಿನ್ನನ್ನು ಕೈಮಾಡಿ ಕರೆಯುತ್ತಿರುವಳು ನೋಡು. ನೀನು ಬರಲು ಹೊತ್ತಾಯಿತೆಂದು ಬಂದಳು, ಮನೆ ಬಿಟ್ಟು ನಿನ್ನನ್ನು ಹುಡುಕುತ್ತಾ ಬಂದಳು.

(ಗಂಗಜ್ಜನು ಹಿಂತಿರುಗಿ ನೋಡುತ್ತಾನೆ. ಅದೇ ಸಮಯವನ್ನು ಸಾಧಿಸಿ ಸಣತಮ್ಮನು ಓಡಿಹೋಗುತ್ತಾನೆ.)

ಗಂಗಜ್ಜ—ಅಯ್ಯೋ, ಈ ನೀಚನು ನನ್ನನ್ನು ವಂಚಿಸಿ ತನ್ನ ಉಳಿಸಿಕೊಂಡು ಹೋದನೆ? ಮಾನಭಂಗವಾದ ಮೇಲೆ ನನಗೆ ಎರಡು ದಿನ ಮೋರೆ ತೋರಿಸದೆ ಬಿದ್ದುಕೊಂಡ ಮಲ್ಲವ್ವನು ನನ್ನನ್ನು ಹುಡುಕಿಕೊಂಡು ಬರುವಳೆಂದರೇನು? ಅವಳನ್ನು ಮಲಿನವಾಗಿಸಿದ ಈ ನೀಚನನ್ನು ಕಡಿದು ರಕ್ತಾಭಿಷೇಕ ಮಾಡಿ ಮತ್ತೆ ಅವಳ ಪಾವಿತ್ರ್ಯವನ್ನು ಕಾಯುತ್ತೇನೆ. ಏ, ಪಶು. ನಿಲ್ಲು, ನಿಲ್ಲು. ನನ್ನಿಂದ ನೀನು ಪಾರಾಗಲಾರೆ!

(ಹೋಗುತ್ತಾನೆ.)

---

## ಪ್ರವೇಶ ೩

(ಬೇವಿನಹಳ್ಳಿಯ ವಿನ್ನೆಯ ಹತ್ತಿರ ಮುಂಜಾವದಲ್ಲಿ ದೇಸಾಯಿ-ಸಣತಮ್ಮರು ತಿರುಗಾಡುತ್ತ ಬರುತ್ತಾರೆ.)

ದೇಸಾಯಿ—ಇದೊಂದು ಸಾಧಿಸಲಿಲ್ಲವಲ್ಲ, ಸಣತಮ್ಮ? ಕೈ ತೋರಿಸಿ ಅವಲಕ್ಷಣವಾದ ಹಾಗಾಯಿತು. ನಮ್ಮ ಗುಟ್ಟನ್ನು ಯಾರು ಬೈಲಿಗೆಳೆದರು? ನಮ್ಮಿಂದ ಹೋದ ಜನರು ತಿರುಗಿ ಬರಲೇ ಇಲ್ಲ. ಅವರನ್ನು ಊರ ಪಂಚರು ಬಂಧನದಲ್ಲಿ ಇರಿಸಿದ್ದಾರಂತೆ. ನಾನು ಹಾಕಿದ ಹೊಂಚಿನ ತಪ್ಪನ್ನೇ ಅವರ ಮೇಲೆ ಹೊರಿಸಿದ್ದಾರಂತೆ.

ಸಣತಮ್ಮ—ಅದನ್ನೇ ಯೋಚಿಸುತ್ತಿದ್ದೇನೆ, ಶ್ರೀಮಂತರೆ! ಆ ಗಂಗಜ್ಜನ ಮೇಲೆ ನನಗೆ ಬಲವಾದ ಸಂಶಯವಿದೆ. ಅಂತೇ ಈಗ ಅವನನ್ನು ತೆಗೆದು ಹಾಕಿದ್ದೇನೆ. ಸಮಯ ಸಾಧಿಸಿದಾಗ ಅವನು ಇಲ್ಲದಂತೆ ಕೂಡ ನಾವು ಮಾಡಬೇಕು.

ದೇಸಾಯಿ—ಅದೊಂದು ಚೆನ್ನಾಯಿತು. ಇನ್ನು ನಾಯಕನ ಮನೆಗೆ ಕೈ ಹಚ್ಚುವದಕ್ಕಿಂತ ಆ ನಾಯಕನನ್ನೇ ಗೊತ್ತುಹಚ್ಚುವದು ಒಳ್ಳೆಯದು. ಮೊನ್ನೆ ಅದೊಂದು ಅರ್ಜಿ ಬಂದಿತ್ತಲ್ಲ? ಅದಕ್ಕೆ ನಾನು ಹೇಳಿದಂತೆ ಉತ್ತರ ಕೊಟ್ಟೆಯಾ?

ಸಣತಮ್ಮ—ಆ ರೀತಿ ಒಮ್ಮಿಂದೊಮ್ಮೆ ದುಡುಕಬಾರದು, ಶ್ರೀಮಂತರೆ! ಇಂಥ ಕಾರ್ಯಗಳನ್ನು ತುಸು ಬುದ್ಧಿ ಚಾತುರ್ಯದಿಂದ ಸಾಧಿಸಬೇಕು. ನಾನು ಹೀಗೆ ಜಾಹೀರು ಮಾಡಿದೆ: ಜಾಗೀರಿನ ಜನರಿಗೆ ಇಲ್ಲಿಯ ವರೆಗೆ ಅನೇಕ ತೊಂದರೆಗಳಾಗಿರಬಹುದು. ಹಿಂದಿನ ಕಾರಭಾರಿಗಳಿಗೆ ವಯಸ್ಸಾದ ಕಾರಣ ಇಂಥ ಪ್ರಮಾದಗಳು ಸಂಭವಿಸುವದು ಸಹಜವಾಗಿದೆ. ಇನ್ನು ಮೇಲೆ ಜನತೆಗೆ ಹೆಚ್ಚು ಹೆಚ್ಚಾಗಿ ಸುಖ-ಶಾಂತಿಗಳು ಲಭಿಸುವಂತೆ ನೋಡುವದು ನಮ್ಮನ್ನು ಕೂಡಿತು, ಎಂದು.

ದೇಸಾಯಿ—ಆ ಇಂಚಲಾಪುರದ ಪ್ರಸಂಗವನ್ನು ಹೇಗೆ ಮುಚ್ಚಿಕೊಳ್ಳಬೇಕು, ಸಣತಮ್ಮ? ನಮ್ಮ ಜನರೇ ನಮ್ಮ ವಿರುದ್ಧ ಸಾಕ್ಷಿ ಹೇಳಿದರೆ . . . ?

ಸಣತಮ್ಮ—ಅದರಲ್ಲೇನಿದೆ, ಶ್ರೀಮಂತರೆ! ಇದೆಲ್ಲ ನಮಗಾಗದವರು ಹೂಡಿದ ಮೋಸಗಾರಿಕೆಯೆಂದು ನಾವು ಪ್ರತಿವಾದಿಸಿದರಾಯಿತು.

ದೇಸಾಯಿ—ಓಹೊ, ಅದೊಂದು ಹಾದಿಯಿರುವದು ನಿಜ . . . . .

ಸಣತಮ್ಮ—ನಾನು ಕೆಲವು ಎಣಿಕೆಗಳನ್ನು ಹಾಕಿದ್ದೇನೆ, ಶ್ರೀಮಂತರೆ! ಅವು ಯಶಸ್ವಿಯಾದರೆ ಇನ್ನೊಂದು ತಿಂಗಳಲ್ಲಿ ನಾವು ನಿಷ್ಕಂಟಕರಾದಿರೆಂದು ತಿಳಿಯಿರಿ.

ದೇಸಾಯಿ—ಆ ಅಮೃತಯೋಗಕ್ಕಾಗಿ ಕಾಯುತ್ತಿದ್ದೇನೆ. ಸಣತಮ್ಮ, ಇರಲಿ. ನಮ್ಮ ಚಿರಂಜೀವರ ಆ ಪತ್ರವನ್ನು ನೋಡಿದೆಯಾ? ಎಷ್ಟು ಯಮಕಿನಿಂದ ಬರೆದಿದ್ದಾನೆ. 'ಬೇವಿನಹಳ್ಳಿಯಲ್ಲಿ ಈಗ ನಡೆದ ಗೊಂದಲದ ಅರ್ಥವೇನು? ಸಾದ್ಯಂತವಾಗಿ ತಿಳಿಸುವ ಕೃಪೆಯಾಗಬೇಕು' ಎಂದು? ಇಷ್ಟು ದಿವಸ ಊರಿಗೆ ಬರಲು ಅವಕಾಶವಿಲ್ಲದ ಈ ಮಗನಿಗೆ ಈಗ ಜಾಗೀರಿನ ವಿಷಯಕ್ಕೆ ಎಷ್ಟೊಂದು ಕಾಳಜಿ, ಎಷ್ಟು ಚಿಂತೆ!

ಸಣತಮ್ಮ—ಇತ್ತೀಚೆಗೆ ವರ್ತಮಾನಪತ್ರಗಳಲ್ಲಿಯೂ ನಮ್ಮ ಜಾಗೀರಿನ ವಿಷಯದ ಚರ್ಚೆಯಾಗುತ್ತಿದೆ, ಒಡೆಯರೆ. ಅದನ್ನು ಹೇಗಾದರೂ ಮಾಡಿ ತಡೆದು ಹಿಡಿಯಬೇಕಾಗಿದೆ.

ದೇಸಾಯಿ—ಅವರ ಬಾಯಿ ಮುಚ್ಚುವದು ಎಷ್ಟು ಹೊತ್ತು? ಹಿಡಿಹೊನ್ನು ಹಾಕಿದರೆ ಮಣ್ಣು ಕೊಟ್ಟಂತಾಗಿಬಿಡಬಹುದಲ್ಲ ಈ ಪತ್ರಿಕಾಕರ್ತರಿಗೆ?

ಸಣತಮ್ಮ—ದುಡ್ಡಿನ ಕೊರತೆಯಿದೆಯೆಂದು ಯೋಚನೆ . . . . ಅಷ್ಟೆ.

ದೇಸಾಯಿ—ಅದಕ್ಕೇನು ಕಡಿಮೆ, ನನ್ನ ಸ್ವಂತದ ಖಜಾನೆಯಿಂದ ಕೊಡುತ್ತೇನೆ. ಕೆಲಸವು ಮಾತ್ರ ಮುಂದೆ ಸಾಗಲಿ. ಆದರೂ . . . . ಈ ಜನರೊಡನೆ ಗುದ್ದಾಡಿ ಬೇಸರ ಬಂದಿದೆ, ಸಣತಮ್ಮ. ನನಗೆ ಹಳ್ಳಿಗಳ ಬದಲು ಹೊಲಗಳೇ ಇನಾಮಿರಬೇಕಿತ್ತು.

ಸಣತಮ್ಮ—ಓಹೋ! ದೊರೆಗಳಲ್ಲಿ ಇಂಥ ವಿಚಾರಗಳು ಹೇಗೆ ಬಂದವು? ಬರಿಯ ಹೊಲಗಳಿದ್ದರೆ ಈ ಅಧಿಕಾರವು ನಿಮಗೆ ಇರಬಹುದಾಗಿತ್ತೆ? ಮೇಲಾಗಿ ಇಷ್ಟೊಂದು ವಿವಿಧ ಸುಖ-ಸ್ತ್ರೀಸುಖ ಶ್ರೀಮಂತರೆ, ಅದು ನಿಮಗೆ ದೊರೆಯುತಿತ್ತೆ? ಇಲ್ಲಿ ನೋಡಿರಿ, ಕೆಳಗೆ ತಪ್ಪಲುವೀಡಿನಲ್ಲಿ ಬೇವಿನಹಳ್ಳಿಯು ಹೇಗೆ ವಿರಾಜಮಾನವಾಗಿದೆ! ಉದಯಾಚಲವನ್ನೇರಿದ ಸೂರ್ಯನ ಕಿರಣಗಳು ಅಲ್ಲಿಯ ಮನೆ-ಹೊಲಗಳನ್ನು ಹೇಗೆ ಚುಂಬಿಸುತ್ತಿವೆ! ಅರ್ಧ ಊರು ಎಚ್ಚತ್ತಿದೆ; ಅರ್ಧ ನಿದ್ದೆ ಮಾಡುತ್ತಿದೆ. ಅಲ್ಲಿ ನೋಡಿರಿ, ನಾವು ಕಟ್ಟಿಸಿದ ಹನುಮಪ್ಪನ ಗುಡಿಯು ಹೇಗೆ ಗಗನಚುಂಬಿಯಾಗಿ ನಿಂತಿದೆ. ನಿಮ್ಮ ರಂಗಮಹಲು ಹೊಂಬೆಳಕಿನಲ್ಲಿ ಹೇಗೆ ರಂಗು-ರಂಗಾಗಿದೆ. ಸಾವಿರಾರು ಜನರ ನಡುವೆ ಹೀಗೆ ನಿಂತು ಮೆರೆಯಲು ಪಡೆದು ಬಂದಿರಬೇಕು, ದೊರೆಗಳೆ!

ದೇಸಾಯಿ—ವಾಹವಾ! ಸಣತಮ್ಮ, ನೀನು ನನ್ನ ಕಾರಭಾರಿಯಾಗಿದ್ದಲ್ಲದೆ ನನ್ನ ಆಸ್ಥಾನಕವಿಯೂ ಆಗಿಬಿಟ್ಟೆಯಲ್ಲ.

ಸಣತಮ್ಮ—ಅದೊಂದು ನನ್ನ ದುರ್ದೈವ. ಈ ಆಡಳಿತದ ಭಾರವಿರದಿದ್ದರೆ ನನ್ನ ರಸಿಕತೆಯ ಸವಿಯನ್ನು ನೋಡಬೇಕಿತ್ತು, ಧಣಿಯರು. ಇಲ್ಲಿ ನೋಡಿರಿ, ಸೂರ್ಯನು ಉದಯಾಚಲವನ್ನೇರಿದಂತೆ ನೀವು ಈ ಬೆಟ್ಟವನ್ನು ಏರಿ ನಿಂತಿದ್ದೀರಿ. ರವಿಕಿರಣದಲ್ಲಿ ಲೀನವಾದಂತೆ ನಿಮ್ಮ ಪದತಲದಲ್ಲಿ ಲೀನವಾಗಿದೆ ಈ ದೇಶ. ಇಂಥ ಭಾಗ್ಯವನ್ನು ತೊರೆಯಬಹುದೆ?

ದೇಸಾಯಿ—(ಆನಂದದಿಂದ) ಹೌದು, ಸಣತಮ್ಮ! ಇದು ನನ್ನ ದೇಶ. ನನ್ನ ಅಂಕಿತಕ್ಕೆ ಒಳಪಟ್ಟ ನಾಡಿದು.

ಸಣತಮ್ಮ—ಈಗ ನೋಡಿರಿ, ಈ ನಾಡಿನಲ್ಲಿದ್ದ ಪ್ರತಿಯೊಬ್ಬನ ಮೇಲೂ

ನಿಮ್ಮ ಅಧಿಕಾರದ ಮುದ್ರೆ ಬೀಳಬೇಕು.

ದೇಸಾಯಿ—ಅಷ್ಟೊಂದು ನನಗೆ ದೊರೆತರೆ !

ಸಣತಮ್ಮ—ಅದನ್ನು ಒದಗಿಸಿಕೊಡಲು ಈ ಸೇವಕನು ಸಿದ್ಧನಿದ್ದಾನೆ, ಶ್ರೀಮಂತರೆ ! ಅದಿರಲಿ. ಈಗ ನಿಮ್ಮ ತಲೆಶೂಲಿ ? ಹೇಗಿದೆ ?

ದೇಸಾಯಿ—ಇನ್ನೆಲ್ಲಿಯ ತಲೆಶೂಲಿ ? ಈ ಉತ್ಸಾಹದಲ್ಲಿ ಅದನ್ನೆಲ್ಲ ನಾನು ಮರೆತುಬಿಟ್ಟೆ.

ಸಣತಮ್ಮ—ಮುಂಜಾವಿನಲ್ಲಿ ತಿರುಗಾಟದಿಂದ ದೊರೆಗಳಿಗೆ ಹಿತವಾಗಬಹುದು. ನಿತ್ಯವೂ ಇತ್ತಕಡೆಗೆ ಬಂದು ಹೋಗಬೇಕು. ನಸುಕಿನ ಹವೆಯ ಹಿತವೇ ಅಂತಹದು. ಏ ಬಸವಣ್ಣ, ಬಗಿಯನ್ನು ಇತ್ತ ಹೊರಳಿಸು. ಹೀಗೆ, ಇಲ್ಲಿ ಬರಬೇಕು ಧಣಿಯರು.

(ಇಬ್ಬರೂ ಹೋಗುತ್ತಾರೆ.)

---

## ಪ್ರವೇಶ ೪

(ರಾತ್ರಿಯಾಗಿದ್ದರಿಂದ ಎರಡು ದೊಡ್ಡ ಹಿಲಾಲುಗಳನ್ನು ಹಚ್ಚಿದೆ. ಅನೇಕರು ಪಂಜು ಹಿಡಿದುಕೊಂಡು ನಿಂತಿದ್ದಾರೆ. ಲಕ್ಕಣ್ಣೊಡೆಯರ ಸಮಾಧಿಯ ಹತ್ತಿರ ಅನೇಕ ಜನರು ನೆರೆದಿದ್ದಾರೆ. ಭೀಮಣ್ಣನಾಯಕನು ಕಟ್ಟೆಯ ಮೇಲೆ ಕುಳಿತಿದ್ದಾನೆ. ಅವನ ಹತ್ತಿರ ಸಿದರಾಮಸೆಟ್ಟಿ ಮೊದಲಾದ ಅನೇಕ ಮುಖ್ಯಸ್ಥರು ಕುಳಿತಿದ್ದಾರೆ. ಸುತ್ತಲೂ ಜನರ ಹಿಂಡು ನಿಂತಿದೆ; ಒದರಾಟಗಳು ಕೇಳಿ ಬರುವವು.)

ಜನ—ಆಗಲಿ, ಆಗಲಿ ! ನಾಯಕರ ಭಾಷಣವಾಗಲಿ. ಅವರ ಮಾತಿಗಾಗಿ ಕಾಯ್ದಿದ್ದೇವೆ.

ಭೀಮಣ್ಣ—(ಎದ್ದುನಿಂತು) ನನ್ನ ಪ್ರೀತಿಯ ಸಹೋದರರೆ ! ನನ್ನ ದೇಶ ಬಾಂಧವರೆ !

ಜನ—ಹೌದು ! ಹೌದು ! ಹೌದು ! ನೀನು ನಮ್ಮ ನಾಯಕ !

ಭೀಮಣ್ಣ— ನನ್ನ ಪರಮ ಸ್ನೇಹಿತರೆ ! ಶಾಂತರಾಗಿರಿ. ನಾವೀಗ ಕಲೆತಿರುವ ವೇಳೆ, ಅತಿ ಪವಿತ್ರವಾದ ವೇಳೆ.

ಜನ—ಹೌದು ! ಗೊತ್ತಿದೆ. ಲಕ್ಕಣ್ಣೊಡೆಯರ ಪುಣ್ಯತಿಥಿಯ ದಿನವಿದು.

ಭೀಮಣ್ಣ—ಲಕ್ಕಣ್ಣೊಡೆಯರನ್ನು ಸ್ಮರಿಸಿ ಹೇಳುತ್ತೇನೆ, ಶಾಂತರಾಗಿರಿ. ಅವರು ತೀರಿ ಹೋದರೂ ಅವರ ಆದರ್ಶಗಳು ತೀರಲಿಲ್ಲ. ಅವರ ದೇಹವು ಬಯಲಾದರೂ ಆತ್ಮವು ಹಗಲಂತೆ ಬೆಳಗುವದು.

ಜನ—(ಕಂಪಿತಸ್ವರದಿಂದ) ಬೆಳಗುವದು ! ಎಂದಿಗೂ ಬೆಳಗುವದು !

ಭೀಮಣ್ಣ—ಇಲ್ಲಿ ನೋಡಿರಿ, ಈ ಸಮಾಧಿಯ ಬಳಿಗೆ ! ಯಾವ ವೀರಪುರುಷನು ಬಂದು ಇಲ್ಲಿ ಒರಗಿಕೊಂಡನು ?

ಜನ—ರಾಮಣ್ಣನವರು ! ತಂದೆಯಂತೆ-ರಾಮನಂತೆ-ನಮ್ಮನ್ನು ಕಾಪಾಡಿದ ರಾಮಣ್ಣನವರು !

ಭೀಮಣ್ಣ—ಅಯ್ಯೋ ! ರಾಮಣ್ಣನವರು ಇಲ್ಲಿ ಒರಗಿಕೊಂಡರು. ಗೆಳೆಯರೆ ! ಅಣ್ಣತಮ್ಮಂದಿರೆ! ಈ ಎರಡು ದಿವ್ಯ ಜೀವಗಳು ಹಾಕಿಟ್ಟ ಮೇಲ್ಪಂಙ್ತಿಗೆ ಜಗತ್ತೇ ಮೆಚ್ಚಬಹುದು. ಆದರೆ ನಮ್ಮ ಶ್ರೀಮಂತರು ಅದನ್ನು ನೆಚ್ಚಲಿಲ್ಲ. ಅವರ ನಡತೆಗೆ ದೇವತೆಗಳು ಹೂಗರೆಯಬಹುದು. ಶ್ರೀಮಂತರು ಮಾತ್ರ ಕಣ್ದೆರೆಯಲಿಲ್ಲ.

ಜನ—ಅನ್ಯಾಯ. ಪರಮೋನ್ಯಾಯ !

ಭೀಮಣ್ಣ—ಗೆಳೆಯರೆ, ನನ್ನ ಮಾತನ್ನು ತಪ್ಪೆಣಿಸಬೇಡಿ. ನಾನು ಇಲ್ಲಿ ನಿಂತಿರುವದು, ಶ್ರೀಮಂತರನ್ನು ನಿಂದಿಸುವದಕ್ಕಲ್ಲ. ಲಕ್ಕಣ್ಣೊಡೆಯರ ರಕ್ತವು ಅವರ ಮೈಯಲ್ಲಿ ಹರಿದಾಡುತ್ತಿದೆ. ರಾಮಣ್ಣನವರ ನೀತಿ ಪಾಠವು ಅವರ ಕಿವಿಯಲ್ಲಿ ಗುಣಿಸುತ್ತಿದೆ. ಆದರೆ ನಮ್ಮೆಲ್ಲರ ದುರ್ದೈವದಿಂದ ಶ್ರೀಮಂತರು ಮನೆತನದ ಅಭಿಮಾನವನ್ನು ಹಿಡಿಯಲಿಲ್ಲ. ಪರಂಪರೆಯನ್ನು ಕಾಯಲಿಲ್ಲ.

ಜನ—ಹೌದು ! ಶ್ರೀಮಂತರಲ್ಲಿ ಒಡೆಯರ ಬುದ್ಧಿ ಬರಲಿಲ್ಲ.

ಭೀಮಣ್ಣ—ಆದರೂ ನಾವು ಶ್ರೀಮಂತರನ್ನು ಮರ್ಯಾದಿಸಿದೆವು. ಅವರ ಅಪ್ಪಣೆಯಂತೆ ನಡೆದು ಬಂದೆವು. ಕೇಳಿದಷ್ಟು ತೆರಿಗೆಯನ್ನು ತೆತ್ತೆವು. ನಮ್ಮ ಜೀವಗಳನ್ನು ಹಿಂಡಿದರು. ನಮ್ಮ ಮಾನವನ್ನು ಭಂಗಿಸಿದರು. ಮನೆಮನೆಯ ಹೆಣ್ಣುಮಕ್ಕಳ ಬಣ್ಣಕ್ಕೆ ಕಣ್ಣು ಸೋತು ಊರಲ್ಲಿ ಬೆಂತರ ಬೂದಿಯನ್ನೂದಿದರು. ದ್ವೇಷ-ದೂಷಣೆಗಳ ವಿಷವೃಕ್ಷಕ್ಕೆ ನಿರ್ಬಂಧ

ವಿಲ್ಲದೆ ನೀರುಣಿಸಿದರು. ಗೆಳೆಯರೆ, ಶ್ರೀಮಂತರಿಗೆ ಯಾವ ಕೆಡಕನ್ನೂ ನಾನು ಬಯಸಲಾರೆ. ನನ್ನಲ್ಲಿ ಅವರು ಎರಡು ಬಗೆದರೂ ಅವರೊಡನೆ ಒಂದೇ ಒಂದು ಭಾವನೆಯಿಂದ ನಾನು ನಡೆದಿದ್ದೇನೆ. ಆದರೆ ಶ್ರೀಮಂತರಿಗಿಂತ ಲಕ್ಕಣ್ಣೊಡೆಯರು ನನಗೆ ಪೂಜ್ಯರಾಗಿದ್ದಾರೆ. ಮೊದಲು ಒಡೆಯರ ಧ್ಯೇಯಗಳನ್ನು ಮನ್ನಿಸಬೇಕು, ಆ ಮೇಲೆ ಅವರ ವಂಶವನ್ನು.

ಜನ—ಹೌದು. ಹೌದು! ಮೊದಲು **ಅವರ** ಅಂಶ! ಆ ಮೇಲೆ ಅವರ **ವಂಶ !**

ಭೀಮಣ್ಣ—ಪೂಜ್ಯರಾದ ರಾಮಣ್ಣನವರು ಹೇಳಿದ ಮಾತು ನನ್ನ ಕಿವಿಯಲ್ಲಿ ನಿನದಿಸುತ್ತಿದೆ; ಬೇರೆ ಏನೂ ಇಲ್ಲ. ಈಗ ಇಷ್ಟೊಂದು ಮಾಡಬೇಕೆಂದಿದ್ದೇವೆ. ವರಿಷ್ಠ ಸರಕಾರಕ್ಕೆ ಶ್ರೀಮಂತರ ನಡತೆಯ ವಿಷಯವನ್ನು ತಿಳಿಸುವದು. ಈ ನಮ್ಮ ಕಾರಭಾರಿಗಳಗಳ ಇತಿಹಾಸವನ್ನು . . . . . .

ಜನ—ಸುಡಿರಿ ಆ ಸಣತಮ್ಮನನ್ನು !

ಭೀಮಣ್ಣ—ಅವರ ಇತಿಹಾಸವನ್ನೂ ಸರಕಾರದ ಕಿವಿಯ ಮೇಲಿಡಬೇಕು. ಮೊನ್ನೆ ಇಂಚಲಾಪುರದಲ್ಲಿ ನಡೆದ ಪ್ರಸಂಗ . . . . .

ಜನ—ಸುಡಿರಿ ಸಣತಮ್ಮನನ್ನು !

ಭೀಮಣ್ಣ—ಅದು ನಿಮಗೆ ಗೊತ್ತೇ ಇದೆ. ಅಲ್ಲಿ ಬಂಧಿಸಿದ ನೀಚರ ಒಪ್ಪೋಲೆಯನ್ನೂ ಮೇಲೆ ಕಳಿಸೋಣ. ಉಳಿದ ಅನೇಕ ಜಬಾನಿಗಳು ಅದಕ್ಕೆ ಬೆಂಬಲವಾಗಿವೆ. ಅಲ್ಲದೆ ನಮ್ಮ ಸೆಟ್ಟರು ಎಲ್ಲ ವಿಷಯಗಳನ್ನು ಸೇರಿಸಿ ಒಂದು ಅರ್ಜಿಯನ್ನು ತಯಾರಿಸಿದ್ದಾರೆ.

ಜನ—ಓದಿರಿ ಸೆಟ್ಟರೇ, ಅದನ್ನು ಓದಬೇಕು.

ಭೀಮಣ್ಣ—ಸೆಟ್ಟರೆ, ಆ ಅರ್ಜಿಯನ್ನಷ್ಟು ದಯವಿಟ್ಟು ಓದಿರಿ. ಸೆಟ್ಟರು ಓದಿದ ಮೇಲೆ ತಾವೆಲ್ಲರೂ ಅದಕ್ಕೆ ಸಹಿ ಹಾಕಬೇಕು.

ಸೆಟ್ಟಿ—(ಎದ್ದು ನಿಂತು) ನಾಯಕರೆ, ಮತ್ತು ನನ್ನ ಬಾಂಧವರೆ! ನಾನೇನು ಕಲಿತವನಲ್ಲ. ಆದರೂ ಯತಾಮತಿಯಾಗಿ ಅರ್ಜಿಯನ್ನು ಬರೆಯಲು ಕಷ್ಟಪಟ್ಟಿದ್ದೇನೆ. ತಾವು ಅದನ್ನು ಹಂಸಕ್ಷೀರನ್ಯಾಯದಂತೆ ಕೇಳುವಂಥವರಾಗಬೇಕು.

ಜನ—ಭಲೆ, ಸೆಟ್ಟರೆ ! ಅರ್ಜಿ ಓದಿರಿ.

ಸೆಟ್ಟಿ—(ಓದುತ್ತ) ಶ್ರೀಮಂತ ದಯಾಳು ಸರಕಾರಕ್ಕೆ—ಇವರ ಹುಜೂರಿಗೆ— ಬೇವಿನ ಹಳ್ಳಿಯ ನಾಘರೀಕರು ಮಾಡಿಕೊಂಡ ಅರ್ಜಿ ಏನೆಂದರೆ:— ನಮ್ಮ ಶ್ರೀಮಂತ ಜಾಗೀರದಾರ ಹಣುಮಪ್ಪದೇಸಾಯರು ಮಾಡುವ ಕರ್ತವ್ಯಕರ್ಮಗಳು ಕೆಳಗೆ ಬರೆದಂತೆ ಇರುತ್ತವೆ :

ಜನ—ಕೆಳಗೇನು ಬರೆದಿದ್ದೀರಿ, ಓದಿ ಹೇಳಿರಿ ?

ಸೆಟ್ಟಿ—**ಖಲಮು ಒಂದು :** ಖಂದಾಯವನ್ನು ಹತ್ತುಪಟ್ಟು ಏರಿಸುವದು ಮತ್ತು ಯಾರಾದರೂ ಇಷ್ಟು ಏಕೆಂದು ಕೇಳಿದರೆ ಅವರನ್ನು ಹೊಡಿದು ಬಡಿದು ಕಳಿಸುವದು. ತಮ್ಮ ಜಮೀನು ಎತ್ತುವ ಆಳಿಲ್ಲದೆ ನೂರಾರು ಎಕರೆ ಭೂಮಿಯನ್ನು, ರೈತರನ್ನು ಬಿಟ್ಟಿ ಹಿಡಿದು ಸಾಗು ಮಾಡಿಸಿ ಕೊಳ್ಳುವದು. ಅವರು ಬಾರದಿದ್ದರೆ, ನಿಮಗೆ ಹೊಡದೇನು, ಬಡದೇನು ಮತ್ತು ಖೂನು ಮಾಡೇನು ಎಂದು ಹೆದರಿಸಿಕೊಳ್ಳುವದು.

ಜನ—ವಾಹವಾ ! ಮೂಕರ್ಜಿಗಿಂತ ಮಿಗಿಲಾಗಿ ಬರೆದರು ಸೆಟ್ಟರು ! ಭಲೆ !

ಸೆಟ್ಟಿ—**ಖಲಮು ಎರಡು :** ರೇವಣ್ಣೆಪ್ಪಾ ಗೋದಿ ಈತನ ಜಮೀನಿಗೆ ಯಾರೂ ವಾರ್ಸಾ ಇರುವದಿಲ್ಲವೆಂದು ತಾವೇ ಹೊಲವನ್ನು ಸಾಗು ಮಾಡುವದು ; ಹಾಗು ಯಾವುದೂ ಆಧಾರವಿಲ್ಲದೆ ಬೇವಿನಹಳ್ಳಿಯ ಸಿದರಾಮಸೆಟ್ಟಿ, ಬೆನಕನ ಹಳ್ಳಿಯ ನಾಗಪ್ಪಾ ಮೊದಲಾದವರ ಹೊಗಾ ರಿಕಿ ಜಮೀನು ಬಹಳ ದಿವಸದ ಲಾಗಾಯ್ತು ತಾವೇ ಊಟ ಮಾಡು ವದು.

ಜನ—ಭಪ್ಪರೇ ! ತಮ್ಮ ಸುದ್ದಿಯನ್ನು ಬರೆಯಲು ಸೆಟ್ಟರು ಹಿಂದುಮುಂದೆ ನೋಡಲಿಲ್ಲ. ಭಲೆ !

ಸೆಟ್ಟಿ—**ಖಲಮು ಮೂರು :** ಲಮಾಣಿ ಜನರಿಗೆ ಹಾಗು ದುಷ್ಟ ಜನರಿಗೆ ಊರಲ್ಲಿ ಸವಲತ್ತು ಕೊಟ್ಟು ಕಳವು ಮಾಡಲಿಕ್ಕೆ ಹಚ್ಚುವದು ಮತ್ತು ದರ ವರ್ಷಕ್ಕೆ ಇಂತಿಷ್ಟು ರೂಪಾಯಿಗಳನ್ನು ಕೊಡಬೇಕೆಂದು ಗೊತ್ತು ಮಾಡಿ ತೆಗೆದುಕೊಳ್ಳುವದು. ದರ ಒಬ್ಬ ಕಳ್ಳನಿಂದ ೬೫ ರೂಪಾಯಿ ............

ಜನ—ಭಪ್ಪರೆ ! ಇದೂ ಸೆಟ್ಟರಿಗೆ ಗೊತ್ತು ! ದರ ವರ್ಷ ಇಂತಿಷ್ಟು ರೂಪಾಯಿ

ಕೊಟ್ಟವ-ಇದಕ್ಕೆ ನಾನು ಸಹಿ ಹಾಕುತ್ತೇನೆ.

ಸೆಟ್ಟಿ—**ಖಲಮು ನಾಲ್ಕು :** ಹದ್ದಿನಲ್ಲಿರುವ ಜಮೀನುಗಳಲ್ಲಿ ಅಂಜನದವರನ್ನೂ ಹಾಂಗೂ ಯಂತ್ರಮಂತ್ರದವರನ್ನೂ ಕರೆತರಿಸಿ ಹಿಂದಿನವರು ಹೂಳಿಟ್ಟ ದ್ರವ್ಯವನ್ನು ಆಗಿಸುವದು ಮತ್ತು ಬಂದದ್ದನ್ನು ತೆಗೆದು ಕೊಳ್ಳುವದು.

ಜನ—ಭಲೆ ! ಶ್ರೀಮಂತರ ಹೊಂಚು ಹಂಚಾಯಿತಲ್ಲ.

ಸೆಟ್ಟಿ—**ಖಲಮು ಐದು :** ಊರಲ್ಲಿ ಸ್ಮಾರ್ತ-ವೈಷ್ಣವ, ಬ್ರಾಹ್ಮಣ-ಲಿಂಗಾಯತ, ಲಿಂಗಾಯತ-ಲಿಂಗಾಯತೇತರ, ಎಂದು ಕಿಳ್ಳಿಕೇತರ ಹಾಗೆ ಕಿತಾಪತಿ ಎಬ್ಬಿಸಿ, ಇಬ್ಬರ ನ್ಯಾಯ, ಮೂರನೇದವರಿಗೆ ಆದಾಯ ಎಂಬುವಂತೆ ಲಾಭ ಪಡೆಯುವದು ವ ಲುಕ್ಸಾನು ಮಾಡುವದು.

ಜನ—ಭಪ್ಪರೆ, ಸೆಟ್ಟರೆ ! ಗೋಡೆಯಲ್ಲಿ ಸುಣ್ಣದ ಕಲ್ಲಿಟ್ಟಂತೆ ಬರೆದಿದ್ದೀರಿ, ಭಪ್ಪರೆ !

ಸೆಟ್ಟಿ—**ಖಲಮು ಆರು :** ಬೇವಿನಹಳ್ಳಿಯಲ್ಲಿ ಜಾರಚೋರ ಕೆಲಸವನ್ನು ಮಾಡಿಸುವದು, ಮರ್ಯಾದಿ ಜನರನ್ನು ಅಪಮಾನ ಮಾಡುವದು. ಮತ್ತು ಚಲೋ ಸ್ತ್ರೀಯರನ್ನೂ ಪತಿವ್ರತಾಧರ್ಮವನ್ನೂ ಕೆಡಿಸುವದು. ಊರಲ್ಲಿ ಉಪರಾಟಿಗಿ ಅಂದರೆ ಕೃಷ್ಣಾವತಾರವನ್ನು ತಾಳಿದ ಹಾಗೆ ಆಗಿರುವದು.

ಜನ—ಹಾಂ, ಈ ವಿಷಯ ಬಂತು. ಇನ್ನು ಶ್ರೀಮಂತರು ಉಳಿಯುವದು ಹೇಗೆ ನೋಡೋಣ !

ಸೆಟ್ಟಿ—ಈ ಎಲ್ಲ ಖಲಮುಗಳಿಗೆ ಬೇಕಾದ ಪುರಾವೆಯನ್ನು ಇಲ್ಲಿ ಲಗತಿಟ್ಟು ಕಳಿಸಿದೆ. ಈ ಪ್ರಕಾರ ಶ್ರೀಮಂತರ ಸ್ಥಿತಿಯಿದ್ದು ಅವರ ಕಾರಭಾರಿಗಳ ಸ್ಥಿತಿಯು ಇನ್ನೂ ಗನಗೋರವಾಗಿದೆ. ಶ್ರೀಮಂತರು ರಾವಣಾಸುರನಂತಿದ್ದರೆ ಇವರು ಅಹಿರಾವಣನಾಗಿದ್ದಾರೆ. ಇವರಿಬ್ಬರ ನಡುವೆ ರೈತರ ಸ್ಥಿತಿಯು ಅಡಕೊತ್ತಿನಲ್ಲಿ ಸಿಕ್ಕ ಅಡಕಿಯ ಹಾಗೆ ಆಗಿರುತ್ತದೆ. ದಯಾಳು ಸರಕಾರವು ಯೋಗ್ಯ ವಿಚಾರ ಮಾಡಿ ಶ್ರೀಮಂತರನ್ನು ಬದಿಗೆ ಸರಿಸಿ ಕಾರಭಾರಿಗಳಿಗೆ ತಕ್ಕ ಶಿಕ್ಷೆಯನ್ನು ವಿಧಿಸಬೇಕು. ಮತ್ತು ರೈತರ ಬಂದಮೋಚನೆಯನ್ನು ಮಾಡಬೇಕು.

ಜನ—ಬರೆದರೆ ಹೀಗೆ ಅರ್ಜಿ ಬರೆಯಬೇಕು. ಭಪ್ಪರೆ ಸೆಟ್ಟರೆ! ಹ್ಯೆ! ಹ್ಯೆ! ಹ್ಯೆ!

(ಒಬ್ಬನು ಸೆಟ್ಟರನ್ನು ಅನಾಮತ ಎತ್ತಿ ಕುಣಿದು ಕೆಳಗಿರಿಸುತ್ತಾನೆ)

ಸೆಟ್ಟಿ—(ಅಭಿಮಾನದಿಂದ) ಗಂಗಜ್ಜನು ಎಲ್ಲಿ? ಇಲ್ಲಿ ಸಹಿ ಹಾಕು, ಏ ಗಂಗಜ್ಜ.

ಭೀಮಣ್ಣ—ಬರಬಹುದು. ಇಷ್ಟರಲ್ಲಿ ಎಲ್ಲಿಯೋ ಹೋಗಿದ್ದಾನೆ. ನನ್ನ ಪರಮ ಸ್ನೇಹಿತರೆ, ಅಣ್ಣತಮ್ಮದಿರೆ! ಸೆಟ್ಟರು ಓದಿದ ವಾದ ಅರ್ಜಿಯನ್ನು ತಾವು ಕೇಳಿದಿರಿ. ಅದಕ್ಕೆ ತಮ್ಮ ಒಪ್ಪಿಗೆಯಷ್ಟೆ?

ಜನ—ಒಪ್ಪದೆ ಏನು! ನನ್ನ ಸಹಿ! ನನ್ನ ಸಹಿ!

ಭೀಮಣ್ಣ—ಬಾಂಧವರೆ, ಶಾಂತರಾಗಿರಿ. ಅದೋ, ನೋಡಿರಿ! ಆ ಅರಳೆಯ ಮರದ ಕೆಳಗೆ ನಮ್ಮವನೊಬ್ಬನು ಪಂಜು ಹಿಡಿದು ನಿಂತಿದ್ದಾನೆ. ಅಲ್ಲಿ ಅರ್ಜಿಯನ್ನು ಕಳಿಸಲಾಗುವದು. ನಿಮ್ಮ ಸಹಿ ಹಾಕಿ ಹೋಗಿರಿ. ಕಾಯಲು ದೇವರಿದ್ದಾನೆ.

ಜನ—ಹೌದು. ಹೌದು! ನೀನು ನಾಯಕ. ನಮ್ಮ ನಾಯಕ!

(ಜನರು ಹೋಗುವರು. ತೆರೆಯು ಬೀಳುವದು.)

---

## ಪ್ರವೇಶ ೫

(ಸೂಟುಬೂಟಿನಲ್ಲಿದ್ದ ಚಿಕ್ಕ ಶ್ರೀಮಂತರು ಕೈಯ್ಯಲ್ಲಿ ಒಂದು ಸೂಟ್‌ಕೇಸನ್ನು ಹಿಡಿದು ಪ್ರವೇಶಿಸುತ್ತಾರೆ-ಶ್ರೀಮಂತರ ಮನೆಯ ಬಾಗಿಲದ ಮುಂದೆ.)

ಚಿ. ಶ್ರೀಮಂತ—ಅವ್ಯವಸ್ಥೆ, ಅವ್ಯವಸ್ಥೆ! ಇಷ್ಟೊ ತಿಳಿಯದ ಈ ನಮ್ಮ ಭಾರತೀಯರು ಬ್ರಿಟಿಶರಿಗೆ ಯುದ್ಧದಲ್ಲಿ ಸೋತಿದ್ದರೆ ಏನಾಶ್ಚರ್ಯ! ಈಗ ಗಾಡಿಯು ಬಾಗಿಲಲ್ಲಿ ನಿಂತು ಅರ್ಧ ತಾಸಾಯಿತು. ನನ್ನ ಟ್ರಂಕು ಕೆಳಗಿಳಿಸಿಕೊಳ್ಳಿರೆಂದರೆ ಯಾರೂ ದಿಕ್ಕಿಲ್ಲ. ಹೆಸರಿಗೆ ಇದು ಶ್ರೀಮಂತರ ಮನೆಯೆಂದು ಕಾಣುತ್ತದೆ. ಎಂಟು ದಿಕ್ಕುಗಳಲ್ಲಿ ಒಂದರಲ್ಲಿಯೂ ಒಬ್ಬ ಆಳುಮಗನಿರಬಾರದೆ? ಮತ್ತೆ ನಾನು ಇಲ್ಲಿಯ ಚಿಕ್ಕ ಶ್ರೀಮಂತನೆಂದು ಮನ್ನಣೆ ಬೇರೆ. ಈ ಹಾಳು ಹಳ್ಳಿಯ ಶ್ರೀಮಂತಿಕೆ

ಯಾರಿಗೆ ಬೇಕು ? ಇರಲು ಸರ್ವ ಸಾಧಾರಣ ಊರೆಂದರೆ ಜಗತ್ತಿನಲ್ಲಿ ಮುಂಬಯಿಯೊಂದು. ಉಳಿದ ದೇಶವೆಲ್ಲ ನಿರ್ಜನ, ಮೃತಪ್ರಾಯ. ಇಲ್ಲಿ ಜನರೇ ಇಲ್ಲ. ಇಲ್ಲಿಯವರು ಜನರನ್ನು ನೋಡಿದಂತೇ ಕಾಣುವದಿಲ್ಲ. ಪರೂರಿನಿಂದ ಯಾವನಾದರೊಬ್ಬನು ಬಂದರೆ ಊರ ಹೆಣ್ಣು ಮಕ್ಕಳೆಲ್ಲ ಕಿಡಿಕೆಗೆ ಮರೆಯಾಗಿ ನಿಂತು ಪಿಳಿ ಪಿಳಿ ಕಣ್ಣು ಬಿಡುತ್ತಾರೆ. ಹೆಣ್ಣು-ಗಂಡು ಒಂದೇ ಎಂಬ ಭಾವನೆ ಈ ಜನರಿಗೆ ಎಂದು ಬರಬೇಕು ? ಓಣಿಯಲ್ಲಿಯ ಹುಡುಗರೆಲ್ಲ ತಮಾಷೆಗಾರನನ್ನು ಬೆನ್ನಟ್ಟಿದಂತೆ ಏರಿ ಬಂದು ಕೇಕಿ ಹಾಕುತ್ತವೆ. ಮೈತುಂಬ ಬಟ್ಟೆಹಾಕಿಕೊಂಡವರನ್ನು ಈ ಹುಡುಗರು ನೋಡಿದಂತೆಯೇ ಕಾಣುವದಿಲ್ಲ. ಇದು ಎಂಥ ಊರು ! ನಮ್ಮಪ್ಪನೇನು ಇದರ ಶ್ರೀಮಂತ ? ಛೀ ! ಈ ಶ್ರೀಮಂತಿಕೆಗೆ ಬೆಂಕಿಹಚ್ಚಲಿ. ಏನೋ ! ಏ ! ಇಷ್ಟು ಕೂಗಿಕೊಂಡರೂ ಯಾರ ಕಿವಿಯೂ ಕೇಳಲಿಲ್ಲವೆ ? ಇವನಾರು ? ಏ ! ಗಂಗಜ್ಜ ! ಪಶು ! ಇಷ್ಟು ಒದರಿದರೆ ಎಚ್ಚರಿಲ್ಲವೇ ? ನಡೆ, ತೊಗೊ ಈ ಸಾಮಾನನ್ನು. ಹಾಗೇಕೆ ಮೂಲೆಯಲ್ಲಿ ಹುದುಗಿ ನಿಂತಿದ್ದೀಯೆ ?

ಗಂಗಜ್ಜ—ನಾನಲ್ಲ, ಧಣಿಯರೆ.

ಚಿ. ಶ್ರೀಮಂತ—ನಾನಲ್ಲ, ಮತ್ತೇನು **ನಾನು** ಹೊರಬೇಕೆಂದು ಹೇಳುವಿಯಾ ? ನೆನಪಿರಲಿ. ಯಾರೆದುರಿಗೆ ಮಾತಾಡುತ್ತೀ !

ಗಂಗಜ್ಜ—ನನ್ನನ್ನು ಈಗ ಕೆಲಸದಂದ ತೆಗೆದು ಹಾಕಿದ್ದಾರೆ, ಧಣಿಯರೆ.

ಚಿ. ಶ್ರೀಮಂತ—ಆಂ. ಏನಂದಿ ? ನಿನ್ನನ್ನು ಕೆಲಸದಿಂದ ತೆಗೆದರೇ ? ಅಂಥ ಧೈರ್ಯ ಯಾರಿಗೆ ಬಂತು ? ನನ್ನನ್ನು ಚಿಕ್ಕಂದಿನಿಂದ ಆಡಿಸಿದವ ನೀನು. ನನ್ನನ್ನು ಎತ್ತಿ ತೊಟ್ಟಿಲಲ್ಲಿ ತೂಗಿದ್ದೀಯೆ. ನಿನ್ನಿಂದ ಈಗ ಕೆಲಸವಾಗದಿದ್ದರೆ ಮನೆಯಲ್ಲಿ ಕೂಡಿಸಿ ಸಂಬಳ ಕೊಡಬೇಕು ನಿನಗೆ. ನಿನ್ನನ್ನು ಯಾರು ತೆಗೆದರು ?

ಗಂಗಜ್ಜ—ಕಾರಭಾರಿಗಳು ಅಪ್ಪಣೆ ಕೊಡಿಸಿದರು ದೇವರು.

ಚಿ. ಶ್ರೀಮಂತ—ಯಾರು, ರಾಮಣ್ಣನವರೆ ? ಇತ್ತೀಚೆಗೆ ಅವರ ತಲೆ ಮಿತಿಮೀರಿ ಕೆಟ್ಟಂತೆ ಕಾಣುತ್ತದೆ. ಮುದಿ ಹುಚ್ಚು . . . .

ಗಂಗಜ್ಜ—ರಾಮಣ್ಣನವರಲ್ಲ, ಧಣಿಯರೆ. ಅವರು ತೀರಿ ಎರಡು ತಿಂಗಳಾಗುತ್ತ ಬಂತು . . . .

ಚಿ· ಶ್ರೀಮಂತ—ಯಾರು ? ರಾಮಣ್ಣನವರು ತೀರಿದರೆ ? ಅಯ್ಯೋ ! ಸಾಯು ವದಕ್ಕಿಂತ ಮೊದಲು ಒಮ್ಮೆಯಾದರೂ ಅವರನ್ನು ಕಾಣಲಿಲ್ಲವಲ್ಲ ! ಆ ಮಹಾತ್ಮರ ದರ್ಶನ ಲಾಭವನ್ನು ಇನ್ನೊಮ್ಮೆ ಪಡೆಯಲಿಲ್ಲವಲ್ಲ. ನನ್ನ ದುರ್ದೈವ. ಗಂಗಜ್ಜ, ಮತ್ತಾವ ಕಾರಭಾರಿಗಳು ನಿನ್ನನ್ನು ತೆಗೆದು ಹಾಕಿದರು ?

ಗಂಗಜ್ಜ—ಸಣತಮ್ಮಪ್ಪನವರು ಧಣಿಯರೆ. ಅವರೇ ಈಗ ಕಾರಭಾರಿಗಳು.

ಚಿ· ಶ್ರೀಮಂತ—ಏನು ? ಸಣತಮ್ಮನೆ ? ಆ ಕಾರಕೂನ ಸಣತಮ್ಮನೇ ? ಆ ನೀಚನ ವರ್ಚಸ್ಸು ಶ್ರೀಮಂತರಲ್ಲಿ ಈಗ ಇಷ್ಟು ಬೆಳೆಯಿತೆ ? ಅಜ್ಜಂದಿರ ಪುಣ್ಯತಿಥಿಯ ದಿನ ಇಲ್ಲಿ ಆದ ಸಭೆಯ ವೃತ್ತಾಂತವು ಈಗ ನನಗೆ ಸಂಪೂರ್ಣ ತಿಳಿಯಿತು. ಅದೆಲ್ಲ ಈ ಹೊಸ ಕಾರಭಾರಿಗಳ ಪ್ರತಿಭೆಯ ಫಲ. ಗಂಗಜ್ಜ, ಭೀಮಣ್ಣನಾಯಕರು ಈಗ ಶ್ರೀಮಂತರ ವಿರುದ್ಧ ವರ್ತಿಸುವದು ನಿಜವೆ ?

ಗಂಗಜ್ಜ—ಅವರ ಮೇಲೆ ಅನೇಕ ಅಪರಾಧಗಳನ್ನು ಈ ಕಾರಭಾರಿಗಳು ಹೊರಿಸಿದರು, ಧಣಿಯರೆ. ಅವರ ಶೀಲಕ್ಕೆ ಸಹ ಕೈ ಹಾಕಿದರು. ಈಗ ನಾಯಕರು ಊರು ಬಿಟ್ಟು ಇಂಚಲಾಪುರಕ್ಕೆ ಹೋಗಿದ್ದಾರೆ.

ಚಿ. ಶ್ರೀಮಂತ—ಹುಂ. ಇದು ಬೇರೆ· ಗಂಗಜ್ಜ, ಇಲ್ಲಿಯ ಜಗತ್ತೇ ಕೆಳಗೆ ಮೇಲಾಗಿ ನಿಂತಿದೆ. ಈ ಮೂರು ವರ್ಷಗಳಲ್ಲಿ ವಿಚಿತ್ರ ಸಂಗತಿಗಳು ಸಂಭವಿಸಿವೆ. ನಾನು ಇಷ್ಟು ಅಲಕ್ಷ್ಯದಿಂದ ಇರಬಾರದಿತ್ತು. ನಡೆ, ಈ ಕೇಸು ಹಿಡಿ· ನನ್ನನ್ನು ಶ್ರೀಮಂತರ ಸನ್ನಿಧಿಗೆ ಕರೆದೊಯ್ಯು.

ಗಂಗಜ್ಜ—(ಅನುಮಾನದಿಂದ) ನನಗೆ ಒಳಗೆ ಹೋಗಲು ಅಪ್ಪಣೆಯಿಲ್ಲ, ಧಣಿಯರೆ.

ಚಿ. ಶ್ರೀಮಂತ—ಏ, ಹುಚ್ಚೆ! ಯಾರಪ್ಪಣೆ ಯಾರಿಗೆ ಬೇಕು ? ನಡೆ ಮುಂದೆ. (ಹೋಗುತ್ತಾರೆ. ತೆರೆಯು ಎದ್ದಾಗ ದೇಸಾಯಿ—ಕಾರಭಾರಿಯುವರು ಮಾತನಾಡುತ್ತ ಕುಳಿತಿದ್ದಾರೆ.)

ದೇಸಾಯಿ—ನಮ್ಮ ಜಾಗೀರಿನಲ್ಲಿ ಒಂದು ಇರಿವೆ ಸರಿದಾಡಿದರೆ ಗೊತ್ತು ನಿಮಗೆ. ಇಷ್ಟು ಜನರು ಹಿರಿಯರ ಪುಣ್ಯತಿಥಿಯ ದಿನ ಅವರ ಸಮಾಧಿಯ ಬಳಿಯಲ್ಲಿ ಕಲೆತು ಗೊಂದಲವೆಬ್ಬಿಸಿದರೆ ಹೇಗೆ ಗೊತ್ತಾಗಲಿಲ್ಲ ?

ಸಣತಮ್ಮ—ಅದೇ ನನಗೆ ತಿಳಿಯದು, ಶ್ರೀಮಂತರೆ. ಯಾರನ್ನೂ ನಂಬಲಾಗದೆಂದು ನನಗೀಗ ಎನಿಸತೊಡಗಿದೆ. ಏನು ನಡೆದಿದೆ ನೋಡಿ ಬರಲೆಂದು ನಾಲ್ಕು ಆಳುಮಕ್ಕಳನ್ನು ಅಟ್ಟಿದೆ. ಬರಿಯ ಭಜನಿಯ ಮೇಳವೆಂದು ಅವರು ಸುದ್ದಿ ತಂದರು.

ದೇಸಾಯಿ—ಆ ಆಳುಗಳನ್ನು ಬಾರುಕೋಲಿನಿಂದ ಹೊಡೆದು ಹದ್ದುಪಾರು ಮಾಡಿಬಿಡಿರಿ.

ಸಣತಮ್ಮ—ಇಷ್ಟರಲ್ಲಿಯೇ ಹಾಗೆ ಮಾಡಿದ್ದಾಗಿದೆ.

ದೇಸಾಯಿ—ಆದಿರಲಿ, ಸಣತಮ್ಮ, ನೀನೇ ಏಕೆ ಹೋಗಿ ನಿಜಸ್ಥಿತಿಯನ್ನು ಕಂಡುಹಿಡಿಯಲಿಲ್ಲ ? ಕಣ್ಮುಟ್ಟ ನೋಡಿ ಬಂದಿದ್ದರೆ ಜನರನ್ನು ಚದರಿಸ ಬಹುದಾಗಿತ್ತಲ್ಲವೆ ?

ಸಣತಮ್ಮ—ಇಲ್ಲ, ಮಹಾಪ್ರಭೊ. ನಾನೇ ಹೋಗಿ ಮರೆಗೆ ನಿಂತು, ನೋಡಿದೆ ಪಂಜು ಹಿಡಿದುಕೊಂಡು ಭೂತಗಣದಂತೆ ಕುಣಿದಾಡುವ ಆ ಜನರನ್ನು ನೋಡಿ ನನಗೆ ಅಂಜಿಕೆ ಬಂತು. ನಾನು ನಿಂತಿದ್ದು ಅವರ ಕಣ್ಣಿಗೆ ಬಿದ್ದಿದರೆ ನನ್ನನ್ನು ಹರಿದು ತೂರುತ್ತಿದ್ದರು ಆ ಜನರು. ಮೊದಲೇ ಗೊತ್ತಿದ್ದರೆ ಸರಕಾರದ ಪೋಲೀಸು ದಳವನ್ನು ತರಿಸಬಹುದಾಗಿತ್ತು. ಆಗ ನಿರುಪಾಯನಾದೆ. ಇದ್ದಬಿದ್ದ ನನ್ನ ನಾಲ್ಕು ಜನರನ್ನು ನಂಬುವ ಹಾಗಿರಲಿಲ್ಲ. ತಳಮಳಗೊಂಡು ತಿರುಗಿ ಬಂದೆ.

ದೇಸಾಯಿ—ಇನ್ನು ನಮ್ಮ ದಳವನ್ನು ಹೆಚ್ಚಿಸಬೇಕು, ಕಾರಭಾರಿಗಳೇ. ಈಗ ಇದ್ದವರ ಸಂಬಳವನ್ನು ಇಮ್ಮಡಿಯಾಗಿಸಿರಿ. ಮತ್ತೆ ಇಪ್ಪ ಜನರನ್ನು ನೇಮಿಸಿಕೊಳ್ಳೋಣ.

ಸಣತಮ್ಮ—ನನಗೆ ತೋಚಿದ ಮಟ್ಟಿಗೆ ಎರಡು ಉಪಾಯಗಳಿವೆ, ಶ್ರೀಮಂತರೆ ವರಿಷ್ಠ ಸರಕಾರದ ಅಧಿಕಾರಿಗಳನ್ನು ಕಂಡು ಅವರ ವಿಶ್ವಾಸವನ್ನು ಸಂಪಾದಿಸಬೇಕು. ಅಲ್ಲದೆ ಜನರನ್ನು ಮನಬಂದಂತೆ ಕುಣಿಯ ಹಚ್ಚುವ ನೀಚರನ್ನು ಹರಿದು ಕೆಡವಬೇಕು. ಸ್ವತಃ ಜನರಿಗೆ ಬುದ್ಧಿ ಇರುವದಿಲ್ಲ, ಒಡೆಯರೆ. ಮೂರು ನಾಲ್ಕು ಜನರ ದುರಾಲೋಚನೆಯ ಫಲವಿದು. ಆ ನಾಯಕ, ಆ ಸೆಟ್ಟಿ, ಆ ಗಂಗಜ್ಜ ಇವರನ್ನು ಕಂಡರೆ ನನ್ನ ಮೈಯೆಲ್ಲ ಉರಿಯುತ್ತಿದೆ.

ದೇಸಾಯಿ—ಈ ಮೂವರ ತಲೆಯ ಮೇಲೆ ರಹಸ್ಯವಾಗಿ ಇನಾಮು ಕಟ್ಟು. ನನ್ನ ಬೊಕ್ಕಸದಲ್ಲಿಯ ಎಲ್ಲ ಹಣ ಹೋದರೂ ಚಿಂತೆಯಿಲ್ಲ. ಇವರು ಮಾತ್ರ ಬಕ್ಕಬರಲು ಬೀಳಲಿ.

(ಚಿಕ್ಕ ಶ್ರೀಮಂತರು ಬಂದು ತಂದೆಯೊಡನೆ ಶೇಕ್‌ಹ್ಯಾಂಡ್ ಮಾಡಿ ಅವರ ಹತ್ತಿರವಿರುವ ಕುರ್ಚಿಯ ಮೇಲೆ ಕೂಡುವರು.)

ಚಿ. ಶ್ರೀಮಂತ—Good morning, father. How do you do? ಈ ಊರಲ್ಲಿ ಕಲಿತ ಮೋರೆಯೆಂದರೆ ನಿಮ್ಮದೇ ಒಂದು. ಉಳಿದ ಜನರೆಲ್ಲ ಕಪಿಗಳಾಗಿದ್ದಾರೆ.

ದೇಸಾಯಿ—ಯಾರು? ಅಪ್ಪಾಸಾಹೇಬನೇನು? ಈಗ ಎಲ್ಲಿಂದ ಬಂದೆ? ಮೂರು ವರ್ಷ ಪತ್ರ ಸಾಕದೆ ಮುಂಬಯಿಯಲ್ಲಿ ಕುಳಿತ ನಿನಗೆ ಈಗ ಬುದ್ಧಿ ಬಂತೆ?

ಚಿ. ಶ್ರೀಮಂತ—ಜಾಗೀರಿನ ವಿಷಯಕ್ಕೆ ದೇಶದಲ್ಲೆಲ್ಲ ಬೊಬ್ಬಾಟವಾಗದಿದ್ದರೆ ನಾನೇಕೆ ಇಲ್ಲಿ ಬರುತ್ತಿದ್ದೆ ಮಣ್ಣು ಹುಯ್ಯಲಿಕ್ಕೆ? ನಿಮ್ಮ ಶ್ರೀಮಂತಿಕೆಯ ವಿರುದ್ಧ ಕಮೀಶನರನವರಗೆ ಅರ್ಜಿ ಹೋದದ್ದು ಜಗಜ್ಜಾಹೀರಾಗದಿದ್ದರೆ ನಾನೇಕೆ ಅಭ್ಯಾಸ ಬಿಟ್ಟು ಈ ಕಿಷ್ಕಿಂಧಾಪುರಿಗೆ ಬರುತ್ತಿದ್ದೆ? ಜಾಗೀರನ್ನು ನೀವು ಇನ್ನು ವ್ಯವಸ್ಥೆಯಿಂದ ನಡೆಸಬೇಕು, ಇಲ್ಲದಿದ್ದರೆ ಅದರ ಕಲಂಕವು ನನಗೆ ಬಡಿದುಕೊಂಡೀತು. ಮುಂಬಯಿಯಲ್ಲಿ ಎಲ್ಲರೂ ಕೇಳುವವರೆ! ಮೋರೆ ತೋರಿಸದೆ ಇಲ್ಲಗೆ ಓಡಿ ಬಂದೆ. ಈಗಲೇ ಹೇಳುತ್ತೇನೆ: ಹಾಗೆ ಮಾಡದಿದ್ದರೆ,—You are not my father and I am not your son.

ದೇಸಾಯಿ—ಮೆಲ್ಲಗೆ. ಬಾಯಿ ತುಸು ಬಿಗಿಹಿಡಿ. ಮುಂಬಯಿಯಲ್ಲಿ ಮೂರು ವರುಷವಿದ್ದು ನೀನು ಕಲಿತಿದ್ದು, ತೆರಪಿಲ್ಲದೆ ಮಾತನಾಡುವದೊಂದೇ ಎಂದು ಕಾಣುತ್ತದೆ. ನಡುನಡುವೆ ಇಂಗ್ಲೀಷು ಮಾತು ಬೇರೆ. ಸಾಹೇಬನಾಗಿಬಿಟ್ಟೆಯಲ್ಲ! ಧಾರವಾಡದ ಸಾಲೆಯಲ್ಲಿದ್ದಾಲೇ ಸ್ವಲ್ಪ ಕುಂಟ ಚೇಷ್ಟೆಯಿತ್ತು. ಈಗ ಮುಂಬಯಿಗೆ ಹೋಗಿ ಮಂಗನಾಗಿ ಬಿಟ್ಟೆಯಲ್ಲ!

ಚಿ. ಶ್ರೀಮಂತ—ನಾನು ಮಂಗನಾಗಿದ್ದರೂ ಆಗಿರಬಹುದು. ನೀವು ನನ್ನ

ತಂದೆಯಾಗಿದ್ದೀರಿ. ಹೂಂ, ಹೇಳಿರಿ. ಜಾಗೀರನ ಸ್ಥಿತಿಯೇನು? ನಾನು ನಾಳಿನ ಗಾಡಿಗೆ ಹೊರಡಬೇಕು. ಅಷ್ಟರಲ್ಲಿ ಮಾತು ಮುಗಿಸಿಕೊಂಡರೆ ಮುಂಬಯಿಗೆ ಹೋಗಿ ಮೋರೆ ತೋರಿಸಬಹುದು. ಇವರು ಯಾರು? ಇಲ್ಲಿ ಸೆಟೆದು ಜಾಂಬುವಂತನಂತೆ ಕುಳಿತವರು? ಆ ಕಾರಕೂನ ಸಣತಮ್ಮನಲ್ಲವಷ್ಟೆ?

ದೇಸಾಯಿ—ಇವರು ನಮ್ಮ ಕಾರಭಾರಿ ಸಣತಮ್ಮಪ್ಪನವರು.

ಚಿ. ಶ್ರೀಮಂತ—Damned rascal! ಕಾರಕೂನನು ದಿವಾಣನೆ, ತಿಪ್ಪೆ ಹೋಗಿ ಉಪ್ಪರಿಗೆಯಾದಂತೆ. ಏ ಕಪಿ, ಹೀಗೇಕೆ ಕುಳಿತೆ ಶುಂಭನಂತೆ. ಎದ್ದು ನಿಲ್ಲು. ಮಾನಮರ್ಯಾದೆಯಿಲ್ಲವೆ? ನಮ್ಮ ಜಾಗೀರಿನ ಹೆಸರು ಕೆಟ್ಟಿರುವದು ನಿನ್ನ ದುಷ್ಕರ್ಮದಿಂದ. ತಂದೆಯವರೆ, ಈಗಿಂದೀಗ ಆರ್ಡರು ಬರೆದುಕೊಡಿರಿ, ಈ ಸಣತಮ್ಮನನ್ನು ಕೆಲಸದಿಂದ ತಳ್ಳಬೇಕೆಂದು.

ದೇಸಾಯಿ—ಮಗನೆಂದರೆ ನಿನ್ನ ಕಾಟ ಮಿತಿಮೀರಿತು. ನೀನು ಮಗನಲ್ಲ. ತಲೆಕೆಟ್ಟು ಬಾಯಿಗೆ ಬಂದಂತೆ ಬೊಗಳುತ್ತಿರುವ ನೀಚ.

ಚಿ. ಶ್ರೀಮಂತ—ನನ್ನ ತಲೆ ಕೆಟ್ಟಿಲ್ಲ, ತಂದೆಯವರೆ, ನಿಮ್ಮ ಪ್ರಕೃತಿಯನ್ನು ಪರೀಕ್ಷಿಸಲೆಂದೇ ಇಲ್ಲಿಯವರೆಗೆ ಬಂದಿದ್ದೇನೆ. ಊರ ಜನರನ್ನೆಲ್ಲ ಉರಿದಾಡಿಸುವ ನಿಮಗೆ ಹುಚ್ಚು ಹಿಡಿದಿಲ್ಲವಷ್ಟೆ? ಮೇಂದುಜ್ವರ ಬಂದಿಲ್ಲವಷ್ಟೆ? ಏ ಗಂಗಜ್ಜ, ನನ್ನ ಸೂಟ್‌ಕೇಸು ಇಲ್ಲಿ ತಾ. ತಂದೆಯವರಿಗೆ ಥರ್ಮಾಮೀಟರು ಹಚ್ಚಿ ನೋಡುತ್ತೇನೆ.

ದೇಸಾಯಿ— (ಬೆಚ್ಚಿಬಿದ್ದು) ಗಂಗಜ್ಜ! ಎಲ್ಲಿಯ ಗಂಗಜ್ಜ! ಏ! ರಾಕ್ಷಸ! ನೀನು ಇಲ್ಲಿಗೆ ಹೇಗೆ ಬಂದೆ? ನಿಲ್ಲು, ನಿನ್ನನ್ನು ತುಂಡರಿಸಿ ಒಗೆಯುವೆನು. (ಹೊಡೆಯ ಹೋಗುವನು.)

ಸಣತಮ್ಮ—ಇಲ್ಲಿ ನಡೆಯುತ್ತಿರುವ ಪ್ರಸಂಗವನ್ನು ಗಂಗಜ್ಜನು ನೋಡುತ್ತ ನಿಂತು ಅರ್ಧ ತಾಸಾಯಿತು, ಒಡೆಯರೆ.

ದೇಸಾಯಿ—ಏ, ಈ ನೀಚನನ್ನು ಇಲ್ಲಿಗೇಕೆ ಕರೆದು ತಂದೆ? ಅವನು ರಾಜದ್ರೋಹಿ. ಕೆಲಸದಿಂದ ತೆಗೆದು ಹಾಕಿದೆ.

ಚಿ. ಶ್ರೀಮಂತ—ಬೊಬ್ಬೆ ಕುಟ್ಟಿದರೂ ನಿಮ್ಮ ಮನೆಯ ಒಬ್ಬ ಆಳೇನು

ಮುಂದೆ ಬರಲಿಲ್ಲ. ನಾನು ನನ್ನ ಆಳುಮಗನನ್ನು ಆರಿಸಿಕೊಂಡೆ. ಮೇಲಾಗಿ ಗಂಗಜ್ಜನು ರಾಜದ್ರೋಹಿಯೆಂದು ಯಾರು ಹೇಳಿದರು ? ಈ ಸಣ್ಣ ತಮ್ಮನಲ್ಲವೆ ? (ಅವನನ್ನು ಬಲವಾಗಿ ಹೊಡೆಯುವನು.)

ದೇಸಾಯಿ—ಏ, ಇದಲ್ಲ, ನೀನು ನಡೆಯಬೇಕಾದ ರೀತಿ. ಈ ಗಂಗಜ್ಜನನ್ನು ಬಿಟ್ಟುಬಿಡು. ಅವನನ್ನು ಇಲ್ಲಿಯೇ ಹುಗಿಸಿಬಿಡುತ್ತೇನೆ.

ಚಿ. ಶ್ರೀಮಂತ—ಗಂಗಜ್ಜನ ಕೂದಲು ಕೊಂಕಿದರೆ ಇಲ್ಲಿ ರಕ್ತದ ಕಾಲುವೆ ಹರಿದೀತು. ತಂದೆಯವರಿಗೆ ಎಚ್ಚರಿಕೆಯಿರಲಿ.

ದೇಸಾಯಿ—(ಕೋಧದಿಂದ.) ಕಾರಭಾರಿಗಳೆ ! ರಾಜದ್ರೋಹಿಗಳ ಬೆನ್ನು ಕಟ್ಟಿದವರಿಗೆ ಯಾವ ಶಿಕ್ಷೆಯನ್ನು ವಿಧಿಸಬೇಕು ?

ಸಣ್ಣ ತಮ್ಮ—(ಸಿಟ್ಟಿನಿಂದ) ಅವರನ್ನು ಹಿಡಿದು ಹೆಡಮುರಿಗೆ ಬಿಗಿದು ಕತ್ತಲು ಕೋಣೆಯಲ್ಲಿ ಚೆಲ್ಲಬೇಕು.

ದೇಸಾಯಿ—ಹಾಗಾದರೆ ಹಿಡಿಯಿರಿ ಈ ದುಷ್ಟನನ್ನು. ಯಾರಲ್ಲಿ ? ಆ ಗಂಗಜ್ಜನು ಓಡಿಹೋಗುತ್ತಾನೆ. ಅವನನ್ನು ಬಿಟ್ಟುಗಿಟ್ಟೀರಿ. ಎಚ್ಚರಿಕೆ!

(ದೇಸಾಯಿ - ಸಣ್ಣ ತಮ್ಮರಿಬ್ಬರೂ ಚಿಕ್ಕ ಶ್ರೀಮಂತರನ್ನು ಹಿಡಿದು ಎಳೆಯುತ್ತಾರೆ.)

ಚಿ. ಶ್ರೀಮಂತ— (ಚೀರಿ) ಬಿಡಿರಿ ! ದೂರ ಸರಿಯಿರಿ ! ಅಯ್ಯೋ ! ನನ್ನನ್ನು ತಂದೆಯೇ ಕೊಲ್ಲುತ್ತಾನೆ. Murder ! Murder !

(ತೆರೆಯು ಬೀಳುತ್ತದೆ.)

---

## ಪ್ರವೇಶ ೬

(ಭೀಮಣ್ಣ ನಾಯಕರ ಮನೆಯ ಮುಂಚಿನ ಭಾಗ. ಕರಿಯಪ್ಪನೂ ಗಂಗಜ್ಜನೂ ಪ್ರವೇಶಿಸುವರು.)

ಕರಿಯ—ಹಾಗಾದರೆ ಬೇವಿನಹಳ್ಳಿಯ ಸ್ಥಿತಿಯು ಈ ಮನೆಗೆ ಬಂದಿದೆಯೆನ್ನು

ಗಂಗಜ್ಜ—ಹೌದು. ಧಣಿಯರನ್ನು ಕಾಣಲು ಈಗ ಹೊತ್ತಿಲ್ಲ, ಕರಿಯ ! ಇದನ್ನೆಲ್ಲ ನೀನು ಅವರಿಗೆ ತಿಳಿಸು.

ಕರಿಯ—ಚಿಕ್ಕ ಶ್ರೀಮಂತರನ್ನು ಇನ್ನೂ ಕೋಣೆಯಲ್ಲಿಯೇ ಇಟ್ಟಿರುವರೇನು?

ಗಂಗಜ್ಜ—ಹೌದು, ಕರಿಯ ! ನನ್ನನ್ನು ಪ್ರೀತಿಸಿದ್ದಕ್ಕೆ ಅವರಿಗೆ ಶಿಕ್ಷೆಯಾಗುವಂತೆ ಮಾಡಿದ ಆ ಸಣತಮ್ಮ ! ಇದರ ಸೇಡು ತೀರಿಸದಿದ್ದರೆ....

ಕರಿಯ—ಕಮಿಶಣರಿ ಸಾಹೇಬರು ಬರುವದು ಯಾವಾಗ ?

ಗಂಗಜ್ಜ—ಬರಬಹುದು ಇಷ್ಟರಲ್ಲಿಯೆ.

ಕರಿಯ—ಆ ಸಣತಮ್ಮನ ದಿನಗಳು ಸಮೀಪಿಸಿವೆ, ಗಂಗಜ್ಜ ! ಅವನು ಇನ್ನು ಬುಡಮೇಲಾಗುವದು ತಡವಿಲ್ಲ. ಮೊನ್ನೆ ನಮ್ಮ ಮೇಳದಲ್ಲಿ ಅವನ ವಿಷಯಕ್ಕೆ ಒಂದು ಪದವನ್ನು ಕೂಡಿಸಿದೆ.

ಗಂಗಜ್ಜ—ನೀನು ಬಿಡು ; ಪದ, ಬಯಲಾಟ,-ಸುಖವಾಗಿದ್ದೀಯೆ ! ಹೇಳು ನೋಡೋಣ, ಅದಾವ ಪದ ?

ಕರಿಯ—

ಹದಗಡಕನಿಗೇ ಪದವಿ ಬಂದರೆ
ಹಿಡಿಸಿದ ಹಗಲಲಿ ದೀವಟಿಗೆ ॥ ಪ ॥

ಕರಿಯ ಕಾಗೆಯು ಕಳಸವನೇರಲು
ಗರುಡಪಕ್ಷಿಯದು ಆದೀತೆ ?
ತಿರುಕನು ಪಲ್ಲಕ್ಕಿಯನೇರಿದರೆ
ವರದೊಡ್ಡಿಸ್ತನ ಬಂದೀತೆ ? ॥ ೧ ॥

ಮುತ್ತಲಹೂವದು ಮೋಹಕವಿದ್ದರು
ಉತ್ತಮಾಂಗದಲಿ ಮೆರೆದೀತೆ ?
ರತ್ನವು ಫಣಿಯೊಳಗಿದ್ದರು ಸರ್ಪದ
ಕೆಟ್ಟ ವಿಷವು ತಾ ಹೋದೀತೆ ? ॥ ೨ ॥

ಶ್ವಾನದ ಬಾಲವೆ ಲಳಿಗೆಯೊಳಿಟ್ಟರೆ
ಮಾಣದೆ ಸರಳವದಾಗೀತೆ ?
ಧ್ಯಾನದೊಳಿದ್ದರು ಬಕವು ಗಪ್ಪನೆ
ಮೀನ ನುಂಗುವದು ಬಿಟ್ಟೀತೆ ॥ ೩ ॥

ಗಂಗಜ್ಜ—ನನ್ನ ಮೈಯೆಲ್ಲ ಉರಿಯುತ್ತಿದೆ, ಕರಿಯ ! ನೀನು ಪುಣ್ಯವಂತನಿದ್ದೀಯೆ. ಅಂತೆಯೇ ಹಾಡು ಹಾಡಿದೊಡನೆ, ಆಟವಾಡಿದೊಡನೆ,

ನಿನ್ನ ಕಿಚ್ಚು ಆರುತ್ತದೆ. ಆದರೆ, ನನ್ನ ಕಿಚ್ಚು ಮಾತ್ರ-ಭುಗಿಲ್ಲನೆ ಏಳುತ್ತದೆ. ಆ ನೀಚನ ತಲೆ ಹೊಡೆಯದ ಹೊರತು....ಸರಿ ಈಗ ಹೋಗುತ್ತೇನೆ.

ಕರಿಯ—ತುಸು ನಿಲ್ಲು, ಏ ಗಂಗಜ್ಜ! ನಾನೂ ಊರ ಅಗಸೆಯವರೆಗೆ ಬರುತ್ತೇನೆ. ತುಸು ತಡೆ.

(ಇಬ್ಬರೂ ಹೋಗುವರು.)

———

# ಅಂಕ ೪

## ಪ್ರವೇಶ ೧

(ಇಂಚಲಾಪುರದಲ್ಲಿ ಭೀಮಣ್ಣನಾಯಕನ ಮನೆ. ಭೀಮಣ್ಣನಾಯಕನು ಸುಖಾಸನದ ಮೇಲೆ ಕುಳಿತಿದ್ದಾನೆ. ಹತ್ತಿರ ಸುಭದ್ರಾಬಾಯಿಯು ಹೆಣಿಗೆ ಹಾಕುತ್ತ ಕುಳಿತಿದ್ದಾಳೆ.)

ಭೀಮಣ್ಣ—ಎಲ್ಲಿಗೆ ಬಂದಿತು ಆ ಕಸೂತಿಯ ಅಂಗಿ. ಎಲ್ಲಿ ನೋಡೋಣ? ಮುಗಿದಿದೆಯಲ್ಲ. ಎಷ್ಟು ಅಂದವಾಗಿದೆ! ಅಂಗಿಯೇ ಇಷ್ಟು ಚೆಂದವಾಗಿದ್ದ ಮೇಲೆ ಇನ್ನು ಇದನ್ನು ತೊಡುವ ಕೂಸು ಹೇಗಿರಬೇಕು?

ಸುಭದ್ರಾ—ನಾನೊಲ್ಲೆ, ಹೀಗೆ ಮಾಡಿದರೆ. ಅತ್ತೆಯವರು ಕಸೂತಿ ಹಾಕಬೇಕೆಂದು ದಿನಬೆಳಗಾದರೆ ಹೇಳುವದೊಂದು, ಹಾಕುವದನ್ನು ಕಂಡು ಚೇಷ್ಟೆ ಮಾಡುವ ನಿಮ್ಮ ರೀತಿ ಇನ್ನೊಂದು. ಹೀಗೆ ಮಾಡಿದರೆ ನಾನಂತೂ ಹಾಕುವದಿಲ್ಲ. ನೀವೇ ಕಸೂತಿ ಹಾಕಿರಿ, ಅಂಗಿಯನ್ನು ಹೊಲಿಯಿರಿ, ಅತ್ತೆಯವರಿಗೆ ತೋರಿಸಿರಿ! (ಮತ್ತೆ ನಾಯಕರ ಕಡೆಗೆ ಸರಿಸುತ್ತಾಳೆ)

ಭೀಮಣ್ಣ—ಅಬ್ಬಾ! ಎಷ್ಟು ಕೋಪ! ಎಷ್ಟು ಸೆಡವು! ಸಿಟ್ಟು ಬಂದು ಮೂಗಿನ ಮೇಲೆಯೇ ಕೂತಿರುತ್ತದೆ. ಇಕಾ, ಬಂತು ನೋಡು! ಬಂತು!

ಸುಭದ್ರಾ—(ಮುಗುಳು ನಗೆ ನಕ್ಕು) ನಾನೊಲ್ಲೆ, ಹೀಗೆ ನಗೆಯಾಡಿದರೆ. ನಿಮ್ಮಲ್ಲಿ ಸಿಟ್ಟು ಮಾತ್ರ ಎಳ್ಳಷ್ಟಾದರೂ ಇಲ್ಲ. ಬೇವಿನಹಳ್ಳಿಗೆ ಹೋಗಬೇಡಿರೆಂದರೆ, ಸಿಟ್ಟು. ಹಬ್ಬವನ್ನು ಮುಗಿಸಿಕೊಂಡು ಹೋಗಿರೆಂದರೆ ಸಿಟ್ಟು. ಆ ಜನರ ಉಸಾಬರಿಯನ್ನು ಬಿಟ್ಟು ಬಿಡಿರೆಂದರೆ, ಬೆಂಕಿ ಸಿಟ್ಟು! ಇಷ್ಟೆಲ್ಲ ಸಿಟ್ಟು ನಿಮ್ಮ ಹತ್ತಿರವಿಟ್ಟುಕೊಂಡು, ಉಳಿದವರ ಕಡ್ಡಿಯಂತಹ ಸಿಟ್ಟನ್ನು ಅಲುಗಾಡಿಸಿ ನೋಡಿದರೆ ಕೀರ್ತಿ ಬಂತೆ?

ಭೀಮಣ್ಣ—ಅಲ್ಲೇ, ನಿನ್ನ ಬಾಲಸೂರ್ಯನು ಮೂಡಲಿರುವ ಸೂಚನೆಯನ್ನು ಗಲ್ಲಗಳ ಈ ಕೆಂಪು ಕೊಡುತ್ತಲಿದೆ. ಅವನನ್ನು ಮುಚ್ಚಿ

ಗೆಯ್ಯುವ ಹಸನ್ಮುಖವು ನನಗಿಲ್ಲಿ ಪ್ರತಿಮುಖವಾಗಿ ನಿಂತಿದೆ. ಅವನ ನಲುಮೆಯಾಳವನ್ನು ಅಳೆಯುವ ಕಣ್ಣುಗಳು ನನ್ನನ್ನು ಎವೆಯಿಕ್ಕದೆ ನಿರಿಕಿಸುತ್ತವೆ. ಸುಭದ್ರಾ, ಬಲು ಚೆಲುವೆ, ನೀನು ಬಲು ಚೆಲುವೆ ನೋಡು.

ಸುಭದ್ರಾ—ಸಾಕು. ಸಾಕು. ನಿಮ್ಮ ಕೆಲಸವೆಲ್ಲ ತಣ್ಣಗಾದಾಗ ನಿಮ್ಮ ಬಣ್ಣ ನೆಗೆ ಸುರುವಾಗುತ್ತದೆ. ಮನೆಯಲ್ಲಿ ಕುಳಿತಿರೆಂದರೆ ಪುಸ್ತಕಗಳನ್ನೋದು ವದು. ಓದಿದರೆಂದರೆ, ವರ್ಣನೆಗೆ ಪ್ರಾರಂಭ ಮಾಡುವದು.

ಭೀಮಣ್ಣ—ಅಲ್ಲ, ಏ, ಸುಭದ್ರಾ ! ಇದು ಬರೀ ಪುಸ್ತಕಪಾಂಡಿತ್ಯವೆಂದು ತಿಳಿದೆಯಾ ? ಎಷ್ಟು ಪುಸ್ತಕಗಳನ್ನೋದಿದರೇನು ? ಪ್ರೀತಿಯ ಪಾಠ ವನ್ನು ಕಲಿತರೆ ನಿನ್ನಿಂದ ಕಲಿಯಬೇಕು. ನಾನು ದೇವರಲ್ಲಿ ಒಂದೇ ಒಂದು ಹರಕೆ ಹೊತ್ತಿದ್ದೇನೆ. ಅದೇನು ಗೊತ್ತಿದೆಯೆ ?

ಸುಭದ್ರಾ—(ನಕ್ಕು) ಗೊತ್ತಿರದೆ ಏನು ? 'ಸರ್ವೇ ಜನಾಃ ಸುಖಿನೋ ಭವಂತು' ಎಂದು ದಿನಾಲು ಹೇಳುತ್ತೀರಲ್ಲ ? ಅದೇ ಇದ್ದೀತು ಮತ್ತೇನು ?

ಭೀಮಣ್ಣ—ಅಲ್ಲ. ಸುಭದ್ರಾ ! ನೀನು ಮಾತಿನ ಚದುರೆ ನೋಡು ! ನೀನು ಹೇಳಿದ ಪ್ರಾರ್ಥನೆಯು ನಾನು ಜನತಾಜನಾರ್ದನನಿಗೆ ಮಾಡಿ ಕೊಂಡಿದ್ದು. ಆದರೆ ನನ್ನ ಸಲುವಾಗಿ ನನ್ನ ದೇವರಿಗೆ ನಾನು ಮಾಡುವ ಪ್ರಾರ್ಥನೆ ಬೇರೆಯಾಗಿದೆ.

ಸುಭದ್ರಾ—ನಿಮ್ಮ ಸಲುವಾಗಿ ! ನಿಮ್ಮ ದೇವರಿಗೆ ! ಒಲ್ಲೆ, ನಮ್ಮಪ್ಪಾ ! ನಿಮ್ಮ ಮಾತೆ ತಿಳಿಯುವುದಿಲ್ಲ ನನಗೆ. ಆ ದೇವರು, ಈ ದೇವರು, ನನಗೆ ಗೊತ್ತಿದ್ದ ದೇವರು ಒಬ್ಬನೇ ಒಬ್ಬ. ಎರಡನೆಯವನನ್ನು ಎಲ್ಲಿಂದ ತಂದಿರಿ ?

ಭೀಮಣ್ಣ—ಹಾಗಲ್ಲ, ಹುಚ್ಚೀ ! ದೇವರಿಗೆ ಅನೇಕ ರೂಪಗಳಿರುತ್ತವೆ. ಬೇರೆ ಬೇರೆ ಗುಣಗಳಿರುತ್ತವೆ. ನಾನು ಹೇಳಿದ ಪ್ರಾರ್ಥನೆಯು ನಮ್ಮ ಕುಲದೇವರಿಗೆ ಮಾಡಿಕೊಂಡಿದ್ದು.

ಸುಭದ್ರಾ—ಬದಾಮಿಯ ಬನಶಂಕರಿಗೋ, ನೀವು ಹೇಳುವದು ? ಬೇಡಿ ಕೊಂಡಿದ್ದೀರಿ, ಆ ದೇಸಾಯಿಯನ್ನು ಹಾಳು ಮಾಡಿ ಹತ್ತೀ ಬಿತ್ತಿ

ನಾವು ಮತ್ತೆ ಬೇವಿನಹಳ್ಳಿಗೆ ಹೋಗುವಂತೆ ಮಾಡೂ,-ಎಂದು !

ಭೀಮಣ್ಣ—ಹಾಳಾಗಲಿ ಆ ದೇಸಾಯಿ. ನನ್ನ ಬೇಡಿಕೆ ಬೇರೆಯಿದೆ, ಸುಭದ್ರಾ ! ನಿನ್ನಲ್ಲಿ ಬೆರೆತು ಪ್ರೀತಿಸಿದ ನನಗೆ ಜನ್ಮಜನ್ಮಾಂತರದ ಬಯಕೆಯೊಂದು ಫಲಿಸಿತು. ಅದು ಅವಿರಳವಾಗಿ ಇರಲಿ, ಅದಕ್ಕೆ ಬಾಧೆ ತಟ್ಟದಿರಲಿ. ಎಂದು ಅನನ್ಯವಾಗಿ ಬಿನ್ನವಿಸಿಕೊಂಡೆ.

ಸುಭದ್ರಾ—(ವ್ಯಂಗ್ಯವಾಗಿ ನಕ್ಕು) ಹೂಂ, ಇರಬಹುದು ! ಅದಕ್ಕಂತೇ ಬನ ಶಂಕರಿಯು ನಮ್ಮಿಬ್ಬರನ್ನು ಈ ಬನದಲ್ಲಿ ತಂದು ಕೂಡಿಸಿದ್ದಾಳೆ. ಆ ಜನ್ಮಜನ್ಮಾಂತರದ ವಿಷಯವೇನು ? ಹಿಂದೆ ನಮಗೂ ನಿಮಗೂ ಜನ್ಮ ವೊಂದು ಬೇರೆ ಇತ್ತೇ ?

ಭೀಮಣ್ಣ—ಅದಕ್ಕೆ ದೂರ ಹೋಗಬೇಕಾದುದಿಲ್ಲ, ಸುಭದ್ರಾ. ಇಲ್ಲಿಯೇ ಅವ್ವನಿಗೆ ಕೇಳಿದರೆ ಮನುಷ್ಯನಿಗೆ ಪುನರ್ಜನ್ಮವಿರುವದೋ ಇಲ್ಲೋ ತಿಳಿದು ಹೋಗುತ್ತದೆ.

ಸುಭದ್ರಾ—ಅವರು ಬಿಡಿರಿ. ಪುರಾಣವನ್ನು ಕೇಳಿ ಕೇಳಿ ಬಹುಶ್ರುತರಾಗಿ ದ್ದಾರೆ. ಅವರನ್ನು ಕೇಳುವದೆಂದರೆ ಒಪ್ಪಿಕೊಂಡಂತೆಯೆ ಸರಿ.

ಭೀಮಣ್ಣ—ಹೇಳಲಿಯಾ, ಅವ್ವನಿಗೆ ? ನಗೆಯಾಡುತ್ತೀಯಾ ? (ಕಳ್ಳ ದನಿಯಿಂದ) ಏ, ಅವ್ವಾ, ಇಲ್ಲಿ ನೋಡು. ನೀನು ಪುರಾಣವನ್ನು ಕೇಳುವಿಯೆಂದು ಈಕೆ ಛೇಡಿಸುತ್ತಾಳೆ.

ಸುಭದ್ರಾ—(ಕೈಮಾಡಿ) ಬೇಡಿರಿ, ಬೇಡಿರಿ ಹೀಗೆ ಛಾಡಿ ಹೇಳುವದನ್ನು ಯಾರು ಕಲಿಸಿದರು ? ಕೇಳಿದರೆ ಅತ್ತೆಯವರು ನನ್ನನ್ನು ಮನೆಯಲ್ಲಿ ಇರಗೊಡಲಿಕ್ಕಿಲ್ಲ.

ಭೀಮಣ್ಣ—ಹಾಗಾದರೆ ಪುನರ್ಜನ್ಮವನ್ನು ನಂಬುವಿಯೋ ಇಲ್ಲೊ ?

ಸುಭದ್ರಾ—ನಂಬುವೆನು, ಮಹಾರಾಯರೆ. ನಂಬಿ ಸಾಷ್ಟಾಂಗ ಹಾಕುವೆನು.

ಭೀಮಣ್ಣ—ಏ, ಇಲ್ಲಿ ನೋಡು. ಒಂದು ಮೋಜು ಮಾಡುತ್ತೇನೆ.

ಸುಭದ್ರಾ—ಮತ್ತೇನು ಮೋಜು ತೆಗೆದಿರಿ ನೀವು ?

ಭೀಮಣ್ಣ—ಅವ್ವನಿಗೆ ಈ ಕಸೂತಿ ಅಂಗಿಯನ್ನು ತೋರಿಸಿ, ಹೇಗಿದೆಯೆಂದು ಕೇಳುತ್ತೇನೆ.

ಸುಭದ್ರಾ—ಬೇಡ, ಮಹಾರಾಯರೆ. ಮತ್ತೆ ನನ್ನನ್ನು ಬಯ್ಯಿಸುವಿರಿ,

ಊಹುಂ. ಇಲ್ಲಿ ಕೊಡಿರಿ.

ಭೀಮಣ್ಣ—(ಕಸಿದುಕೊಂಡು) ಏ, ಅವ್ವಾ, ಅವ್ವಾ, ಇಲ್ಲಿ ಬಾ.

ಸುಭದ್ರಾ—ಸಾಕಾಯಿತು ನಿಮ್ಮ ಉಚ್ಚಾಟನೆ ! (ಮೂಲೆಯಲ್ಲಿ ಹೋಗಿ ನಿಲ್ಲು ತ್ತಾಳೆ.)

ಲಕ್ಷ್ಮಮ್ಮ— (ಒಳಗಿನಿಂದ ಬರುತ್ತ) ಯಾಕಪ್ಪಾ, ಭೀಮೂ ? ಮತ್ತೇಕೆ ಒದರಿಕೊಂಡಿ ? ಇದೇ ಸ್ವಲ್ಪ ಅಡ್ಡಾಗಬೇಕೆಂದರೆ ಪುರಸತ್ತಿಲ್ಲ. ದಿನ ಬೆಳಗಾದರೆ ಗಂಡ-ಹೆಂಡಿರು ನೀವು ಜಗಳಾಡಿ ದಣಿಯುತ್ತೀರಿ. ಯಜಮಾನರೊಡನೆ ನಾನು ಸಂಸಾರ ಮಾಡಿದ ರೀತಿಯನ್ನು ನೋಡಿ ದರೆ ಏನೆನ್ನುತ್ತಿದ್ದಿರೋ ಏನೊ ! ಅವರು ಅಡಿಗೆ ಮನೆಯಲ್ಲಿದ್ದರೆ ನಾನು ದೇವರ ಮನೆಯಲ್ಲಿರುತ್ತಿದ್ದೆ. ಅವರು ದೇವರ ಮನೆಯಲ್ಲಿ ಪೂಜೆ ಮಾಡುತ್ತಿದ್ದರೆ ನಾನು ನಡುಮನೆಯಲ್ಲಿ ಕಸ ಗುಡಿಸುತ್ತಿದ್ದೆ. ಏನೋ ತಾಯಿ, ಕಾಲವೇ ತಿರುಗಿದೆ. ಏನಪ್ಪಾ, ಏನು ? ಯಾಕೆ ಒದರಿಕೊಂಡಿ ?

ಭೀಮಣ್ಣ—ಏನೂ ಇಲ್ಲ, ಅವ್ವ. ಈಕೆ ಅಂಗಿಗೆ ಕಸೂತಿ ಹಾಕುವದು ಮುಗಿದಿತ್ತು. ಹೇಗಾಗಿದೆ ನೋಡೂ, ಎಂವೆ.

ಲಕ್ಷ್ಮಮ್ಮ—ಎಲ್ಲಿ ನೋಡೋಣ ? ಈಕೆ ಎಲ್ಲಿದ್ದಾಳೆ ? ಏನೇ ಆ ಮೂಲೆ ಯಲ್ಲೇಕೆ ಹೋಗಿ ನಿಂತಿ ? ಬಾ, ಇಷ್ಟೊಂದೇಕೆ ನಾಜೂಕು ? ಅಯ್ಯ ! ಎಷ್ಟು ಸಣ್ಣ ಅಂಗಿಯನ್ನು ಆರಿಸಿದೆಯೋ ನಮ್ಮವ್ವ ! ಇದು ಬೇಡವೆಂದು ಹೇಳಿದ್ದಿಲ್ಲವೇ ನಿನಗೆ ? ನಾಳೆ ಹುಟ್ಟುವ ಕೂಸಿಗೆ ಮೈ ತುಂಬ ಸಾಲಬಹುದೇ ಇದು ? ನಮ್ಮ ಮನೆಯಲ್ಲಿ ಹುಟ್ಟುವ ಹುಡುಗರು ಬೆಳೆದೇ ಬಂದಿರುತ್ತವೆ. ನಮ್ಮ ಭೀಮು ಹುಟ್ಟಿದಾಗ ಮರ ಹಿಡಿಸುತ್ತಿರಲಿಲ್ಲ ಅವನಿಗೆ.

ಸುಭದ್ರಾ—(ನಗೆ ಹಿಡಿಸಲಾರದೆ ಬಾಯಿ ಮುಚ್ಚಿಕೊಂಡು) ಇಲ್ಲ. ನೀವು ಹೇಳಿದ ಅಂಗಿಗೇ ಕಸೂತಿ ಹಾಕಿದ್ದೇನೆ.

ಲಕ್ಷ್ಮಮ್ಮ—ಮತ್ತೆ ಭೀಮೂನ ಕುಲಾಯಿಯನ್ನು ಜತನದಿಂದ ಇಟ್ಟಿರು ವಿಯಾ ? ಭೀಮೂನ ಬಸಿರಿದ್ದಾಗ ನಾನೇ ಕುಳಿತು ಹೊಲಿದಿದ್ದೆ ಅದನ್ನು. ಇವತ್ತಿಗೂ ಮಾಸಿಲ್ಲ. ಹೊಸದು ಇದ್ದ ಹಾಗೇ ಇದೆ.

ಭೀಮಣ್ಣ—ಅದನ್ನು ಇನ್ನು ನಮ್ಮ ಕೂಸಿಗೆ ತೊಡಿಸಬೇಕೇನು, ಅವ್ವಾ !

ಲಕ್ಷ್ಮಮ್ಮ—ಯಾಕೆ ? ಅವಕ್ಕೇಕೆ ಇಷ್ಟು ನಗೆ ಬಂತು ? ನಿನ್ನಂತೆ ನಿನ್ನ ಮಗುವೂ ಚಿರಂಜೀವಿಯಾಗಲಪ್ಪಾ ! (ತಲೆಗೆ ಎರಡೂ ಕೈಹಚ್ಚಿ ಲಟಕು ಮುರಿಯುವಳು.)

ಭೀಮಣ್ಣ—ಕರಿಯನ ಊಟವಾಯಿತೇ, ಅವ್ವ ?

ಲಕ್ಷ್ಮಮ್ಮ—ಆಗಿ ಎಷ್ಟು ಹೊತ್ತಾಯಿತು ! ಈಗ ಅಲ್ಲಿ ಗೋದಲಿಯ ಬಳಿಗೆ ಗೊರಕೆ ಹೊಡಿಯುತ್ತ ಬಿದ್ದಿರಬಹುದು ನೋಡು. ಅದೊಂದು ವಿಚಿತ್ರ ಆಳು ಗಂಟು ಬಿದ್ದಿದೆ ನಮಗೆ. ರಾತ್ರಿಯೆಲ್ಲ ಭಗವಂತರಾಟವನ್ನು ಗಟ್ಟಮಾಡಿ ಹಗಲೆಲ್ಲ ನಿದ್ದೆ ಹೊಡಿಯುವದು. ಅಂದು ನೀನು ಊರಿಗೆ ಹೋದಾಗ ರಾತ್ರಿಯೆಲ್ಲ ಬಡಬಡಿಸಿಯೇ ಬಡಬಡಿಸಿದ. ಕಳ್ಳರು ಬಂದರೂ ಎಚ್ಚರಿಕೆಯಿಲ್ಲ ಇವನಿಗೆ. ಮಾರಿಗೆ ಎಲ್ಲಾ ಪವಾರು ಬಡಕೊಂಡು ಕಿಟ್ಟ್ಯಾನ ದೀಪವೆದುರಿಗೆ ಕುಣಿಲಿಕ್ಕೆ ಹತ್ತಿದರ ಮಿಟಿ ಮಿಟಿ ಸ್ವರ್ಗ ಸಿಕ್ಹಂಗ ಆತು ಈ ಕಪಿಗೆ.

ಭೀಮಣ್ಣ—ಏ, ಕರಿಯು, ಇಲ್ಲಿ ಬಾ.

ಕರಿಯು—ಬಂದೆ, ದೇವರು.

ಭೀಮಣ್ಣ—ಮತ್ತಾವ ಆಟವನ್ನು ಹೂಡಿರುವಿರಿ ಈಗ ?

ಕರಿಯು—ಮತ್ತಾವುದೂ ಇಲ್ಲ, ಧಣಿಯರೆ ! ರಾಮ-ರಾವಣರ ಕಾಳಗವನ್ನೇ ನಾಳಿನ ಹುಣ್ಣಿಮೆಗೆ ಆಡಬೇಕೆಂದಿದ್ದೇವೆ.

ಸುಭದ್ರಾ—ಮತ್ತೆ ನೀನು ರಾವಣನಾಗುವಿ, ಹೌದಲ್ಲೊ !

ಕರಿಯು—(ನಕ್ಕು) ಹೌದು, ಬಾಯಿಯವರೆ.

ಭೀಮಣ್ಣ—ನಿನ್ನ ಆಟದ ಭರದಲ್ಲಿ ಅವ್ವನವರು ಹೇಳಿದ ಕೆಲಸಗಳನ್ನು ಮರೆಯಬೇಡ ಮತ್ತೆ.

ಕರಿಯ—ಇಲ್ಲ ದೇವರು.

ಭೀಮಣ್ಣ—ಒಳ್ಳೆಯದು. ಮತ್ತೇನು ವರ್ತಮಾನ ?

ಕರಿಯು—ಗಂಗಜ್ಜ ಬಂದಿದ್ದ, ಬುದ್ಧಿ. ಮುಂಚಿನಂತೆ ಮಿಂಚಿನ ಹಾಗೆ ಬಂದು ಹೋಗಿಬಿಟ್ಟ. ಅವನನ್ನು ನೋಡಿ ಹೆದರಿಕೆಯಾಯಿತು ನನಗೆ.

ಭೀಮಣ್ಣ—ಗಂಗಜ್ಜನು ಬರುವ ರೀತಿಯೇ ಅದು. ಮತ್ತೇನು ಹೇಳಿಹೋದ ?

ಕರಿಯ—-ಇಂದು ಮುಂಜಾನೆ ಚಿಕ್ಕ ಶ್ರೀಮಂತರು ಊರಿಗೆ ಬಂದರಂತೆ, ಧಣಿಯರೆ! ಬಂದವರೇ ಬಾಗಿಲಲ್ಲಿ ನಿಂತು ಒದರಾಡಹತ್ತಿದರಂತೆ. ಗಂಗಜ್ಜನನ್ನು ತಮ್ಮ ಆಳುಮಗನೆಂದು ಹೇಳಿ ಶ್ರೀಮಂತರೆದುರಿಗೆ ಒಯ್ದು ನಿಲ್ಲಿಸಿದರಂತೆ. ಬಾಯಿಗೆ ಬಾಯಿ ಹತ್ತಿ ಆ ಸಣತಮ್ಮನನ್ನು ಒಂದೇಟು ಹೊಡೆದರಂತೆ ಚಿಕ್ಕ ಶ್ರೀಮಂತರು. ಕಡೆಗೆ ಅವರನ್ನು ಶ್ರೀಮಂತರು ಹಿಡಿದು ಕತ್ತಲು ಕೋಣೆಯಲ್ಲಿ ಹಾಕುವಾಗ ತಾನು ತಪ್ಪಿಸಿಕೊಂಡು ಓಡಿ ಬಂದೆನೆಂದು ಗಂಗಜ್ಜನು ಹೇಳಿದನು.

ಲಕ್ಷ್ಮವ್ವ—ಅಯ್ಯ, ಮಗನನ್ನು ಆ ಹೊಲೆಯ ಈ ರೀತಿ ನಡೆಸಿ ಕೊಂಡನೇ!

ಭೀಮಣ್ಣ—ಶ್ರೀಮಂತರ ದಿನಗಳು ಈಗ ತುಂಬಿ ಬಂದಿವೆ, ಅವ್ವಾ. ಅವರಿಗೆ ಮಗನೂ ಈಗ ಶತ್ರುವಾಗಿದ್ದಾನೆ, ಗಂಗಜ್ಜನು ಮತ್ತೇನು ಹೇಳಿ ದನು, ಕರಿಯ ?

ಕರಿಯ—ಕಮೀಶಣರ ಸಾಹೇಬರು ಇಚಾರಣೆಗಾಗಿ ಬೇವಿನ ಹಳ್ಳಿಗೆ ಬರಲಿರು ವರಂತೆ, ಬುದ್ಧಿ.

ಲಕ್ಷ್ಮವ್ವ—ಯಾರು ? ಕಮೀಶಣರ ಸಾಹೇಬರೇ! ಮತ್ತೆ ನೀನು ಹೋಗ ಬೇಕೇನೋ ಭೀಮೂ ? ಇನ್ನು ಬೇಡ, ನಮ್ಮಪ್ಪ ! ನಮ್ಮ ಜೀವ ದಲ್ಲಿ ಜೀವವಿರುವದಿಲ್ಲ. ಕಮೀಶನರ ಬೇಡ, ಚಂಡಕನರ ಬೇಡ, ಯಾವ ನರೀನೂ ಬೇಡ.

ಭೀಮಣ್ಣ—ಅವರು ವಿಚಾರಣೆಗೆ ಬಂದರೆ ಅವರೆದುರು ನನ್ನ ಸಾಕ್ಷಿಯಾಗ ಬೇಕು, ಅವ್ವಾ. ಹೋದನೆ ಈಗ ಕಡೆಯ ಸಲ ಹೋದಂತೆಯೇ ಸರಿ. ಇನ್ನು ದೇಸಾಯರ ಅಳಿಗಾಲ-ಜನರ ಬೆಳೆಗಾಲ ಸಮೀಪಿಸಿತೆಂದು ತಿಳಿ.

ಲಕ್ಷ್ಮವ್ವ—ಏನೋ, ನಮ್ಮಪ್ಪಾ ! ಎಲ್ಲವೂ ನಿನಗೇ ಗೊತ್ತು. ದೇವರ ಮೇಲೆ ಭಾರ ಹಾಕಿ ನಾನು ಸುಮ್ಮನೆ ಕುಳಿತಿದ್ದೇನೆ. ಏನೇ ? ಮಾತು ಕೇಳುತ್ತ ಇನ್ನೂ ನೀನು ಇಲ್ಲಿಯೇ ಕುಳಿತಿದ್ದೀಯಾ ? ನಡೆ. ಇಂದು ಬಸಿರಿ, ನಾಳೆ ಬಾಣಂತಿ, ಇಂಥ ಮಾತು ಕೇಳಬಾರದುನೀನು?

(ಹೋಗವರು.)

---

## ಪ್ರವೇಶ ೨

(ಭೀಮಣ್ಣನಾಯಕನ ಮನೆಯ ಹಿತ್ತಲ. ತರತರದ ಹೂವಿನ ಗಿಡಗಳು ಬೆಳೆದಿರುತ್ತವೆ. ಸುಭದ್ರಾಬಾಯಿಯು ಹೂಗಿಡಗಳನ್ನು ನೋಡುತ್ತ ಪ್ರವೇಶಿಸುತ್ತಾಳೆ.)

ಸುಭದ್ರಾ—

ಕಂಡೀತ ಕನಸೊಂದು, ನಸುಕೀನ ಸವ್ವಾರ
ಹೊಂಗುದುರೆಯೇರಿ ಮುನ್ನಡೆದ.
ಹೊಂಗುದರೆಯೇರಿ ಮುನ್ನಡೆದ, ಪಾರ್ವತಿ !
ವಾರಧೀಯಲೀಸಿ ಮುಳುಗೀದ.

ಅಯ್ಯ ! ಇದೇನು ! ಉದಯಕಾಲದ ಹಾಡನ್ನು ಅಂದುಕೊಳ್ಳಬೇಕೆಂದರೆ ಸಂಧ್ಯಾಕಾಲದ ಗೀತವೊಂದು ಬಾಯಿಗೆ ಬರುವದು. ಇದನ್ನೆಲ್ಲ ಬಿಟ್ಟು ಮನಸಿನಲ್ಲಿದ್ದುದನ್ನು ಅಂದುಕೊಳ್ಳುವದೆ ಒಳ್ಳೆಯದು.

ಕಮಳದ ಹೂ ನಿನ್ನ ಕಾಣದೆ ಇರಲಾರೆ
ಮಲ್ಲಿಗೆ ಮಾಯೆ ಬಿಡಲಾರೆ.
ಮಲ್ಲೀಗೆ ಮಾಯೆ ಬಿಡಲಾರೆ ಕೇದೀಗಿ
ಗರಿ ನಿನ್ನನಗಲಿ ಇರಲಾರೆ !

ಇಲ್ಲಿ ನೋಡು. ಚಂದನಗಿಡವನ್ನು ಸುತ್ತಿದ ಮಲ್ಲಿಗೆಯನ್ನು ಹೀಗೆ ಬಿಡಿಸಿದವರಾರು ? ಏ, ಕರಿಯ, ಇಲ್ಲಿ ಬಾ. (ಬರುತ್ತಾನೆ.) ಇದನ್ನು ನೋಡು.

ಕರಿಯ—ಗೊತ್ತಿದೆ ಬಾಯಿಯವರೆ. ಇಷ್ಟರಲ್ಲಿ ನೆಟ್ಟಗೆ ಮಾಡುತ್ತಿದ್ದೆ ; ಆದರೆ ಮಂಗನ ಹಾವಳಿ ಹೆಚ್ಚಾಗಿದೆ ಊರಲ್ಲಿ.

ಸುಭದ್ರಾ—ಊರಲ್ಲಿಷ್ಟೇ ಏಕೆ ? ಜಗತ್ತಿನಲ್ಲಿಯೇ ಮಂಗನ ಹಾವಳಿ ಹೆಚ್ಚಾಗಿದೆ. ಅಲ್ಲಿ ನೋಡು. ಆ ಸಂಪಿಗೆ ಹೂವೆಲ್ಲ ನೆಲಕ್ಕೆ ಬಿದ್ದು ಹೊಲಸಾಗಿವೆ. ಆರಿಸಿಡು ಅವನ್ನು. ನಾನು ಬಂದು ಒಟ್ಟುಗೂಡಿಸುವೆನಂತೆ.

(ಹೋಗುವರು.)

---

## ಪ್ರವೇಶ ೩

(ಬೇವಿನಹಳ್ಳಿಯ ಧರ್ಮಶಾಲೆಯಲ್ಲಿ ಕಮೀಶನರು ಹಾಕಿದ ಆಫೀಸು. ಮೇಜಿನ ಹಿಂದೆ ಕುರ್ಚಿಯ ಮೇಲೆ ಕಮೀಶನರ ಸಾಹೇಬರು ಕುಳಿತಿದ್ದಾರೆ. ಅವರ ಎಡಕ್ಕೆ ದೇಸಾಯಿ, ಕಾರಭಾರಿಗಳೂ ಬಲಕ್ಕೆ ಭೀಮಣ್ಣನಾಯಕ, ಸಿದರಾಮ ಸೆಟ್ಟರೂ ಕುರ್ಚಿಯ ಮೇಲೆ ಕುಳಿತಿದ್ದಾರೆ. ಡ್ರೆಸ್ಸಿನಲ್ಲಿದ್ದ ಒಬ್ಬ ಸಿಪಾಯಿಯು ಬಾಗಿಲಲ್ಲಿ ಕಾಯುತ್ತಿರುವನು.)

ಕಮೀಶನರ್—ನಿಮಗೆ ಮತ್ತೇನು ಹೇಳುವದಿದೆ, ಭೀಮಣ್ಣನಾಯಕರೆ ? ಸಂಕೋಚವಿಲ್ಲದೆ ನಮ್ಮೆದುರಿಗೆ ಎಲ್ಲವನ್ನು ಹೇಳಬಹುದು. ಯೋಗ್ಯ ನ್ಯಾಯವನ್ನು ಕೊಡಲು ನಾವು ಸಮರ್ಥರಿದ್ದೇವೆ.

ಭೀಮಣ್ಣ—(ಎದ್ದುನಿಂತು) ಎಲ್ಲವನ್ನೂ ಸಾದ್ಯಂತವಾಗಿ ಅರಿಕೆ ಮಾಡಿ ಕೊಂಡಿದ್ದೇನೆ, ದೊರೆಗಳೆ. ನಾನೊಬ್ಬನೇ ಈ ದೂರನ್ನು ಸಾರಿದವ ನಲ್ಲ. ಜಾಗೀರಿನ ಎಲ್ಲ ಪ್ರಜೆಗಳ ಪ್ರತಿನಿಧಿಯಾಗಿ ತಮ್ಮೆದುರು ನಿಂತಿ ದ್ದೇನೆ. ನಾನೀಗ ಪ್ರತೀಕಾರ ಮಾಡುವದು ಶ್ರೀಮಂತರನ್ನಲ್ಲ,-ಅವರ ರೀತಿಗಳನ್ನು ; ಅವರ ಪ್ರಭುತ್ವವನ್ನಲ್ಲ,-ಅವರ ಮನೋವೃತ್ತಿಯನ್ನು ಸ್ವತಃ ನಾನು, ಈ ಸೆಟ್ಟರು, ಇನ್ನುಳಿದ ಅನೇಕರು,-ಇವರ ಅಂಕಿತ ದಲ್ಲಿ ಅನುಭೋಗಿಸಿದ ಯಾತನೆಗಳನ್ನು ಸಪ್ರಮಾಣವಾಗಿ ತಮ್ಮೆದುರು ಸಿದ್ಧಪಡಿಸಿದ್ದೇನೆ. ಶ್ರೀಮಂತರಿಂದ ಮಾನಹಾನಿ ಹೊಂದಿದ ಕುಟುಂಬಗಳ ಯಾದಿಯನ್ನು ತಮ್ಮಲ್ಲಿ ನಮೂದಿಸಿದ್ದೇನೆ. ತಾವೂ ಅವರನ್ನು ಕರೆಸಿ ಕೇಳಿಕೊಂಡಿದ್ದೀರಿ. ನನ್ನ ಮನೆಯ ಮೇಲೆ ಇವರು ದಾಳಿಯಿಟ್ಟ ಸಂಗತಿಯನ್ನು ಇವರ ಹಸ್ತಕರಾದ ದಾಳಿಗಾರರೇ ಹೇಳಿ ದ್ದಾರೆ. ತಾವೂ ಕೇಳಿದ್ದೀರಿ. ಈ ರೀತಿ ಜನರ ದ್ವೇಷಕ್ಕೆ ಪಾತ್ರರಾದ ಶ್ರೀಮಂತರು ಇನ್ನು ಮುಂದೆ ದೊರೆತನದಿಂದ ದೂರವಿರಬೇಕೆಂದೇ ನನ್ನ ಸವಿನಯ ವಿಜ್ಞಾಪನೆಯಿದೆ, ಸಾಹೇಬರೆ. ಅದರಿಂದ ಅವರಿಗೂ ಹಿತ, ಜನರಿಗೂ ಹಿತವಾದೀತು. ಶ್ರೀಮಂತರು ಇದಕ್ಕಾಗಿ ನನ್ನೂ ಮೇಲೆ ಕೋಪಿಸಬಹುದು. ಉಪಾಯವಿಲ್ಲ. ಸತ್ಯಕ್ಕೆ ಸಾವಿಲ್ಲ, ಬಾಂಧವ್ಯವಿಲ್ಲ, ಶ್ರೀಮಂತ-ಬಡವರೆಂದು ಭೇದವಿಲ್ಲ. ಸತ್ಯವು ಅನಂತ ಕಾಲಕ್ಕೂ ಸತ್ಯವೇ ಆಗಿದೆ.

ಕಮೀಶನರ್—ಮತ್ತೆ ಈ ಕಾರಬಾರಿಗಳ ವಿಷಯ,-ಅವರ ಬಗ್ಗೆ ನಿಮಗೆ ಮತ್ತೇನಾದರೂ ಹೇಳುವದಿದಿಯೆ ?

ಭೀಮಣ್ಣ—ಇದೆ, ದೊರೆಗಳೆ. ಇವರ ಹಿಂದಿನ ಕಾರಭಾರಿಗಳನ್ನು ನೆನೆದರೆ ಮನದ ಪಾಪವೆಲ್ಲ ಬಯಲಾಗಬೇಕು. ಈ ಹೊಸ ಕಾರಭಾರಿಗಳನ್ನು ನೋಡುವದೆಂದರೆ ನಮ್ಮ ಪುಣ್ಯಕ್ಕೆ ಕ್ಷಯ ಹತ್ತಿದಂತೆ. ಕಾರಕೂನರಿದ್ದಾಗಲೆ ಇವರು ಶ್ರೀಮಂತರ ಮನಸ್ಸಿನಲ್ಲಿ ವಿಷಬೀಜವನ್ನು ಬಿತ್ತಿದ್ದರು. ಅವರಿಗೆ ಸುಖದ ಲಾಲಸೆ ಹಚ್ಚಿದರು. ಸನ್ಮಾರ್ಗದಿಂದ ಅವರನ್ನು ದುರ್ಮಾರ್ಗಕ್ಕೆಳೆದರು. ಅವರ ಹಿರಿಯರ ವಿರುದ್ಧವಾಗಿ, ಅನುಭವಿಗಳಾದ ಕಾರಭಾರಿಗಳ ವಿರುದ್ಧವಾಗಿ, ಬಂಡೆಬ್ಬಿಸಲು ಕಿವಿ ಚುಚ್ಚಿದರು. ಅನೇಕ ಸಂಸಾರಗಳನ್ನು ಮಣ್ಣುಗೂಡಿಸಿದರು. ಒಡೆಯರಿಗೂ ಅದರ ಸವಿ ಹಚ್ಚಿದರು. ಗಂಗಜ್ಜನ ಉದಾಹರಣೆಯು ತಮ್ಮ ಕಣ್ಣೆದುರಿಗೇ ಇದೆ ; ಹೆಚ್ಚಿಗೆ ಹೇಳುವ ಕಾರಣವಿಲ್ಲ. ಕಾರಭಾರಿ ರಾಮಣ್ಣನವರನ್ನು ಇವರೇ ವಿಷಹಾಕಿ ಕೊಂದರೆಂದು ಜನರಾಡಿಕೊಳ್ಳುವದುಂಟು, ದೊರೆಗಳೆ ! ಇಷ್ಟೆಲ್ಲ ಕೀರ್ತಿಯನ್ನು ಗಳಿಸಿದ ಇವರು ಕಾರಭಾರಿಗಳಾದ ಮೇಲೆ ಜನರ ಸ್ಥಿತಿಯು ಏನಾಗಿರಬಹುದೆಂಬುದನ್ನು ತಾವೇ ಊಹಿಸಬೇಕು. ಶ್ರೀಮಂತರಿಂದಾದ ಅನ್ಯಾಯಗಳಲ್ಲಿ ಒಂದು ಪಾಲು ಅವರದು ; ನೂರು ಪಾಲಿಗೆ ಇವರೇ ಹೊಣೆಗಾರರು. ಹುಲ್ಲುಗಾವಲಿನಲ್ಲಿ ಹಾವಿದ್ದಂತೆ ಊರಲ್ಲಿ ಇವರು ತಂತ್ರ ನಡೆಸೆದರು. ದ್ವೇಷದಿಂದ ಮಾತನಾಡಬಾರದೆಂದು ನಾನು ಸಂಕಲ್ಪಿಸಿದ್ದೇನೆ. ತೀರ್ಪು ಕೊಡಲು ತಾವೂ ಸಮರ್ಥರಿದ್ದೀರಿ. ಆದರೂ ಹೇಳುತ್ತೇನೆ,-ಇಂಥ ನೀಚರಿಗೆ ದೇಹಾಂತ ಶಿಕ್ಷೆಯನ್ನು ವಿಧಿಸಬೇಕು.

ಸಣತಮ್ಮ—(ಎದ್ದು ನಿಂತು) ಸಾಹೇಬರೆ, ಇದೊಂದು ಒಳಸಂಚು. ನಮಗಾಗದವರು........

ಕಮೀಶನರ್—ಹುಶಾರ್, ಕಾರಬಾರಿಗಳೆ ! ನಿಮಗೆ ಮಾತನಾಡಲು ನಾನೀಗ ಔತಣವನಿತ್ತಿಲ್ಲ.

ಸಣತಮ್ಮ—ಹಾಗೇ ಆಗಲಿ, ಸಾಹೇಬರೆ. (ಕುಳಿತುಕೊಳ್ಳುವನು)

ಕಮೀಶನರ್—ನಿಮಗೆ ಮತ್ತೇನಾದರೂ ಹೇಳುವದಿದೆಯೇನು, ಸೆಟ್ಟರೆ ?

ಸೆಟ್ಟಿ—(ಎದ್ದು ನಿಂತು) ದೊರೆಗಳೆ. ಮತ್ತೇನೂ ಇಲ್ಲ, ನಾಯಕರು ಹೇಳಿದ್ದನ್ನೆಲ್ಲ ನಾನು ಮತ್ತೆ ಜಗ್ಗಿ ಹೇಳುತ್ತೇನೆ. ನೀವು ಗನವಂತರು; ಸತ್ಯತೆ-ಮಿತ್ಯತೆಯನ್ನು ಸಾರಾಸಾರವಾಗಿ ವಿಚಾರ ಮಾಡುವವರು; ಸುಜನ-ಕುಜನರನ್ನು ಕಂಡುಹಿಡಿಯುವವರು; ಬೂತ-ಬವಿಷ್ಯವನ್ನು ಬಲ್ಲವರು. ಹಂಸಕ್ಷೀರನ್ಯಾಯದಂತೆ ತಪ್ಪುಗಾರರನ್ನು ಕಂಡು ಧಂಡಿಸಬೇಕು, ಮಹಾ ಪ್ರಭೊ! (ಕೈ ಮುಗಿಯುವನು)

ಕಮೀಶನರ್—ಒಳ್ಳೆಯದು. ನೀವಿಬ್ಬರೂ ಇನ್ನು ಹೋಗಬಹುದು. ಇಷ್ಟರಲ್ಲಿಯೇ ನನ್ನ ನಿರ್ಣಯವು ನಿಮಗೆ ತಿಳಿದುಬಂದೀತು. ನಮ್ಮ ಸರಕಾರಕ್ಕೆ ನ್ಯಾಯವು ಸೇರುತ್ತದೆಂಬುದನ್ನೂ ಲಕ್ಷ್ಯದಲ್ಲಿಡಿರಿ.

ಇಬ್ಬರೂ—ಆಗಲಿ, ದೊರೆಗಳೆ. (ಹೋಗುವರು)

ಕಮೀಶನರ್—ಶ್ರೀಮಂತರೆ!

ದೇಸಾಯಿ—(ಸುಮ್ಮನಿರುವನು)

ಕಮೀಶನರ್—ಶ್ರೀಮಂತರೆ! ನಿಮಗೆ ಮತ್ತೇನಾದರೂ ಹೇಳುವದಿದೆಯೆ?

ದೇಸಾಯಿ—ಸಾಹೇಬರೆ! ನನ್ನಿಂದ ಕೆಲವು ತಪ್ಪುಗಳಾಗಿರಬಹುದು. ಯಾರಿಂದ ತಪ್ಪಾಗುವುದಿಲ್ಲ? ಆದರೆ ಇವರು ತಂದ ಆರೋಪವೆಲ್ಲ ಶುದ್ಧ ಸುಳ್ಳೆಂದು ಸಾರಿ ಹೇಳುತ್ತೇನೆ. ನನಗಾಗದವರು ಮಾಡಿದ ಮೋಸವಿದು. ನಮ್ಮ ವರ್ಚಸ್ಸನ್ನು ಜನರ ಕಣ್ಣಲ್ಲಿ ನೀವು ಉಳಿಸಬೇಕು. ಹೀಗೆ ಕಿತ್ತೊಗೆಯಬಾರದು. ಅದು ಸರಕಾರಕ್ಕೂ ಹಿತಕಾರಿಯಲ್ಲ. ನಾನು ಈ ಊರಿಗೆ ಮಾಡಿದ ಕಲ್ಯಾಣವನ್ನಾದರೂ ನೆನೆಸಿರಿ. ಗುಡಿಗಳನ್ನು ಕಟ್ಟಿಸಿದ್ದೇನೆ. ಕೆಂಪು ಹಂಚಿನ ಬಂಗಲೆಗಳು ಊರಿಗೆ ಹೊಸ ಕಳೆಯನ್ನೇ ತಂದಿವೆ. ನಾನು ವಯಸ್ಸಿಗೆ ಬಂದ ಮೇಲೆ ಇಲ್ಲಿ ರಹದಾರಿಗಳಾದವು, ಧರ್ಮಶಾಲೆಗಳಾದವು. ಈ ಎಲ್ಲ ಶ್ರೇಯಸ್ಸಿನಲ್ಲಿ ಈ ನನ್ನ ಕಾರಭಾರಿಗಳೂ ಭಾಗಿಗಳಾಗಿದ್ದಾರೆ. ಇಂಥವರ ಮೇಲೆ ಆರೋಪ! ಸಾಹೇಬರೆ, ಇದಕ್ಕಿಂತ ಹೆಚ್ಚಿಗೆ ಅನ್ಯಾಯ ವಾವುದು?

ಕಮೀಶನರ್—ಶ್ರೀಮಂತರೆ, ನೀವು ಮಾಡಿದ ಸುಧಾರಣೆಗಳು ಸ್ತುತ್ಯವಾಗಿವೆ. ಅವುಗಳ ಯೋಗ್ಯವಿಚಾರವನ್ನೂ ಮಾಡಲಾಗುವದು. ಆದರೂ

ಶ್ರೀಮಂತರೆ, ನೀವು ಇಲ್ಲಿ ವರ್ತಿಸಿದಂತೆ ನಮ್ಮ ದೇಶದಲ್ಲಿ ವಿಲಾಯತಿಯಲ್ಲಿ—ವರ್ತಿಸಿದ್ದರೆ ಏನಾಗುತ್ತಿದ್ದಿತೆಂಬುದು ಗೊತ್ತಿದೆಯೆ ?

ದೇಸಾಯಿ—ಇಲ್ಲ, ಸಾಹೇಬರೆ !

ಕಮೀಶನರ್— (ಎದ್ದು ನಿಂತು ಒಳಕಿಸೆಯಿಂದ ಪಿಸ್ತೂಲನ್ನು ತೆಗೆದು) ನಿಮ್ಮನ್ನು ಒಂದು ನಿಮಿಷದಲ್ಲಿ-ಹೀಗೆ-ಇಲ್ಲದಂತೆ ಮಾಡುತ್ತಿದ್ದರು. ಇಲ್ಲವೆ ವಧಃಸ್ಥಾನಕ್ಕೊಯ್ದು ಊರ ಜನರೆದುರಿಗೆ ಕುತ್ತಿಗೆ ಕೊಯ್ಯುತ್ತಿದ್ದರು. ಆದರೆ ಇದು ನಮ್ಮ ದೇಶವಲ್ಲ. ನಿಮ್ಮ ಹಿಂದೂಸ್ಥಾನವಿದೆ. ನಿಮಗೆ ಜೀವದಾನ ಕೊಟ್ಟಿದ್ದೇನೆ.

(ಕುಳಿತುಕೊಳ್ಳುತ್ತಾನೆ. ಇಬ್ಬರೂ ಹೊರಡಲನುವಾಗುವರು.)

ಕಮೀಶನರ್—ಕಾರಬಾರಿಗಳೆ ! ನಿಮಗೆ ಹೋಗಲು ನಾನು ಅಪ್ಪಣೆಯನ್ನು ಕೊಡಲಿಲ್ಲ. ಇನ್ನೂ ನಮ್ಮ ನಿಮ್ಮ ಮಾತುಕತೆಗಳಾಗಬೇಕು.

ಸಣ್ಣತಮ್ಮ—ಆಗಲಿ, ಹುಜೂರರ ಹುಕುಮಿನಂತೆ ನಡೆಯುತ್ತೇನೆ.

ದೇಸಾಯಿ—ನಾನೂ ಇವರ ಜೊತೆಗೆ ಇಲ್ಲಿ ನಿಲ್ಲಬಹುದೆ, ಸಾಹೇಬರೆ ?

ಕಮೀಶನರ್—ಆಗಬಹುದು. ಕಾರಭಾರಿಗಳೆ, ನಿಮಗೆ ಮತ್ತೆ ಏನಾದರೂ ಹೇಳುವದಿದೆಯೆ ?

ಸಣ್ಣತಮ್ಮ—ಹೇಳುವದನ್ನೆಲ್ಲ ಒಮ್ಮೆ ಹೇಳಿಬಿಟ್ಟಿದ್ದೇನೆ. ಮತ್ತೇಕೆ ನನ್ನನ್ನು ಪೀಡಿಸುವಿರಿ ?

ಕಮೀಶನರ್—(ನಕ್ಕು) ಉಹುಂ ! ಇಂಥ ಬರಿ ಪ್ರಶ್ನೆಗಳಿಗೆ ನಿಮ್ಮಂಥವರು ಪೀಡೆ ಎಂದರೆ ಹೇಗೆ, ಕಾರಭಾರಿಗಳೆ ? ನೋಡಿರಿ ! ಹೊನ್ನಿನ ರಾತ್ರಿಯನ್ನು ತಂದು ನೀವು ನನ್ನನ್ನೆಷ್ಟು ಪೀಡಿಸಿದಿರಿ ! ಎಷ್ಟು ಪ್ರಶ್ನೆ ಮಾಡಿದಿರಿ ! ಹೀಗೆ ಇಲ್ಲಿ ಕುಳಿತುಕೊಳ್ಳಿರಿ, ಕಾರಭಾರಿಗಳೆ ! ಇನ್ನೂ ನಮ್ಮ-ನಿಮ್ಮ ದೃಢಪರಿಚಯವಾಗಬೇಕು. ಶ್ರೀಮಂತರೆ, ನೀವು ಹೋಗಬಹುದು.

ದೇಸಾಯಿ—ಇವರನ್ನು ಬಿಟ್ಟೆ ? ಇವರನ್ನು ಬಿಟ್ಟು ಹೇಗೇ ಹೋಗಲಿ, ಸಾಹೇಬರೆ ?

ಕಮೀಶನರ್— (ಒಳಕಿಸೆಗೆ ಕೈ ಹಾಕಿ) ಶ್ರೀ....ಮಂತ....ರೆ ! ನೀ....ವು.... ಹೋ....ಗ....ಬ....ಹು....ದು.

ದೇಸಾಯಿ—(ಗಾಬರಿಯಿಂದ) ಹೋಗುತ್ತೇನೆ. ಆದರೆ ಇವರಿಗೆ ಏನು ಮಾಡು

ತ್ತೀರಿ, ಸಾಹೇಬರೆ ? ಇವರನ್ನು ಬಿಟ್ಟು ಬಿಡಿರಿ. ಇವರಿಂದ ಇನ್ನು ಯಾವ ಅನ್ಯಾಯಗಳೂ ಘಟಿಸಲಿಕ್ಕಿಲ್ಲವೆಂದು ನಾನು ವಚನ ಕೊಡುತ್ತೇನೆ. ಬಿಟ್ಟುಬಿಡಿರಿ !

ಕಮೀಶನರ್— (ಸಿಟ್ಟಿನಿಂದ ಎದ್ದು) Damn rascal ! ಇವನನ್ನು ಬಿಡುವದೆ ? ಇವನನ್ನು ತೋಫಿನ ಬಾಯಿಗೆ ಕೊಡುತ್ತೇನೆ. ಗುಂಡುಗಳಿಂದ ಇವನ ಮೈಯನ್ನು ಛಿದ್ರಮಯವಾಗಿ ಮಾಡುತ್ತೇನೆ. ಇವನನ್ನು ಬಿಡುವದೆ ? (ಬಳಕಿಸೆಗೆ ಕೈಹಾಕಿ) ಶ್ರೀಮಂತರೆ ! ನೀವು ಇನ್ನು ಹೋಗಬಹುದು.

ದೇಸಾಯಿ—ಹೋಗುತ್ತೇನೆ. ಸಾಹೇಬರೆ ! ಆದರೆ ಸದ್ಯದ ಮಟ್ಟಿಗಾದರೂ ಇವರನ್ನು ಬಿಟ್ಟುಬಿಡಿರಿ. ನನ್ನ ಜಾಗೀರನ್ನು ನೀವು ಕಸಿದುಕೊಂಡಿದ್ದೀರಿ. ನನ್ನ ಜೀವವನ್ನು ಒತ್ತಿ ಇಡುತ್ತೇನೆ. ಒಂದು ದಿವಸದ ಮಟ್ಟಿಗಾದರೂ ಇವರನ್ನು ನನ್ನೊಡನೆ ಬಿಡಿರಿ ! (ಕಣ್ಣೀರಿಟ್ಟು ಕೈ ಮುಗಿಯುವನು.)

ಕಮೀಶನರ್—(ಸಿಟ್ಟಿನಿಂದ) ಇವರ ಜೊತೆಗೆ ಸೆರೆಮನೆಯಲ್ಲಿ ಕೊಳೆಯುವ ಇಚ್ಛೆಯಿದ್ದರೆ ನೀವು ಇಲ್ಲಿ ನಿಂದಿರಬಹುದು. ಇಲ್ಲದಿದ್ದರೆ ಈ ಕ್ಷಣ ಹೊರಟುಹೋಗಬೇಕು. ಇವೆರಡರಲ್ಲಿ ನಿಮ್ಮದು ಯಾವುದು ?

ಶ್ರೀಮಂತ—ನನಗೇನೂ ತಿಳಿಯದು, ಸಾಹೇಬರೆ. ಸದ್ಯಕ್ಕೆ ಹೊರಟು ಹೋಗುತ್ತೇನೆ. (ಸಣತಮ್ಮನಿಗೆ) ಕಾರಭಾರಿಗಳೆ, ಚಿಂತಿಸಬೇಡಿರಿ. ನಿಮ್ಮ ಬಿಡುಗಡೆಗಾಗಿ ಮತ್ತೆ ಸಾಹೇಬರಲ್ಲಿ ಹೇಳಿಕೊಳ್ಳುತ್ತೇನೆ. ಇಂದಿಲ್ಲ ನಾಳೆ ಅವರು ಕರುಣಿಸಬಹುದು.

(ಕಣ್ಣೀರಿಟ್ಟು ಸಣತಮ್ಮನನ್ನು ನೋಡುತ್ತ ಹೋಗುತ್ತಾನೆ.)

ಸಣತಮ್ಮ—ಹೋಗಿ ಬನ್ನಿರಿ, ಶ್ರೀಮಂತರೆ ! ಇದು ನಮ್ಮ ಕಡೆಯ ಭೆಟ್ಟಿ. ನನ್ನ ಸಲುವಾಗಿ ವ್ಯರ್ಥ ಶ್ರಮಪಡಬೇಡಿರಿ ನೀವು. ನನ್ನ ದೈವವನ್ನು ಎದುರಿಸಲು ನಾನು ಸಮರ್ಥನಿದ್ದೇನೆ. ಹೂಂ, ಸಾಹೇಬರೆ ! ಅಪ್ಪಣೆಯಾಗಲಿ. ತಮ್ಮ ಸೇವೆಗೆ ಸದಾ ಸಿದ್ಧನು ನಾನು.

ಕಮೀಶನರ್—ನಿಮ್ಮನ್ನು ಉಪಚರಿಸಲಿಕ್ಕೆ ನಾನು ಸಿದ್ಧನಿದ್ದೇನೆ. ಏ ! ಚಪ್ರಾಸಿ, ಇಲ್ಲಿ ಬಾ. ಪಕ್ಕದಲ್ಲಿಯ ಕೋಣೆಯಲ್ಲಿ ಇವರನ್ನು ಸೆರೆ

ಯಿರಿಸು. ಭದ್ರವಾಗಿ ಪಹರೆಯಿರಲಿ. ತಿಳಿಯಿತೆ ?

ಚಪ್ರಾಸಿ—ಜೀ, ಸರಕಾರ !

ಕಮೀಶನರ್—ಹೋಗುವಾಗ ಚಿಕ್ಕ ಶ್ರೀಮಂತರನ್ನು ಇಲ್ಲಿ ಕಳಿಸಿಕೊಡು. ತಿಳಿಯಿತೆ ?

ಚಪ್ರಾಸಿ—ಜೀ, ಸರಕಾರ್ !

(ಸಣ್ಣತಮ್ಮನ ಎರಡೂ ಕೈಗಳನ್ನು ಕಟ್ಟಿ ಚಪ್ರಾಸಿಯು ಕರೆದುಕೊಂಡು ಹೋಗುತ್ತಾನೆ. ಚಿಕ್ಕ ಶ್ರೀಮಂತರು ಬರುತ್ತಾರೆ.)

ಚಿ. ಶ್ರೀಮಂತ—Good day, Mr. Staunton ! How do you do ? Thank you very much. ಆ ಕತ್ತಲು ಕೋಣೆಯಿಂದ ನನ್ನನ್ನು ಬಿಡಿಸಿದ್ದಕ್ಕೆ ನಾನು ಎಷ್ಟು ಉಪಕಾರ ಸ್ಮರಿಸಿದರೂ ತೀರದು. That fool of a father ! ಸ್ವತಃ ತಂದೆಯೇ ಕುಳಿತು ಹೀಗೆ ಮಾಡಬೇಕೆಂದರೆ ! ಈ ಹಳ್ಳಿಯ ಬಳ್ಳಿಗುರುಡರಿಗೆ ಸ್ವತಂತ್ರವಿಚಾರ ಬೇಡ ! ನಾಲ್ಕು ಸ್ವತಂತ್ರ ವಿಚಾರಗಳನ್ನು ಇವರೆದುರಿಗೆ ಇಡಲು ಹೋದರೆ ನನ್ನ ದೇಹಸ್ವಾತಂತ್ರ್ಯವನ್ನೂ ಕೂಡ ಕಸಿಯಬೇಕೆ ? These people are yet in the Middle Ages : ಆ ಕತ್ತಲು ಕೋಣೆ-ಆ inquisition chamber— ನೆನೆಸಿದರೆ ಮೈಮೇಲೆ ಮುಳ್ಳು ಬರುತ್ತವೆ. ಪುಸ್ತಕವಿಲ್ಲ, ನಾಟಕವಿಲ್ಲ, ಜನರ ಸುಳಿವಿಲ್ಲ, ಬೆಳಕೂ ಇಲ್ಲ. ನನಗೆ ಹುಚ್ಚು ಹಿಡಿಯುವ ಪ್ರಸಂಗ ಬಂದಿತ್ತು, Mr. Staunton. ಚಿಕ್ಕೆಯಂತೆ ಚಮಕಿಸುವ ಆ ಬೆಳಕಿಂಡಿಯನ್ನು ಹಗಲೂ ರಾತ್ರಿ ನೋಡುತ್ತ ಕುಳಿತು Star chamberದ ಅನುಭವವೆಲ್ಲ ಬಂದಿತು ನನಗೆ. ಮೇಲಾಗಿ, ಆ ಊಟ ! ದಿನಕ್ಕೆರಡು ಸಲ ಆ ಸಣತಮ್ಮನು ಬಂದು ಬಾಗಿಲ ಸಂದಿಯೊಳಗಿಂದ ತಾಟು ಸರಿಸಿ ಹೋಗುತ್ತಿದ್ದ. ಒಬ್ಬ ಒಡ್ಡರವನು ಕೂಡ ಅಂಥ ಊಟ ಮಾಡಲಿಕ್ಕಿಲ್ಲ, Mr. Staunton. ಇದಲ್ಲದೆ ಬಾಗಿಲ ಹೊರಗೆ ನಿಂತು ಆ ತಂದೆಯೂ ಸಣತಮ್ಮನೂ ಕೂಡಿ ಹೆದರಿಕೆ ಹಾಕುವದು ಬೇರೆ ! ನನಗೆ ಪ್ರಾಣದ ಭಯವೊಂದಿರದಿದ್ದರೆ, I would have been highly amused. Damn it all ! I have washed my hands

off ! Thank you very much, Mr. Staunton.

ಕಮೀಶನರ್— (ನಗುತ್ತ) ಚಿಕ್ಕ ಶ್ರೀಮಂತರು ಇಲ್ಲಿ ಕುಳಿತುಕೊಳ್ಳಬೇಕು. Pray be seated. ಈಗ ನಿಮ್ಮ ತಂದೆಯವರಿಗೆ ಹೇಳುತ್ತಿದ್ದೆ. ಈ ಜಾಗೀರನ್ನು ಆಳಲು ಅವರು ತೀರ ಅಯೋಗ್ಯರಿದ್ದಾರೆಂದು. ಈಗ ಅವರಿಂದ ಜಾಗೀರನ್ನು ಕಸಿದುಕೊಂಡಿದೆ.

ಚಿ. ಶ್ರೀಮಂತ—ಹೀಗೋ ? ಉತ್ತಮವಾಯಿತು. ಬಹು ಸಂತೋಷ. I am glad, Mr. Staunton. My father is a brute. ಜನರನ್ನು ದನದಂತೆ ನಡೆಸಿಕೊಳ್ಳುವ ಪಶುಪತಿಯೆಂದರೆ ನನ್ನ ತಂದೆ. ಮತ್ತೆ ಆ ಸಣತಮ್ಮನಿಗೇನಾಯಿತು ? He is rascal of the first water. ಅವನಿಗೆ ಮರಣಶಿಕ್ಷೆಯಾಗಬೇಕು. He deserves to be hanged, I can tell you.

ಕಮೀಷನರ್—ಕಾರಭಾರಿಗಳನ್ನು ಕೆಲಸದಿಂದ ತೆಗೆದು ಹಾಕಿದೆ. ಅವರಿಂದಾದ ಅನ್ಯಾಯಗಳ ಯೋಗ್ಯ ವಿಚಾರವನ್ನು ಸಕಾಲದಲ್ಲಿ ಮಾಡಲಾಗುವುದು. ಈಗ ಜಾಗೀರಿನ ಭವಿಷ್ಯವನ್ನು ಕುರಿತು ನಿಮ್ಮೊಡನೆ ವಿಚಾರ ಮಾಡಬೇಕೆನ್ನುವೆನು.

ಚಿ. ಶ್ರೀಮಂತ— ಈ ಜಾಗೀರನ್ನು ಮುಂದೇನು ಮಾಡಬೇಕೆಂದಿದ್ದೀರಿ, Mr. Staunton? What are you plans? May I know.

ಕಮೀಶನರ್—ನೀವು ವಯಸ್ಸಿಗೆ ಬಂದಿದ್ದೀರಿ. ಶ್ರೀಮಂತರಾಗಿ ಬೇವಿನ ಹಳ್ಳಿಯಲ್ಲಿದ್ದು ಜಾಗೀರನ್ನೂ ಜನರನ್ನೂ ಯೋಗ್ಯ ರೀತಿಯಿಂದ ರಕ್ಷಿಸಬೇಕೆಂದು ನನಗೆನಿಸುತ್ತದೆ.

ಚಿ. ಶ್ರೀಮಂತ—(ಆಶ್ಚರ್ಯದಿಂದ)ಯಾರು, ನಾನೆ? Heaven save me! Excuse me, Mr. Staunton. ನಾನು ಮುಂಬಯಿಗೆ ಇಂದೇ ಹೊರಡಬೇಕು. ನನ್ನ ತಂದೆಯ ಮೂರ್ಖತನದ ಸಲುವಾಗಿ ನಾನಿಲ್ಲಿ ಇಷ್ಟು ದಿವಸ ನಿಲ್ಲಬೇಕಾಯಿತು. ಸರ್ವಸಾಧಾರಣವಾಗಿ ಹಿಂದೂಸ್ಥಾನದಲ್ಲಿ ನಾಗರಿಕತೆ ಇದ್ದರೆ ಮುಂಬಯಿಯಲ್ಲೊಂದಿದೆ, Mr. Staunton ಈ ಹಳ್ಳಿಯಲ್ಲಿದ್ದರೆ ನನಗೆ ಹುಚ್ಚು ಹಿಡಿದು ಹೋದೀತು. ಈ ಸಲ ನಾನು ಬಿ.ಎ. ಪರೀಕ್ಷೆಗೆ ಕೂಡಬೇಕು. ಮುಂದೆ 'ಬ್ಯಾರಿಸ್ಟರಿ'ಗೆಂದು ಇಂಗ್ಲಂಡಿಗೆ ಹೋಗುವ ವಿಚಾರವಿದೆ.

ಈ ಹಳ್ಳಿಯನ್ನು ಕೊರಳಲ್ಲಿ ಕಟ್ಟಿ ಕೊಂಡು ನಾನೆಲ್ಲಿ ಗೋಳಾಡಲಿ ?

ಕಮೀಶನರ್—ನಿಮ್ಮಂಥ ಉತ್ಸಾಹಿ ತರುಣರು ಹೀಗೆ ಮಾಡಕೂಡದು. ನೀವು ಜನರನ್ನು ಸುಧಾರಿಸದಿದ್ದರೆ ಆ ಕೆಲಸವನ್ನು ಮತ್ತಾರು ಮಾಡಿಯಾರು ? ನಿಮಗೆ ಒಬ್ಬ ಒಳ್ಳೆ ಕಾರಭಾರಿಯನ್ನು ನೇಮಿಸಿಕೊಡುತ್ತೇನೆ. ನಿಮ್ಮ ಅಜ್ಜಂದಿರಂತೆ ಆಳಿ ಕೀರ್ತಿಯನ್ನು ಸಂಪಾದಿಸಿರಿ.

ಚಿ. ಶ್ರೀಮಂತ—Excuse me, Mr. Staunton. ಮುಂಬಯಿಯನ್ನು ಬಿಟ್ಟು ಬಂದರೆ ನಾನು ನಾಲ್ಕು ದಿನವಾದರೂ ಉಳಿಯಬಹುದೋ ಇಲ್ಲೋ ಸಂಶಯಬರುತ್ತದೆ. ಮೇಲಾಗಿ ನನ್ನ ಶಿಕ್ಷಣವನ್ನು ಬಿಟ್ಟು ಹಳ್ಳಿಯಲ್ಲಿರುವ ಈ ಶಿಕ್ಷೆಯನ್ನು ಅನುಭವಿಸಲಾರೆ. ನೀವು ಕಾರಭಾರಿಯನ್ನು ನೇಮಿಸಿರಿ. I have implicant trust in you. ಅವರು ಬೇಕಾದರೆ ನಮ್ಮ ವಾಡೆಯಲ್ಲಿರಲಿ. ಎಲ್ಲ ಕೆಲಸವನ್ನು ಸಾಗಿಸಿಕೊಂಡು ಹೋಗಲಿ. ನನಗೆ ವಾರ್ಷಿಕ ವರದಿಯೊಂದನ್ನೂ ಬೇಕಾದಷ್ಟು ದುಡ್ಡನ್ನೂ ಮಾತ್ರ ಕಳಿಸಿದರೆ ಸಾಕು. I would rest satisfied.

ಕಮೀಶನರ್—ಹಾಗಾದರೆ ಈಗ ಇಲ್ಲಿರುವದು ನಿಮಗೆ ಶಕ್ಯವಿಲ್ಲದ ಮಾತೋ?

ಚಿ. ಶ್ರೀಮಂತ—Absolutely. ಅದರಲ್ಲಿ ಸಂಶಯವೇನು ?

ಕಮೀಶನರ್—ಒಳ್ಳೆಯದು. ಈಗ ನೀವು ಹೋಗಬಹುದು. ಮುಂದೆ ವಿಚಾರ ಮಾಡಿ ಇಲ್ಲಿಯ ವ್ಯವಸ್ಥೆಯ ಬಗ್ಗೆ ನಿಮಗೆ ತಿಳಿಸಲಾಗುವದು.

ಚಿ. ಶ್ರೀಮಂತ—(ಎದ್ದು) Oh ! thank you, Mr. Staunton. ನಿಮ್ಮ ಉಪಕಾರವು ಬಹಳವಾಯಿತು. You are awfully good, I am sure. ಹೋಗಿಬರುತ್ತೇನೆ, Good bye !

(ಶೇಕ್‌ಹ್ಯಾಂಡ್ ಮಾಡಿ ಹೋಗುತ್ತಾನೆ)

ಕಮೀಶನರ್—Good bye. Here is a fool who flies from work to Pleasure. The worst brains in this country undermine the people. And the best brains underrate them. This chap is typical of the educated Indian set. Heaven save this country ! ಇದರ್ ಆವ್, ಚಪ್ರಾಸಿ !

ಚಪ್ರಾಸಿ—ಬಂನೆ, ಸರಕಾರ್.

ಕಮೀಶನರ್—ಶ್ರೀಮಂತರಿಂದ ಜಾಗೀರನ್ನು ಕಸಿದುಕೊಂಡಿದೆ. ಅವರಿಗೊಂದು ವರ್ಷವೇತನವನ್ನು ಕೊಟ್ಟು ಇನ್ನೊಂದು ಊರಲ್ಲಿ ಇಡಲಾಗುವದು. ಕಾರಭಾರಿಗಳನ್ನು ಕೆಲಸದಿಂದ ತೆಗೆದು ಹಾಕಿ ಬಂಧನದಲ್ಲಿರಿಸಿದೆ. ಅವರಿಂದಾದ ಅನ್ಯಾಯಗಳ ಯೋಗ್ಯ ವಿಚಾರಣೆಯನ್ನು ತೀವ್ರದಲ್ಲಿ ಮಾಡಲಾಗುವುದು. ಚಿಕ್ಕ ಶ್ರೀಮಂತರೇ ಇನ್ನು ಮೇಲೆ ಒಡೆಯರು. ಅವರ ಶಿಕ್ಷಣವು ಮುಗಿಯುವವರೆಗೆ ಒಬ್ಬ ಒಳ್ಳೆ ಕಾರಭಾರಿಯನ್ನು ನೇಮಿಸಲಾಗುವದೆಂದು ಊರೆಲ್ಲ ಡಂಗುರ ಸಾರಲು ಹೇಳು, ನಮ್ಮ ಡಂಗುರದವನಿಗೆ. ಈಗಿಂದೀಗ ಇಷ್ಟು ಕೆಲಸವಾಗಬೇಕು. ಡಂಗುರದವನು ನನ್ನೆದುರಿಗೆ ಒಪ್ಪಿಸಿ ಆ ಮೇಲೆ ಸಾರಲಿ.

ಚಪ್ರಾಸಿ—ಅಪ್ಪಣೆ, ಸರಕಾರ !

ಕಮೀಶನರ್—ಮತ್ತೇನು, ಚಪ್ರಾಸಿ ?

ಚಪ್ರಾಸಿ—'ಗಂಗಜ್ಜ'ನೆಂಬ ಹೆಸರಿನ ಆಳು ಹೊರಗೆ ಬಂದು ನಿಂತಿದ್ದಾನೆ, ಸರಕಾರ್ ! ತಮ್ಮೊಡನೆ ಮಾತನಾಡುವದಿದೆಯೆಂದು ಹೇಳುತ್ತಾನೆ.

ಕಮೀಶನರ್—ಅವನನ್ನು ಒಳಗೆ ಬಿಡು.

ಚಪ್ರಾಸಿ—ಅಚ್ಛಾ, ಸರಕಾರ.

(ಗಂಗಜ್ಜನನ್ನು ಒಳಗೆ ಬಿಟ್ಟು ಹೋಗುತ್ತಾನೆ.)

ಕಮೀಶನರ್—ಏನು, ಗಂಗಜ್ಜ ? ನಿನಗೆ ಮತ್ತೇನಾದರೂ ಹೇಳುವದಿದೆಯೊ ?

ಗಂಗಜ್ಜ—ಇಲ್ಲ, ಸರಕಾರ ! ಒಂದು ಪ್ರಶ್ನೆಯನ್ನು ಕೇಳುವದಿದೆ.

ಕಮೀಶನರ್—ಕೇಳು, ಹಾಗಾದರೆ.

ಗಂಗಜ್ಜ—ಈ ಕಾರಭಾರಿಗಳು ನನ್ನ ಸಂಸಾರವನ್ನು ಮಣ್ಣುಗೂಡಿಸಿದ ರೀತಿ ತಮಗೆ ಗೊತ್ತೇ ಇದೆ. ಅವರಿಗೆ ಏನು ಮಾಡಬೇಕೆಂದು ಸರಕಾರದ ವಿಚಾರವಿದೆ ?

ಕಮೀಶನರ್—ಅವರನ್ನು ಈಗ ಕೆಲಸದಿಂದ ತೆಗೆದು ಹಾಕಿದೆ. ಅವರ ಅನ್ಯಾಯಗಳ ಬಗ್ಗೆ ಸಕಾಲದಲ್ಲಿ ಯೋಗ್ಯ ವಿಚಾರ ಮಾಡಲಾಗುವದು.

ಗಂಗಜ್ಜ—ಕೆಲಸ ಬಿಡಿಸುವದಷ್ಟೆ ಯೋಗ್ಯ ಶಿಕ್ಷೆಯಾಗದು, ದೊರೆಗಳೇ ! ನನ್ನ ಸೇಡು ತೀರಿಸಬೇಕು, ಸೇಡು !

ಕಮೀಶನರ್—ಸೇ . . .ಡು ?

ಗಂಗಜ್ಜ—ಸೇಡು.

ಕಮೀಶನರ್—ಸೇಡು ? 'ಸೇಡು' ಅಂದರೆ ?

ಗಂಗಜ್ಜ—ಮುಯ್ಯಕ್ಕೆ ಮುಯ್ಯ, ಸರಕಾರ್ ! ಒಂದಕ್ಕೆ ಎರಡು ಮಾಡುವದು.

ಕಮೀಶನರ್—Well...well...ಅದೇನೂ ನನಗೆ ಗೊತ್ತಿಲ್ಲ.

(ಒಳಪಕ್ಕದಿಂದ ಕಮೀಶನರ್ ಹೊರಟುಹೋಗುವನು. ತೆರೆಯು ಬಿದ್ದು ಗಂಗಜ್ಜನು ಮುಂದೆ ಬರುವನು.)

ಗಂಗಜ್ಜ—ತಮ್ಮ ಸೇಡೊಂದು ಈ ಸಾಹೇಬರಿಗೆ ಗೊತ್ತು. ಮುಂದಿಯ ಸೇಡು ಇವರಿಗೆ ಹೇಗೆ ತಿಳಿದೀತು ? ಯಾರಾದರೂ ತಮ್ಮ ವಿರುದ್ಧ ಬಂಡೆಬ್ಬಿಸಿದರೆ ಅವರ ಊರನ್ನು ನೆಲಸಮ ಮಾಡಿ ಅವರ ವಂಶವನ್ನು ನಿರ್ವಂಶ ಮಾಡಿಬಿಡುವರು ಈ ಸಾಹೇಬರು. ಉಳಿದವರ ಮನೆತನದ ಮಾನ ಹೋದರೂ ಅಷ್ಟೆ ; ಅವರಿಗೆ ಕಚೇರಿ ಕಟ್ಟೆ, ನ್ಯಾಯ, ನಿಗದಿ; ಇವೆಲ್ಲ ನಿಕಾಲಿಯಾಗುವುದರಲ್ಲಿ ಇಸಮೂ ನಿಕಾಲಿಯಾಗಬಹುದು. ಇಲ್ಲ ....ಇಲ್ಲ. ಈ ಸೇಡನ್ನು ನಾನು ಮೊದಲು ಯೋಚಿಸಿದಂತೆ ನಾನೇ ತೀರಿಸಬೇಕು. ಸೇಡು ! ಸೇಡು ! ಇಲ್ಲಿದೆ ನನ್ನ ಬಾಳಿನ ಶಕ್ತಿ ! ನನ್ನ ಸೇಡನ್ನು ಸಾಧಿಸುವ ಮಂತ್ರ !

(ಕಿರುಗತ್ತಿಯನ್ನು ಹಿಡಿದು ನೋಡುತ್ತ ಹೋಗುವನು.)

---

## ಪ್ರವೇಶ ೪

(ಬೇವಿನಹಳ್ಳಿ. ಡಂಗುರದವನು ಹಲಗೆ ಹೊಡೆಯುತ್ತ ಪ್ರವೇಶಿಸುತ್ತಾನೆ. 'ಕೇಳ್ರಿಪೋ ! ಕೇಳ್ರಿ !' ಮೂವರು ಹಾದಿ ಹಿಡಿದು ಸಾಗಿರುತ್ತಾರೆ.)

ಮೊದಲನೆಯವ—ಇಲ್ಲಿ ಕೇಳಿರಿ ! ಡಂಗುರವೇ ಬಂತು. ನಾನು ಹೇಳಿದ ಮಾತು ಎಂದಾದರೂ ಸುಳ್ಳಾಗುವದೆ? ಇಂದು ನಮಗೆ ವಿಜಯ ವಾಗಿದೆ, ಸ್ವಾಮಿ ! ನಿಮ್ಮ ಸಣತಮ್ಮಪ್ಪನವರು ದೊಡಚಿಗಪ್ಪನವ ರಾದರು ಇವತ್ತು !

ಮೂರನೆಯವ—ಹೌದು. ನಿಮ್ಮ ಶ್ರೀಮಂತರು ಜಾಂಬುವಂತರಾಗಿ ಹೋದರು.

ಎರಡನೆಯವ—ಸ್ವಲ್ಪ ತಡೆಯಿರಿ. ನಿಮ್ಮ ಒಣಪಂಟನ್ನು ಒರೆದು ನೋಡುತ್ತೇನೆ. ಏ! ಏನದು ನಿನ್ನ ಡಂಗುರ?

ಡಂಗುರದವ—ಹ್ಹಿಂಗ್ಯಾಕ ಮಾಡತೀರಿ ದ್ಯಾವರು! ಹೇಳೋತನಕ ಪುರಸತ್ತು ಇರಬೇಕು. 'ಕೇಳ್ರೆಪ್ಪೋ! ಕೇಳ್ರಿ! ಸರಕಾರದ ಡಂಗುರ. ಸರಕಾರದ ಡಂಗುರ, ಪುತ್ತ! ಶ್ರೀಮಂತರದಲ್ಲ! ಶ್ರೀಮಂತರ ಅಧಿಕಾರೆಲ್ಲಾ ಸರಕಾರದ ಕಡೀಗೆ ಬಂತು. ಚಿಕ್ಕ ಶ್ರೀಮಂತರ್‍ಯ ನಮ್ಮ ಧೊರಿ ಇನ್ನ. ಸಣತಮ್ಮಪ್ಪನವರ್ನ ಸೆರೆಮನ್ಯಾಗ ಇಟ್ಟೈತಿ. ನಾಡದು ಅವರದೆಲ್ಲಾ ಇಚಾರಣಿ ಮಾಡತೈತಿ ಸರಕಾರ. ಕೇಳ್ರೆಪ್ಪೋ, ಕೇಳ್ರಿ!'

ಮೊದಲನೆಯವ—ಇದನ್ನು ಹಿಡಿ, ಏ! ಲಕುಮ್ಯಾ! ಸಕ್ಕರಿಯಂಥ ಸುದ್ದಿ ತಂದಿರುವಿ. (ಹೊದ್ದ ಧೋತರವನ್ನು ಕೊಡುತ್ತಾನೆ.)

ಮೂರನೆಯವ—ಇದನ್ನು ಹಿಡಿ. (ರುಮಾಲವನ್ನು ಕೊಡುತ್ತಾನೆ.)

ಡಂಗುರದವ—ಮತ್ತ ಈ ಧಣೇರು ಏನು ಕೊಡೂದುಲೇನರಿ?

ಮೊದಲನೆಯವ—ನೋಡಿರಿ, ರಾಯರೆ! ನಿಮ್ಮ ಸುತ್ತೂ ಬಂತು. ಕೊಟ್ಟು ಬಿಡಿರಿ ಈ ಧೋತರವನ್ನು. ಇಲ್ಲ ನಾನೇ ತೆಗೆದುಕೊಡುತ್ತೇನೆ. ಹೋಗಿ ಸಣತಮ್ಮಪ್ಪನವರಿಗೆ ಹೇಳಿರಿ. ಹ! ಹ! (ಅವನ ಧೋತರವನ್ನು ಕಸಿದುಕೊಡುತ್ತಾನೆ.)

ಮೂರನೆಯವ—ಈ ರುಮಾಲವೇಕೆ ನಿಮಗೆ? ಕೊಟ್ಟುಬಿಡಿರಿ. ಪಾಪ! ಲಕುಮ್ಯಾ ಸುತ್ತಿಕೊಳ್ಳುತ್ತಾನೆ. (ರುಮಾಲನ್ನು ಕಸಿದುಕೊಡುತ್ತಾನೆ)

ಎರಡನೆಯವ—ಛೀ! ಇದೇನು? ನಾಚಿಕೆಯಿಲ್ಲವೆ ನಿಮಗೆ? ಈ ಡಂಗುರದವ ಲಫಂಗ. ನೀವು ಹೇಳಿದ್ದು ಶುದ್ಧ ಸುಳ್ಳು. ಸಣತಮ್ಮಪ್ಪನವರು ಕಮಿಶನರ ಸಾಹೇಬರ ಕಡಿಗೆ ಖಾಸಗಿಯಾಗಿ ಹೋಗಿದ್ದನ್ನು ನಾನು ಪ್ರತ್ಯಕ್ಷವಾಗಿ ನೋಡಿದ್ದೇನೆ. ಸರಿಯಿರಿ. ನಾನಿನ್ನು ಮನೆಗೆ ಹೋಗಬೇಕು. (ಓಡಿ ಹೋಗುತ್ತಾನೆ)

ಮೊದಲನೆಯವ—ಹೋಗಿರಿ. ಮನೆಗೆ ಹೋಗುವದರಲ್ಲಿ ಅದನ್ನು ಇನ್ನೊಬ್ಬರು ಕಸಿದುಕೊಳ್ಳುತ್ತಾರೆ. ಹೂಂ. ಮತ್ತೇನು ಸುದ್ದಿ, ಲಕುಮ್ಯಾ?

ಡಂಗುರದವ—ಏನು ಹೇಳಬೇಕು ದ್ಯಾವರು. ಇವತ್ತ ನನಗೆ ಕಣ್ತುಂಬ ಸಿದ್ದಿ ಕೊಟ್ಟ ನೋಡಿರಿ ಶಿವಾ. ಇವತ್ತ ನಾ ಹೊಡಿಯೋ ಡಂಗುರಾನ್ನ ಡಂಗುರ! ಹಿಂದಿನಪೆಲ್ಲಾ ಖುಣಗೂಳಿನ ಜಲುವು!

ಮೂರನೆಯವ—ಈಗ ನಾಯಕರೆಲ್ಲಿರುವರು? ನಿನಗೆ ಗೊತ್ತುಂಟೊ?

ಡಂಗುರದವ—ಗೊತ್ತಿರದ ಏನು ದ್ಯಾವ್ರು. ಕೆಲಸ ಮುಗಿಸಿಕೊಂಡು ಇಂಚಲಾಪುರಕ ಹೊಂಟು ನಿಂತಾರ ನಾಯಕರು ಅಲ್ಲಿ ಸಾಲಿಟ್ಟೈತಿ ನೋಡಿರಿ ಜನ. 'ಇವತ್ತ ಇಲ್ಲೇ ಇರ್ರಿ. ಸಭಾ ಹೂಡೋನು' ಅಂತ ಗಂಟು ಬಿದ್ದಾರ ಅವರಿಗೆ.

ಮೂರನೆಯವ—ನಡೆಯಿರಿ. ಅಲ್ಲಿ ಹೋಗೋಣ.

ಮೊದಲನೆಯವ—ನಡೆಯಿರಿ.

(ಹೋಗುತ್ತಾರೆ. ಡಂಗುರದವನು 'ಕೇಳ್ರಿಪೋ ಕೇಳ್ರಿ!' ಎಂದು ಸಾರುತ್ತ ಹೋಗುತ್ತಾನೆ.)

---

## ಪ್ರವೇಶ ೫

(ಭೀಮಣ್ಣನಾಯಕನ ಮನೆ. ನಡುಮನೆಯಲ್ಲಿ ಪ್ರಣತಿಯನ್ನು ಹೊತ್ತಿಸಿ ಸಮಯದ ಮೇಲಿಟ್ಟು ಲಕ್ಷ್ಮಮ್ಮನವರೂ ಸುಭದ್ರಾಬಾಯಿಯೂ ದಾರಿ ಕಾಯುತ್ತ ಕೂತಿದ್ದಾರೆ. ರಾತ್ರಿಯಾಗುತ್ತ ಬಂದಿದೆ.)

ಲಕ್ಷ್ಮಮ್ಮ—ಇನ್ನೂ ಬರಲಿಲ್ಲವಲ್ಲ, ಸುಭದ್ರಾಬಾಯಿ? ಭೀಮೂ ಇನ್ನೂ ಬರಲಿಲ್ಲ.

ಸುಭದ್ರಾ—ಹೋದವರು ಇನ್ನೂ ತಿರುಗಿ ಬರಲಿಲ್ಲ.

ಲಕ್ಷ್ಮಮ್ಮ—ಕರೆದು ತರಲೆಂದು ಆ ಕರಿಯನನ್ನು ಕಳಿಸಿದೆವು. ಅವನೂ ಬರಲಿಲ್ಲ ತಿರುಗಿ. ಆಳುಮಗನಾಗಿ ಹೀಗೆ ಮಾಡಬೇಕೆ?

ಸುಭದ್ರಾ—ಹೌದು, ಕರಿಯನೂ ತಿರುಗಿ ಬರಲಿಲ್ಲ.

ಲಕ್ಷ್ಮಮ್ಮ—ಒಮ್ಮೆ ಮನೆಗೆ ಬಂದು ಬಿಡಲವ್ವ. ತಿರುಗಿ ಹೊರಗೆ ಬಿಡುವದಿಲ್ಲ ನಮ್ಮ ಭೀಮೂನನ್ನು. ಹೋಗುವೆನೆಂದರೆ ನಾನು ಬಾಗಿಲಲ್ಲಿ

ಅಡ್ಡಗಟ್ಟಿ ನಿಲ್ಲುತ್ತೇನೆ. ಇನ್ನೂ ಬಲಲಿಲ್ಲ. ದೇವರೆದುರಿಗಿನ ದೀಪಕ್ಕೆ ಇನ್ನಿಷ್ಟು ಎಣ್ಣೆಯನ್ನು ಹಾಕಿದ್ದೀಯಾ, ಸುಭದ್ರಾಬಾಯಿ ?

ಸುಭದ್ರಾ—ಹಾಕಿದ್ದೇನೆ.

ಲಕ್ಷ್ಮಮ್ಮ—ತುಪ್ಪದ ದೀವಿಗೆಯನ್ನು ಹಚ್ಚಿಟ್ಟು ಕೈಮುಗಿದು ಬಂದಿದ್ದೀಯಾ ದೇವರಿಗೆ ?

ಸುಭದ್ರಾ—ಇಲ್ಲ, ಹಚ್ಚಿಟ್ಟು ಬರುತ್ತೇನೆ.

ಲಕ್ಷ್ಮಮ್ಮ—ಇಟ್ಟು ಬಾ ಹೋಗು, ಹಾಗಾದರೆ. ದೇವರೆದುರಿಗೆ ಹಚ್ಚಿಟ್ಟು ಕೈಮುಗಿದು ಬೇಡಿಕೊಂಡು ಬಾ. (ಸುಭದ್ರಾಬಾಯಿಯು ಹೋಗುತ್ತಾಳೆ.) ನಮ್ಮ ಭೀಮೂ ಇನ್ನೂ ಬರಲಿಲ್ಲ. ಕರೆಯಲು ಹೋದ ಕರಿಯನೂ ಬರಲಿಲ್ಲ. ಹಚ್ಚಿಟ್ಟು ಬಂದೆಯಾ, ಸುಭದ್ರಾ ?

ಸುಭದ್ರಾ—ಹೂಂ. ಇಟ್ಟು ಕೈಮುಗಿದು ಬಂದೆ.

ಲಕ್ಷ್ಮಮ್ಮ—ದೇವರೆದುರಿಗಿನ ಕುಂಕುಮವನ್ನಿಷ್ಟು ಹಚ್ಚಿಕೊಂಡೆಯಾ ?

ಸುಭದ್ರಾ—(ಗಾಬರಿಯಾಗಿ) ಇಲ್ಲ. ಮರೆತು ಬಂದೆ.

ಲಕ್ಷ್ಮಮ್ಮ—ಛಿ ! ಹುಚ್ಚಿ, ಹೋಗು ಹಚ್ಚಿಕೊಂಡು ಬಾ. (ಸುಭದ್ರಾಬಾಯಿಯು ಹೋಗುತ್ತಾಳೆ.) ಭೀಮೂ ಇನ್ನೂ ಬರಲಿಲ್ಲ. ಅವನನ್ನು ಕರೆದು ತರಲು ಹೋದ ಕರಿಯನೂ ತಿರುಗಿ ಬರಲಿಲ್ಲ. (ಸುಭದ್ರಾಬಾಯಿಯು ಬರುತ್ತಾಳೆ.) ಎಣ್ಣೆಯ ದೀಪ ಇನ್ನೂ ಉರಿಯುತ್ತಿತ್ತೆ, ಸುಭದ್ರಾಭಾಯಿ ?

ಸುಭದ್ರಾ—ಇಲ್ಲ, ಶಾಂತವಾಗಿತ್ತು. ಮತ್ತಿಷ್ಟು ಎಣ್ಣೆಯನ್ನು ಹಾಕಿ ಅದನ್ನೂ ಹಚ್ಚಿಟ್ಟು ಬಂದೆ.

ಲಕ್ಷ್ಮಮ್ಮ—ಭೀಮೂ ಬರಲಿ. ಇನ್ನು ಮೇಲೆ ದಿನಾಲು ದೇವರೆದುರು ನಂದಾದೀಪವನ್ನಿಡೋಣ. ಒಂದು ತುಪ್ಪದ ನಂದಾದೀಪ, ಒಂದು ಎಣ್ಣೆಯದು.

ಸುಭದ್ರಾ—ಹೌದು, ಹಾಗೆ ಮಾಡೋಣ.

ಲಕ್ಷ್ಮಮ್ಮ—ಇಷ್ಟು ದಿವಸ ನವರಾತ್ರಿಗೊಮ್ಮೆ ಇಡುವ ರೂಢಿಯಿತ್ತು. ಇನ್ನು ವರ್ಷಾನುವರ್ಷ ಪ್ರತಿನಿತ್ಯವಿಡೋಣ.

ಸುಭದ್ರಾ—ಇಡೋಣ.

ಲಕ್ಷ್ಮಮ್ಮ—ನಿಂತೆಯೇಕೆ ? ಕುಳಿತುಕೊ, ಕಾಲು ಸೋತಾವು. ಇದೀಗ ಭೀಮೂ ಬರುವ ಹೊತ್ತಾಗಿದೆ.

ಸುಭದ್ರಾ—ಕುಳಿತುಕೊಳ್ಳುತ್ತೇನೆ. (ಕೂಡುವಳು).

ಲಕ್ಷ್ಮಮ್ಮ—ಬಿರುಗಾಳಿಯಲ್ಲಿ ಬೇರೆ ನಮ್ಮ ಭೀಮು ಸಿಕ್ಕಿರಲಿಕ್ಕಿಲ್ಲವಷ್ಟೆ ? ಏನವ್ವಾ ! ಇವತ್ತಿನ ಗುಡುಗು, ಮಿಂಚು !

ಸುಭದ್ರಾ—ಸಂಜೆಯೊಳಗಾಗಿ ಕರೆದುಕೊಂಡು ಬರುತ್ತೇನೆಂದು ಹೇಳಿ ಹೋಗಿದ್ದ ಕರಿಯ.

ಲಕ್ಷ್ಮಮ್ಮ—ಅಷ್ಟರಲ್ಲಿ ಹೊರಡುವದಾಗಿರಲಿಕ್ಕಿಲ್ಲ. ಯಾರಿಗೆ ಗೊತ್ತು ! ತಡವಾಗಿ ಹೊರಟಿದ್ದರೆ ?

ಸುಭದ್ರಾ—ಆಗಿರಬಹುದು.

ಲಕ್ಷ್ಮಮ್ಮ— ಏನು ಇವತ್ತು ರಾತ್ರಿ ಬೇವಿನಹಳ್ಳಿಯಲ್ಲಿಯೇ ಇಬ್ಬರೂ ಉಳಿದುಕೊಂಡು ನಾಳೆ ಮುಂಜಾನೆ ಬರುವರೊ ?

ಸುಭದ್ರಾ—ಅದೂ ಶಕ್ಯವಿದೆ.

ಲಕ್ಷ್ಮಮ್ಮ—ನಾಳೆ ಮುಂಜಾನೆ ಬಂದರೂ ಬರವೊಲ್ಲರೇಕೆ. ಇವತ್ತು ಸಂಜೆ ಮಾಡಿ ಮಾತ್ರ ಹೊರಟರಬಾರದು, ನಮ್ಮವ್ವ ! ಏನು ಗಾಳಿ ! ಎಂಥ ಸಿಡಿಲು ! ಏನು ಮಿಂಚು ! ಯಾಕೆ, ಸುಭದ್ರಾಬಾಯಿ, ಅಳುವದೇಕೆ ?

ಸುಭದ್ರಾ—(ಕಣ್ಣೊರಸಿಕೊಂಡು) ನನ್ನ ಬಲಗಣ್ಣು ಒಂದೇ ಸಮನೆ ಹಾರುತ್ತದೆ.

ಲಕ್ಷ್ಮಮ್ಮ—ಛೀ, ಹುಚ್ಚಿ ! ಆದಕ್ಕಾಗಿ ಹೀಗೆ ಮುಳು ಮುಳು ಅಳಬೇಕೆ ? ಹೋಗು. ದೇವರೆದುರಿಗಿನ ಅಂಗಾರ ಹಚ್ಚಿಕೊಂಡು ಬಾ. ಕಣ್ಣುಗಿಷ್ಟು ಬಡಿದುಕೊ.

ಸುಭದ್ರಾ—ಹುಂ. (ಹೊಗುತ್ತಾಳೆ)

ಲಕ್ಷ್ಮಮ್ಮ—ನಮ್ಮ ಭೀಮೂ ಇನ್ನೂ ಬರಲಿಲ್ಲ. ಅವನನ್ನು ಕರೆಯಹೋದ ಕರಿಯನೂ ಬರಲಿಲ್ಲ. ಇನ್ನೂ ಬರಲಿಲ್ಲ. ಯಾಕೆ ಸುಭದ್ರಾಬಾಯಿ ಹಚ್ಚಿಕೊಂಡು ಬಂದೆಯಾ ?

ಸುಭದ್ರಾ—ಹೂಂ, ಹಚ್ಚಿಕೊಂಡು ಬಂದೆ.

ಲಕ್ಷ್ಮಮ್ಮ—ಈಗ ಕಣ್ಣು ಹಾರುವದು ಸ್ವಲ್ಪ ನಿಂತಿದೆಯೆ ?

ಸುಭದ್ರಾ—ನಿಂತಿದೆ.

ಲಕ್ಷ್ಮಮ್ಮ—ಕುಳಿತುಕೋ. ಈಗ ಭೀಮು ಬರುವ ಹೊತ್ತಾಯಿತು. ಆಕರಿಯನಿಗೆ ಆದಷ್ಟು ತೀವ್ರ ಬರಬೇಕೆಂದು ಗಟ್ಟಿಸಿ ಹೇಳಿದೆಯೊಇಲ್ಲೋ ?

ಸುಭದ್ರಾ—ಹೇಳಿದ್ದೇನೆ.

ಲಕ್ಷ್ಮಮ್ಮ—ನಿನ್ನ ಮಾತು ಬಲು ಮೆಲ್ಲಗೆ. ಬಾಯಲ್ಲಿಯೇ ಅರ್ಧ ಶಬ್ದಗಳನ್ನು ನುಂಗುತ್ತಿ. ಅದಕ್ಕೇ ಕೇಳಿದೆ.

ಸುಭದ್ರಾ—ಇಲ್ಲ, ಹೇಳಿದ್ದೇನೆ.

ಲಕ್ಷ್ಮಮ್ಮ—ಅದೇನೆ ? ಯಾರೋ ಒದರಿಕೊಂಡಂತಾಯಿತಲ್ಲ ?

ಸುಭದ್ರಾ—ಏನೂ ಇಲ್ಲ. ಅಡವಿಯಲ್ಲಿ ನರಿಗಳ ಕೂಗಾಟ ನಡೆದಿದೆ.

ಲಕ್ಷ್ಮಮ್ಮ—ಅದೇನೆ, ತಾಯಿ ? ಎಷ್ಟೊಂದು ಕೂಗುತ್ತಿವೆ! ಅವಕ್ಕೇನು ಬರ ಬಂದಿದೆಯೋ ಯಾರು ಬಲ್ಲರು ?

ಸುಭದ್ರಾ—ನಿತ್ಯವೂ ಹೀಗೆಯೇ ಕೂಗುತ್ತವೆ.

ಲಕ್ಷ್ಮಮ್ಮ—ಏನೋ, ನಮ್ಮವ್ವ. ನನಗೆ ಬೇರೆ ತಿಳಿಯದು. ಇವತ್ತು ಎಲ್ಲವೂ ವಿಚಿತ್ರವಾಗಿಯೇ ತೋರುತ್ತದೆ. ಜೀಂಯ್ ಎಂದು ಒಂದೇ ಸವನೆ ಹಿಡಿದಿದೆಯಲ್ಲ, ಅದೇನದು ?

ಸುಭದ್ರಾ—ಇದೀಗ ಮಳೆಯಾಗಿದೆ. ಕಾಡು ಹುಳುಗಳೂ ಜಿಟ್ಟೆಗಳೂ ಸ್ವರ ಮಾಡುತ್ತಿರಬೇಕು. ಮತ್ತೇನೂ ಇಲ್ಲ.

ಲಕ್ಷ್ಮಮ್ಮ—ಕಪ್ಪೆಗಳೂ ಒದರುತ್ತಿವೆಯೇನು ?

ಸುಭದ್ರಾ—ಒದರುತ್ತಿವೆ.

ಲಕ್ಷ್ಮಮ್ಮ—ಎಲ್ಲದರ ಒದರಾಟಕ್ಕೆ ಇವತ್ತೇ ಪ್ರಾರಂಭವಾಗಿದೆ. ಅದೇನೇ ಬಾಗಿಲಲ್ಲಿ ಸಪ್ಪಳವದು ?

ಸುಭದ್ರಾ—ಏನೂ ಇಲ್ಲ. ಗಾಳಿಯೆಂದು ಕಾಣುತ್ತದೆ.

ಲಕ್ಷ್ಮಮ್ಮ—ಯಾರೋ ಬಂದಂತೆ ಹೆಜ್ಜೆಯ ಸಪ್ಪಳವಾಗಲಿಲ್ಲೆ ?

ಸುಭದ್ರಾ—ನನಗಂತೂ ಕೇಳಿಸಲಿಲ್ಲ.

ಲಕ್ಷ್ಮಮ್ಮ—ಬರಲಿಕ್ಕೆ ಇಷ್ಟು ಹೊತ್ತೇಕಾಯಿತು ಇವರಿಗೆ ? ದೇವರೇ ಬಲ್ಲ. ಅಲ್ಲೇ ಸುಭದ್ರಾ! ಆ ಬಾಗಿಲದ ಅಗಳಿಯನ್ನು ಹಾಕಿದ್ದೀಯಾ ? ಕರಿಯನೂ ಕೂಡ ಮನೆಯಲ್ಲಿಲ್ಲ. ನಾವಿಬ್ಬರೇ ಹೆಂಗಸರು, ಯಾರಾದರೂ ಬಂದರೆ ಏನು ಮಾಡುವದು ?

ಸುಭದ್ರಾ—ಅಗಳಿಯನ್ನು ಆನಿಸಿಲ್ಲ. ಬರಿ ಚಿಲಕವನ್ನು ಹಾಕಿದ್ದೇನೆ.

ಲಕ್ಷ್ಮಮ್ಮ—ಹೋಗು ಹಾಗಾದರೆ. ಅಗಳಿಯನ್ನು ಬಲವಾಗಿ ಇರಿಸಿ ಬಾ. ಭೀಮು ಬಂದ ಮೇಲೆ ಮತ್ತೆ ತೆಗೆದರಾಯಿತು.

ಸುಭದ್ರಾ—ಇರಿಸಿ ಬರುತ್ತೇನೆ. (ಮುದೆ ಹೋಗಿ ಕಳ್ಳ ಹೆಜ್ಜೆಯಿಂದ ಮತ್ತೆ ತಿರುಗಿ ಬರುವಳು.)

ಲಕ್ಷ್ಮಮ್ಮ— ಏನೆ ? ಮತ್ತೇಕೆ ತಿರುಗಿ ಬಂದಿ ?

ಸುಭದ್ರಾ—ಇಲ್ಲಿ ಊರ ಜನರೆಲ್ಲ ಕೂಡಿ ಅಳುವಂತೆ ಭಾಸವಾಗುತ್ತದೆ. ನಿಮಗೆ ಕೇಳುವದೇನೋ ನೋಡಿರಿ ?

ಲಕ್ಷ್ಮಮ್ಮ—(ಎದ್ದು ತುಸು ಮುಂದೆ ಹೋಗಿ) ಎಲ್ಲಿ ನೋಡೋಣ ನರಿಗಳ ಕೂಗಾಟವಾಗಿದ್ದೀತು ಬಿಡೆ. ಅದಕ್ಕೇಕೆ ಅಷ್ಟು ಹೆದರುತ್ತಿ.

ಸುಭದ್ರಾ—ಇಲ್ಲ. ಇಲ್ಲಿಯೇ ಸಮೀಪದಲ್ಲಿ ಕೇಳುತ್ತದೆ.

ಲಕ್ಷ್ಮಮ್ಮ—ಭಗವಂತರಾಟವನ್ನು ಬೇರೆ ಆಡಬೇಕೆನ್ನುವವರಲ್ಲ ಇವತ್ತು ? ಅವರ ಕೂಗಾಟವಾಗಿದ್ದೀತು ಬಿಡು.

ಸುಭದ್ರಾ—ಇಲ್ಲ, ಅಳುವ ದನಿ ಕೇಳಿಬರುತ್ತದೆ.

ಲಕ್ಷ್ಮಮ್ಮ—ಊರಲ್ಲಿ ಯಾರಾದರೂ ಸತ್ತುಗಿತ್ತಿದ್ದಾರು ಬಿಡು. ಇಷ್ಟು ಮನೆಗಳಿವೆ. ಎಲ್ಲಿ ಏನಾಗಿದೆಯೋ ಯಾರಿಗೆ ಗೊತ್ತು ? ಆ ಅಗಳಿಯನ್ನು ಹಾಕಿ ಬಾ. ಇಲ್ಲಿ ಸುಮ್ಮನೆ ನನ್ನ ಹತ್ತಿರ ಕುಳಿತುಕೊ.

ಸುಭದ್ರಾ—ಹಾಕುತ್ತೇನೆ. ಬಂದೆ. (ಬಂದು ಕೂಡುತ್ತಾಳೆ.)

ಲಕ್ಷ್ಮಮ್ಮ—ನಮ್ಮ ಭೀಮೂ ಇನ್ನೂ ಬರಲಿಲ್ಲ. ಅವನನ್ನು ಕರೆಯಹೋದ ಕರಿಯನೂ ಬರಲಿಲ್ಲ. ಏನಾಗಿರಬಹುದು, ಸುಭದ್ರಾ ?

ಸುಭದ್ರಾ—ದೇವರಿಗೆ ಗೊತ್ತು. (ಬಿಕ್ಕುತ್ತಾಳೆ)

ಲಕ್ಷ್ಮಮ್ಮ ಛಿ ! ಹುಚ್ಚಿ, ಅಳಲಿಕ್ಕೇನಾಗಿದೆ ? ಸುಮ್ಮನಾಗು. ಹಾದಿಯಲ್ಲಿಯ ಹಳ್ಳ ಕಟ್ಟಿದ್ದೀತು. ಭೀಮೂ ಈಗ ಬಂದೇ ಬರುತ್ತಾನೆ.

ಸುಭದ್ರಾ—(ಬೆಚ್ಚಿಬಿದ್ದು) ಆ ಅಳುವ ದನಿ ಇಲ್ಲೇ ತೀರ ಸಮೀಪದಲ್ಲಿ ಬಂದಿತು.

ಲಕ್ಷ್ಮಮ್ಮ—ಯಾವ ಅಳುವ ದನಿ, ಸುಭದ್ರಾ? ನಿನಗೊಂದೇ ಯಾವ ಅಳುವ ದನಿ ಕೇಳಿಸುತ್ತದೆ ? ಎಲ್ಲಿ, ಕೇಳೋಣ ? (ಕಿವಿಗೊಟ್ಟು ಕೇಳುತ್ತಾಳೆ.)

ಸುಭದ್ರಾ—ಅವ್ವಯ್ಯಾ ! ಆ ಅಳುವ ದನಿ ಇಷ್ಟರಲ್ಲೇ ನಿಂತಿತಲ್ಲರೆ ? ಯಾರೋ ಮತ್ತೆ ಬಾಗಿಲನ್ನು ನೂಕಿದಂತೆ ಕೇಳುತ್ತದೆ.

ಲಕ್ಷ್ಮವ್ವ—ಛಿ ! ಹುಚ್ಚಿ, ಸುಮ್ಮನಾಗು. ಗಾಬರಿಯ ಜೀವ ನಿನ್ನದು. ಮಲಗಿ ನಿದ್ದೆ ಮಾಡು. ಈ ಹಳವಂಡವೆಲ್ಲ ಹೋಗಿ ಎಲ್ಲವೂ ಸರಿ ಹೋಗುತ್ತದೆ.

(ಸುಭದ್ರಾಬಾಯಿಯನ್ನು ತನ್ನ ತೊಡೆಯ ಮೇಲೆ ಒರಗಿಸಿಕೊಳ್ಳುತ್ತಾಳೆ.)

(ತೆರೆಯು ಬೀಳುತ್ತದೆ.)

———

## ಪ್ರವೇಶ ೬

(ಬೇವಿನ ಹಳ್ಳಿಯಿಂದ ಇಂಚಲಾಪುರದ ಬಳಿಗೊಯ್ಯುವ ದಾರಿ. ಮುಚ್ಚಂಜೆ ಯಾಗಿದೆ. ಭೀಮಣ್ಣ ನಾಯಕನೂ ಕರಿಯನೂ ಹೊರಟುನಿಂತಿದ್ದಾರೆ. ಸಿದ್ದರಾಮ ಸೆಟ್ಟಿಯು ಕಳಿಸಲು ಬಂದಿದ್ದಾನೆ. ಪಕ್ಕದಲ್ಲಿ 'ನೀನು ನಾಯಕ ! ನಮ್ಮ ನಾಯಕ !' ಎಂದು ಕಲಕಲವಾಗುವದು.)

ಭೀಮಣ್ಣ—ನನ್ನ ಪರಮ ಸ್ನೇಹಿತರೆ ! ನೀವು ನನ್ನಲ್ಲಿ ತೋರಿಸಿದ ವಿಶ್ವಾಸಕ್ಕೆ ಸೀಮೆಯಿಲ್ಲ, ಸ್ನೇಹಕ್ಕೆ ಎಣೆಯಿಲ್ಲ. ಜನತೆಯ ಕಲ್ಯಾಣವು ಇಂತು ಸಾಧಿಸಿರಲು ನಮಗೆ ಪೂಜ್ಯರಾದ ಹಿರಿಯರ ಆತ್ಮಗಳು ತೃಪ್ತಿಹೊಂದಿದವು. ನಮಗೆ ಇಂದಾದ ಹಿರಿಯ ಸಂತೋಷದಲ್ಲಿ ನಾನು ಸತ್ತರೂ ಚಿಂತೆಯಿಲ್ಲ. ನನ್ನ ಬಾಳಿನ ಚಿಂತಾಮಣಿಯನ್ನು ನಾನು ಇಷ್ಟರಲ್ಲಿಯೇ ಹೊಂದಿದಂತಾಯಿತು. ಬಂಧುಗಳೆ ! ಇನ್ನು ನಿಮ್ಮ ನಿಮ್ಮ ಮನೆಗೆ ತೆರಳಿರಿ. ನಿಮ್ಮ ಮನೆಯ ದೀಪ,-ನಂದಾದೀಪವಾಗಲಿ ! ಕುಡಿಬಳ್ಳಿ ಕೊನರೊಡೆಯಲಿ ! ಅಣ್ಣ ತಮ್ಮಂದಿರೆ ! ಆನಂದದ ಭರದಲ್ಲಿ ನಿಮಗೆ ತುಳಿದಷ್ಟು ದಾರಿಯು ಕಡಿಮೆಯೆನಿಸೀತು. ಈಗಾಗಲೆ ಬಹುದೂರ ಬಂದಿರಿ. ನನ್ನ ಬಿನ್ನಹವನ್ನು ಮನ್ನಿಸಿ ಇನ್ನು ನೀವು ಊರ ನಿಟ್ಟಿಗೆ ತಿರುಗಬೇಕು. ನಾನು ಇದೀಗ ಮನೆ ಮುಟ್ಟುವೆನು. ಇನ್ನು ನನಗೆ ಬೇವಿನಹಳ್ಳಿಯು ದೂರವಲ್ಲ, ಬಂಧುಗಳೆ ! ಮತ್ತೆ ಬಂದು ಹುಟ್ಟೆ

ದೂರಲ್ಲಿ ನೆಲೆಸುವ ಸ್ವಾತಂತ್ರ್ಯವನ್ನು ದೇವರು ದಯಪಾಲಿಸಿದನು. ಹೋಗಿ ಬರುತ್ತೇನೆ. ನಮಸ್ಕಾರ ! (ಪಕ್ಕದಲ್ಲಿ : ' ನೀನು ನಾಯಕ ! ನಮ್ಮ ನಾಯಕ ! ' ) ಸೆಟ್ಟರೆ ! ನೀವೂ ಇನ್ನು ಹೊರಡಬೇಕು. ಊರಿನವರೆಗೆ ಜೊತೆಯಾಗಿ ಬಂದರೂ ಸ್ನೇಹದ ಉಕ್ಕು ಕಡಿಮೆ ಯಾಗುವುದಿಲ್ಲ. ಮತ್ತೆ ನಾನು ನಿಮ್ಮ ಜೊತೆಗೆ ಬೇವಿನಹಳ್ಳಿಯ ವರೆಗೆ ಬರಬೇಕು ! ಮತ್ತೆ ನಿಮಗೆ ತಿರುಗುಪ್ಪಾಗಬೇಕು. ಬೆಳ ಗಾದರೂ ನಮ್ಮ ತಿರುಗಾಟ ಮುಗಿಯಲಿಕ್ಕಿಲ್ಲ. ಮತ್ತೆ ಭೆಟ್ಟಿ ಯಾಗುವದಿದ್ದೇ ಇದೆ. ತಾವಿನ್ನು ತಿರುಗಿ ಹೋಗಬೇಕು.

ಸೆಟ್ಟಿ—ಅಲ್ಲಿ ನೋಡಿರಿ ಮೋಡಗಳು ತುಂಬಿ ಬಂದು ಮುಗಿಲು ಹೇಗೆ ನೀಲ ಕರಾಳವಾಗಿದೆ ? ಅಗೊ ! ಗಡಚಿಕ್ಕುವ ಗುಡುಗಿನ ಗಂಡು ದನಿಯನ್ನು ಆಲಿಸಿರಿ. ಇಷ್ಟರಲ್ಲಿಯೇ ಈ ಬಿರುಗಾಳಿಯು ಬಂದು ನಮ್ಮನ್ನು ಸುತ್ತಬಹುದು. ನನ್ನ ಬಿನ್ನಹವನ್ನು ಮನ್ನಿಸಿ ಇಂದು ನಮ್ಮಲ್ಲಿಯೇ ಉಳಿದುಕೊಳ್ಳಿರಿ.

ಭೀಮಣ್ಣ—ಸೆಟ್ಟರೆ ಇಲ್ಲಿ ನಿಮ್ಮನ್ನು ಅಗಲುವಾಗ ನನ್ನಲ್ಲಿಯೂ ವಿಲಕ್ಷಣವಾದ ತಳಮಳವಾಗುತ್ತಿದೆ. ಆದರೆ ಈಗ ನಾನು ಹೊರಡಬೇಕು. ಮನೆ ಯಲ್ಲಿ ದಾರಿನೋಡುತ್ತ ಕುಳಿತಿರಬಹುದು. ಇಂದು ಹೋಗಿ ಮುಟ್ಟ ದಿದ್ದರೆ ಅವರಿಗೆ ನಿರಾಶೆಯಾಗುವದಿಲ್ಲವೆ ? ನನ್ನ ಕೆಲಸ ಮುಗಿಯುವ ತನಕ ಬಿಡುವಿಲ್ಲವೆಂದು ಹೇಳಿ ಕಳುಹಿದ್ದೆ. ಕೆಲಸ ಮುಗಿದಂತಾ ಯಿತು. ಈಗ ಹೋಗದಿದ್ದರೆ ನನ್ನ ತಪ್ಪಲ್ಲದೆ ಮತ್ತೇನು ? ಮೇಲಾಗಿ ಬಿಟ್ಟು ಬರಬೇಡವೆಂದು ಹೇಳಿ ಕರಿಯನನ್ನು ಬೇರೆ ಕಳಿಸಿಕೊಟ್ಟಿದ್ದಾರೆ. ಕರಿಯನ ಬಯಲಾಟವೂ ಇಂದೇ ರಾತ್ರಿಯಂತೆ. ಸೆಟ್ಟರೆ, ನನ್ನನ್ನು ಹೋಗಗೊಡಿರಿ, ನೀವೂ ಇನ್ನು ಹೊರಡಬೇಕು. ನಮಸ್ಕಾರ.

ಸೆಟ್ಟಿ—ನಮಸ್ಕಾರ. ಏ, ಕರಿಯ, ರಾಯರನ್ನು ಜಾಗ್ರತೆಯಾಗಿ ಊರಿ ಗೊಯ್ದು ಮುಟ್ಟಿಸು. ಮತ್ತೆ ಬಂದು ಬೆಟ್ಟಿಯಾಗುತ್ತೇನೆ. ನಾಯ ಕರೆ, ನಮಸ್ಕಾರ.

ಕರಿಯ—ಲಗುಬಗೆಯಿಂದ ಹೆಜ್ಜೆ ಹಾಕಿರಿ, ಬುದ್ಧಿ. ಬಿರುಗಾಳಿಯು ಇಲ್ಲಿಯ ವರೆಗೂ ಹಬ್ಬುವಂತೆ ಕಾಣುತ್ತದೆ.

ಭೀಮಣ್ಣ—ಇದೇನು, ಕರಿಯ ? ಇಂದಿನ ಸೂರ್ಯಾಸ್ತವೇ ವಿಚಿತ್ರ ವಾಗಿದೆ. ರಕ್ತದ ಮಡುವಿನಲ್ಲಿ ಮುಳುಗಿದವರಂತೆ ಸೂರ್ಯನು ಎಷ್ಟು ಭೀಕರವಾಗಿದ್ದಾನೆ ! ಒಂದು ಅಮಾನುಷ ಕಳೆಯೇ ಆಕಾಶವನ್ನೆಲ್ಲ ಆವರಿಸಿಕೊಂಡಿದೆ.

ಕರಿಯ—ಏನೋ, ತಿಳಿಯದು ಬುದ್ಧಿ. ಇಲ್ಲಿ ನೋಡಿರಿ, ಚಂದಪ್ಪನು ಹೇಗೆ ಬಣ್ಣಗುಂದಿ ಬಿಳುಪೇರಿ ಉದಿಸುತ್ತಿರುವನು ! ಹುಟ್ಟಿದ ಮೇಲೆ ಹುಣ್ಣಿಮೆಯ ಚಂದ್ರಾಮನು ಹೀಗೆ ಬಂದುದನ್ನು ನಾನು ಕಂಡಿದ್ದಿಲ್ಲ. ಗಾಳಿ ಬಡಿದವರಂತೆ ಬನದಲ್ಲಿ ಹೇಗೆ ಮುಸುಕು ಹಾಕಿರುವನು ನೋಡಿರಿ !

ಭೀಮಣ್ಣ—ಲಗುಬಗೆಯಿಂದ ಹೆಜ್ಜೆ ಹಾಕು, ಕರಿಯ. ಬೇಗನೆ ಹೋಗಿ ಮನೆ ಮುಟ್ಟಬೇಕು. ಬಾಯಿಯವರು ಮತ್ತೇನು ಹೇಳಿ ಕಳುಹಿದರು ? ಅವರಿಗೆ ಬೇಕಾದ ದಂತಹಣಿಗೆಯನ್ನು ಕೊಂಡಿದ್ದೀಯಾ ?

ಕರಿಯ—ಕೊಂಡಿದ್ದೇನೆ, ಬುದ್ಧಿ. ಟೊಪ್ಪಿಗೆ ಹೆಣೆಯಲು ಲೌಕರಿ ತರಲು ಹೇಳಿದ್ದರು. ಅದನ್ನೂ ತಂದಿದ್ದೇನೆ.

ಭೀಮಣ್ಣ—ಮತ್ತೇನಾದರೂ ಕೇಳಿದರೆ, ಬಾಯಿಯವರು ?

ಕರಿಯ—ಕೇಳಿದರು, ಬುದ್ಧಿ. 'ಇವರ ಕೆಲಸಕ್ಕೆ ಮುಕ್ತಾಯವಿಲ್ಲವೇನೊ ಕರಿಯ ? ಎಷ್ಟು ತಿಂಗಳಾಯಿತು, ನಡೆದೇ ಇದೆ !' ಎಂದು ಮರುಗಿ ಕೇಳಿದರು. 'ಇಲ್ಲ, ತಾಯಿ. ಇದೇ ಕಡೆಯ ದಿವಸ. ಇಂದು ಎಲ್ಲ ಮುಗಿದು ಧಣಿಯರು ನಿಶ್ಚಿಂತರಾಗುವರು' ಎಂದು ನಾನು ಹೇಳಿದೆ. 'ಆ ದೇಸಾಯಿಗೆ ತಕ್ಕ ಶಿಕ್ಷೆಯಾಯಿತೇನೋ, ಕರಿಯಾ ?' ಎಂದು ಪ್ರಶ್ನೆ ಮಾಡಿದರು. 'ಇನ್ನೂ ಇಲ್ಲ, ತಾಯಿ. ಇಂದು ನಿಶ್ಚಯವಾಗಿ ಆಗುವದು' ಎಂದು ನಾನು ಹೇಳಿದೆ. ಆ ಬಳಿಕ 'ಇಂದು ಧಣಿಯರನ್ನು ಬಿಟ್ಟು ಬಂದರೆ ಒಳಗೆ ಬರಗೊಡಲಿಕ್ಕಿಲ್ಲ ನೋಡು. ಇಂದು ಹುಣ್ಣಿಮೆಯ ಬೆಳದಿಂಗಳು ಬೀಳುವದು. ಕರ್ಜಿಕಾಯಿ ಮಾಡಿದ್ದೇವೆ, ಚಕ್ಕುಲಿ-ಬುರಬೂರಿ ಕರಿದಿದ್ದೇವೆ. ಅವರನ್ನು ಕರೆದುಕೊಂಡು ಬಾ. ಬೆಳದಿಂಗಳಲ್ಲಿ ಪಂತಿ ಮಾಡಿ ನಿನ್ನ ಬೈಲಾಟವನ್ನು ನೋಡಲು ಬರುವೆವಂತೆ' ಎಂದು ಹೇಳಿದರು ಬುದ್ಧಿ.

ಭೀಮಣ್ಣ—ಕರಿಯ, ಲಗುಬಗೆಯಿಂದ ಕಾಲು ಹಾಕು. ಬೇಗನೆ ಹೋಗಿ ಮನೆ ಮುಟ್ಟಬೇಕು.

ಕರಿಯ—ಅಲ್ಲಿ ನೋಡಿರಿ, ಬುದ್ಧಿ ! ಮುಳುಗಿಹೋದ ಸೂರ್ಯನ ದೆವ್ವ ಬೆಳಕು ಇಂಚಲಾಪುರದ ಮೇಲೆ ಹೇಗೆ ಬಿದ್ದುಕೊಂಡಿದೆ, ನೋಡಿರಿ.

ಭೀಮಣ್ಣ— ದಾರಿಯ ಎಡಕ್ಕೆ ಕೇಳಿ ಬಂದ ಸಪ್ಪಳವೇನದು, ಕರಿಯಾ ?

ಕರಿಯ—ಇಲ್ಲಿಯೇ ಅಡವಿಯಲ್ಲಿಯ ಕಾಡುಮೃಗವಾಗಿದ್ದೀತು, ಬುದ್ಧಿ. ಎಡಬಲಕ್ಕೆ ಇಲ್ಲಿ ದೊಡ್ಡ ಝಾಡಿಯಿದೆ. ಇಂಚಲಾಪುರದಾಚೆಗಿನ ಅಡವಿ ಇಲ್ಲಿ ಸುರುವಾಗುವದುಂಟು.

ಭೀಮಣ್ಣ—ಇಷ್ಟೇಕೆ ಮೆಲ್ಲನೆ ನಡೆಯುತ್ತೀ ? ಬೇಗ ಬೇಗ ಕಾಲುಹಾಕು, ಕರಿಯ. ಹೋಗಿ ಮನೆಮುಟ್ಟಬೇಕು.

ಕರಿಯ—ಅಲ್ಲಿ ನೋಡಿರಿ, ಬುದ್ಧಿ ! ದಕ್ಷಿಣಕ್ಕೆ ಜೋಲಿ ಹೊಡೆದ ಬಿರುಗಾಳಿಯು ಇಲ್ಲಿಯೇ ಸಮೀಪಿಸಿತು. ಬಿರುಗಾಳಿಯು ಹೇಗೆ ಬುಸುಗುಟ್ಟುತ್ತಬರುತ್ತಿದೆ ನೋಡಿರಿ ! ಟೊಂಗೆಗೆ ಟೊಂಗೆಗಳೇ ಮುಗಿಲಲ್ಲಿ ಹಾರಾಡುತ್ತಿವೆ. ಬಂತು, ಇಲ್ಲಿಯೇ ಬಂತು, ಬುದ್ಧಿ. ಸಿಡಿಲಿನಂತೆ ತಲೆಯ ಮೇಲೆ ಒಡೆದು ಬಂದಿತು ಬಿರುಗಾಳಿ. ಕಣ್ಣು ಕತ್ತಲೆಗೂಡಿಸಿದವು. ಧೂಳಿ ಮುಸುಗಿಕೊಂಡಿದೆ ಎಲ್ಲೆಡೆಗೆ. ಹೀಗೆ, ಈ ಮರದ ಕೆಳಗೆ ಬನ್ನಿರಿ, ಬುದ್ಧಿ. ಬಿರುಗಾಳಿಯು ಸೆಳೆದು ಹೋಗುವತನಕ ಇಲ್ಲಿ ನಿಂತುಕೊಂಡಿರೋಣ.

ಭೀಮಣ್ಣ—ಎಲ್ಲಿದ್ದೀಯೋ, ಕರಿಯ ? ಎಲ್ಲಿದೆ ಆ ಮರ ? ಅಯ್ಯೋ, ನನ್ನ ರುಮಾಲು ಕಳಚಿಬಿತ್ತು, ಈಗ ತೊಗೊಂಡು ಬಂದೆ, ನಿಲ್ಲು.

ಕರಿಯ—ರುಮಾಲು ಹೋಗಲಿ, ಧಣಿಯರೆ. ಬೇಗ ಬನ್ನಿರಿ ಇತ್ತ. ಇಲ್ಲಿ ಬನ್ನಿರಿ. ಇಲ್ಲಿ ನಾನಿದ್ದೇನೆ, ಕರಿಯ. ಅಯ್ಯಯ್ಯಪ್ಪ, ಎಂಥ ಗುಡುಗು ! ಎಂಥ ಗಾಳಿ ! ಇಲ್ಲಿ ಬನ್ನಿರಿ ಬುದ್ಧಿ.

(ದಾರಿಯ ಎಡ ಮಗ್ಗುಲಿನ ಅಡವಿಯೊಳಗಿಂದ ಸಣತಮ್ಮನು ಬಂದು ಕೊಡಲಿಯಿಂದ ಭೀಮಣ್ಣನಾಯಕನ ತಲೆಗೆ ಹೊಡೆಯಲು ಅವನು ಚೀರಿ ನೆಲಕ್ಕೆ ಬೀಳುವನು)

ಭೀಮಣ್ಣ—ಅಯ್ಯೋ ! ಕರಿಯ ! ಸತ್ತೆ ! ಘಾತವಾಯಿತು ತಲೆಯ ಮೇಲೆ ಸಿಡಿಲು ಬಿತ್ತು. ಅಯ್ಯೊ !

ಕರಿಯ—ಅಯ್ಯೋ. ಎಲ್ಲಿ? ಏನಾಯಿತು ಧಣಿಯರಿಗೆ? (ಹುಡುಕಾಡುವನು)

ಸಣತಮ್ಮ—(ಕಾಲಿನಿಂದ ಒದ್ದು) ನೀಚ, ಬೀಳಿಲ್ಲಿ. ಇನ್ನೆಲ್ಲಿ ಹೋಗುತ್ತಿ? ನನಗೆ ದೇಹಾಂತ ಶಿಕ್ಷೆಯನ್ನು ಕೊಡಿರೆಂದು ಬೇಡಲು? ಅದರಲ್ಲಿ ಆನಂದವಿತ್ತಲ್ಲವೆ ನಿನಗೆ? ಸಾಹೇಬರ ಮೋರೆಗೆ ಮಂಕುಬೂದಿ ಹಚ್ಚಿ, ಪಹರೆಯವರಿಂದ ಪಾರಾಗಿ ಜೀವನದ ಹಂಗುದೊರೆದು ಬಂದೆ. ಈಗ ನನ್ನ ಸೇಡು ಸಾಧಿಸಿತು. ಇನ್ನು ನಾನು ಸತ್ತರೂ ಅಷ್ಟೆ. (ಒದೆಯುವನು) (ಅವನ ಹಿಂದಿನಿಂದ ಗಂಗಜ್ಜನು ಬಂದು ಕಠಾರಿಯಿಂದ ಸಣತಮ್ಮನನ್ನು ಇರಿದು ಕೆಡಹುವನು)

ಸಣತಮ್ಮ—ಅಯ್ಯೋ! ಸತ್ತೆ! ಯಾರೋ ದುಷ್ಟರು ಬಂದು ನನ್ನನ್ನು ಹೊಡೆದು ಕೆಡವಿದರು. ಸುರಕ್ಷಿತವಾಗಿ ಪಾರಾಗುತ್ತಿದ್ದೆ. ಸತ್ತೆ. ಅಯ್ಯೋ!

ಗಂಗಜ್ಜ—ದುರಾತ್ಮ. ಈಗ ನಿನ್ನ ಚಲ್ಲಾಟ ನಿಂತಂತಾಯಿತು. ಪಹರೆಯವರನ್ನು ತಪ್ಪಿಸಿ ಬಂದರೆ ನಿನ್ನ ದೈವವನ್ನು ತಪ್ಪಿಸಬಲ್ಲೆಯಾ? ನಿನ್ನ ಅದೃಷ್ಟದಂತೆ ಬೆನ್ನು ಹತ್ತಿ ಬಂದಿದ್ದೇನೆ ನೋಡು. ನಿನ್ನ ರಕ್ತದಲ್ಲಿ ಕೈಯೆದ್ದಿ ನನ್ನ ಬೇಗೆಯನ್ನು ನಂದಿಸುಥೆನು. ಆದರೆ-ಅಯ್ಯೋ? ಇದೇನು ಅನರ್ಥವಾಯಿತು? ನಮ್ಮ ನಾಯಕರನ್ನು ಹೊಡೆದು ಕೆಡವಿದೆಯಿಲ್ಲ? ಆ ಕಂಟಿಯಾಚೆಗೆ ನಿನಗೆ ನನ್ನ ಕೈ ತಾಕಿದ್ದರೆ! ನಾಯಕರ ಕೂದಲು ಕೊಂಕುತ್ತಿರಲಿಲ್ಲ. ನನ್ನ ಸೇಡು ತೀರಿತು. ಆದರೆ-ಅದು ತೀರುವಷ್ಟರಲ್ಲಿ- ಇನ್ನೊಂದು- ಎಂದೂ ಮುಗಿಯದ ಸೇಡು-ಒಂದು ನಿಂತಿತು. ನೀಚ, ಇದಕ್ಕಾಗಿ ನಿನಗೆ ರವ ರವ ನರಕ-ತಡೆ, ನರಕವಿದೆಯೋ ಇಲ್ಲವೋ ಯಾರು ಬಲ್ಲರು. ಇಲ್ಲಿಯೇ ನನ್ನ ಸೇಡು ತೀರಿಸುತ್ತೇನೆ. ಇದು ನಾಯಕರನ್ನು ಹೊಡೆದಿದ್ದಕ್ಕಾಗಿ- ಇದು ಅವರನ್ನು ಕೆಡವಿದ್ದಕ್ಕಾಗಿ—ಅಯ್ಯೋ! ಹುಚ್ಚನಂತೆ ಶವವನ್ನು ಇರಿದೇನು ಫಲ? ನಮ್ಮ ನಾಯಕರ ದುರ್ಮರಣವನ್ನು ತಪ್ಪಿಸದೆ ಹೋದೆನೆ! ಅವರನ್ನು ಉಳಿಸದಾದೆನೆ! ಅಯ್ಯೋ! (ಹೊರಳಾಡುವನು.)

ಕರಿಯ—ಅಯ್ಯೋ, ವಿಧಿಯೆ! ಎಂಥ ಹೊತ್ತು ತಂದೆ! ದೇವರೆ! ನಿನ್ನ ಸೃಷ್ಟಿಯಲ್ಲಿಯೂ ಇಂಥ ಅನ್ಯಾಯವೆ? ಯಾರವರು? ಅಪ್ಪಾ, ನಿಮಗೆ

ಕರುಣೆಯಿದ್ದರೆ-ನನಗಾದ ಶತಕೋಟಿ ದುಃಖದ ಒಂದು ಪಾಲು ನಿಮಗಾಗಿದ್ದರೆ-ನನ್ನ ಸರ್ವಸ್ವವನ್ನು ಉಳಿಸಿಕೊಡಿರಿ. ಜನ್ಮಾಂತರದಲ್ಲಿ ನಿಮ್ಮವನಾಗುತ್ತೇನೆ. ಈ ಗಾಯವನ್ನು ಮಾಯಿಸಿರಿ. ಈ ರಕ್ತವನ್ನು ಬಂಧಿಸಿರಿ ಅಯ್ಯೋ !

ಗಂಗಜ್ಜ—ನಾನು, ಗಂಗಜ್ಜ,-ಕರಿಯ, ಆ ನೀಚ ಸಣತಮ್ಮನು ಇದನ್ನೆಲ್ಲ ಮಾಡಿದ. ನಾನು ಅವನ ಬೆನ್ನಟ್ಟಿ ಬಂದೆ. ಇದೋ ನನ್ನ ರುಮಾಲ ಮಳೆಯಲ್ಲಿ ತಪ ತಪ ತೊಯ್ದಿದೆ. ಇದನ್ನು ನಾಯಕರ ತಲೆಗೆ ಕಟ್ಟು. ಮುಗಿಲುಗಂಗೆಯು ನಾಯಕರ ಗಾಯವನ್ನು ಮಾಯಿಸಬಹುದು. ಅಯ್ಯೋ !

(ಕೊಡುವನು. ಕರಿಯನು ಆದರಿಂದ ಗಾಯವನ್ನು ಮೆಲ್ಲನೆ ಒತ್ತುವನು.)

ಭೀಮಣ್ಣ—(ಕ್ಷೀಣಸ್ವರದಿಂದ) ಯಾರವರು, ಕರಿಯ ?

ಕರಿಯ—(ಆನಂದದಿಂದ) ಓ ! ಇಲ್ಲಿಯೇ ಇದ್ದೇನೆ ದೇವರು. ಈಗ ಸ್ವಲ್ಪ ಹಿತವಾಗಿದೆಯೇ ?

ಭೀಮಣ್ಣ—ಓ, ಕರಿಯ, ಇನ್ನೂ ನಿನಗೆ ನನ್ನ ಪ್ರಾಣದಾಸೆಯಿದೆಯೆ ? ಹುಚ್ಚ ನೀನು ! ಮನೆಗೆ ಹೋಗಿ ಹೇಳು, ಅಲ್ಲಿ ದಾರಿ ಕಾಯುತ್ತ ಕೂತಿರಬಹುದು. ನಾಯಕರು ಹಾದಿಯಲ್ಲಿಯೇ ಕಳೆದು ಹೋದರೆಂದು ಅವರಿಗೆ ಸಿಡಿಲು ಬಡಿದಿತ್ತೆಂದು. ಅವರ ಕೆಲಸಕ್ಕೆ ವಿಜಯವಾಯಿತೆಂದು ಹೇಳು. ಮನೆತನಕ ಬಂದು ಎಲ್ಲರನ್ನು ಕಾಣಬೇಕೆಂದು ಅವರು ಮಿತಿಮೀರಿ ಪ್ರಯತ್ನಿಸಿದರೆಂದು ಹೇಳು. ಕಂಡು....ಅವರೊಡನೆ ಹಿಗ್ಗಿ ....ದೈವವಿರಲಿಲ್ಲ....ದೇವರ ಮನಸ್ಸಿಗೆ ಬರಲಿಲ್ಲ........(ಸಾಯುವನು)

ಕರಿಯ—(ನಾಯಕರ ಮೈಮೇಲೆ ಬಿದ್ದು) ಅಯ್ಯೋ ! ಗಂಗಜ್ಜ, ನಾಯಕರು ತೀರಿಹೋದರು. ಅವರ ಜೀವವು ಬನದಿಂದ ಒಂದ ಅರಗಿಳಿಯಂತೆ ಬನಕ್ಕೆ ಹಾರಿಹೋಯಿತು. ನಾವು ಹುಚ್ಚರಂತೆ ಕುಳಿತೆವು. ಮುಗಿಲೇ ಕಡಿದುಕೊಂಡು ಬಿದ್ದಿತಲ್ಲ, ದೇವರೆ !

ಗಂಗಜ್ಜ—ಅಯ್ಯೋ ! ಕರಿಯ, ಒಂದು ಕ್ಷಣ ಹೊತ್ತು ಮೊದಲು ಆ ನೀಚನು ನನ್ನ ಕೈಗೆ ಸಿಕ್ಕಿದ್ದರೆ ನಾಯಕರು ಹೀಗೆ ಕಳೆದು ಹೋಗುತ್ತಿರಲಿಲ್ಲ. ಈ ಸಣತಮ್ಮನನ್ನು ನುಚ್ಚುನುರಿ ಮಾಡಿ ಹೆಡಿಗೆಯಲ್ಲಿಟ್ಟು

ನಾಯಕರಿಗೆ ತೋರಿಸುತಿದ್ದೆ. ಇಲ್ಲಿ ಬಿದ್ದಿರುವವನು ನೋಡು ಆ ನೀಚ. ನಾಯಕರನ್ನು ಇವನು ಒಂದು ಸಲ ಹೊಡೆದ. ಇವನನ್ನು ನಾನು ನೂರು ಸಲ ಇರಿದೆ. ಆದರೇನು ? ನಾಯಕರನ್ನು ಬದುಕಿಸಬಲ್ಲೆನೆ ? ಕರಿಯ. ನನಗಿನ್ನು ದಿಕ್ಕಿಲ್ಲ. ಯಾರೂ ದಿಕ್ಕೇ ಇಲ್ಲ. ನನ್ನ ದಿಕ್ಪಾಲಕನು ಹೊರಟು ಹೋದನು. ನಾನಿನ್ನು ಅರಣ್ಯಗಳ ಪಾಲು, ಕೆರೆ ಬಾವಿಗಳ ಪಾಲು. ಅಯ್ಯೋ !

(ಬಿದ್ದು ಹೊರಳಾಡುವನು.)

ಕರಿಯ—ಅಯ್ಯೋ ! ನಮ್ಮೊಡೆಯನನ್ನು ಈ ನೀಚನು ಕೊಂದನೆ ? ನಮ್ಮ ಸೊತ್ತನ್ನು ಇವನು ಅಪಹರಿಸಿ ತಾನೂ ಹಾಳಾಗಿ ಹೋದನೆ ? ಅಯ್ಯೋ ! ಗಂಗಜ್ಜ, ನಾನಿನ್ನು ಅಪ್ಪನವರಿಗೆ ಏನು ಹೇಳಲಿ ? ಬಾಯಿಯವರಿಗೆ ಏನೆಂದು ಮೋರೆ ತೋರಿಸಲಿ ? ರಾಮ-ರಾವಣರ ಬೈಲಾಟದಲ್ಲಿ ರಾಮನೇ ಗೆಲ್ಲುವನೆಂದು ಹೇಗೆ ಹೇಳಲಿ ?

(ಬಿದ್ದು ಹೊರಳಾಡುವನು. ತೆರೆಯು ಬೀಳುವದು.)

## ಪಾತ್ರಗಳು

ರಾಮಣ್ಣ
ಚೆನ್ನಪ್ಪ
ನಾರಾಯಣರಾಯರು
ದುರುಗವ್ವ
ತುಳಸಿ
ವಸಂತ

---

# ಅಂಕ ೧

## ಪ್ರವೇಶ ೧

[ದುರುಗವ್ವನ ಮನೆ. ಮುಂಚೆಯ ಬಾಗಿಲದ ಎದುರಿಗೆ ಒಂದು ಸಣ್ಣ ಕಟ್ಟೆಯಿದೆ. ಅದರ ಮೇಲೆ ಚೆನ್ನಪ್ಪನು ಗಂಭೀರನಾಗಿ ಎಲಡಕೆ ಹಾಕುತ್ತ ಕುಳಿತಿರುವನು. ದುರುಗವ್ವನು ಅಲ್ಲಿಯೇ ಹತ್ತಿರದಲ್ಲಿ ಅನ್ನಕ್ಕಿಡತೊಡಗಿರುವಳು. ಅವಳ ಹದಿನಾರು ವರುಷದ ಮಗಳಾದ ತುಳಸಿಯು ಚೆನ್ನಪ್ಪನನ್ನು ಎವೆಯಿಕ್ಕದೆ ನೋಡುತ್ತ ನಿಂತಿರುವಳು. ಇಷ್ಟರಲ್ಲಿ ದುರುಗವ್ವನ ಗಂಡನಾದ ರಾಮಣ್ಣನು ಕುಂಟುತ್ತ ಒಳಕ್ಕೆ ಬರುವನು. ಎಡಗಾಲಿನ ಪಾದದ ಹತ್ತಿರಕ್ಕೂ ಮೊಳ ಕಾಲಿಗೂ ಅರಿವೆಯನ್ನು ಸುತ್ತಿದ್ದಾನೆ. ಸುಮಾರು ಒಂದು ತಿಂಗಳ ಗಡ್ಡವು ಬೆಳೆದಿದೆ. ಒಂದು ಹೊಲಸಾದ ಪಂಚೆಯನ್ನು ಉಟ್ಟುಕೊಂಡದ್ದಲ್ಲದೆ ಒಂದು ಹರಕು ಶರ್ಟನ್ನು ಹಾಕಿ ಚಿಂದಿಯಂತಿದ್ದ ಒಂದು ರುಮಾಲನ್ನು ಇಟ್ಟುಕೊಂಡಿದ್ದಾನೆ.]

ರಾಮಣ್ಣ—ಏನು ? ಏನು ಮಾಡತಿದಿ ?

ದುರುಗವ್ವ—ಬರ್ರಿ. ಬಂದ್ರ್ಯಾ ? ನನಗ ಗೊತ್ತು, ನಿಮ್ಮ ದೇಶಾಂತರ ಕಡಿಕೆ ಎಲ್ಲಿ ಮುಗೀತದಂಬೋದು! ನಾಚಿಕೆ ಇಲ್ಲದ ನಿಮಗ, ಉಟ್ಟ ಧೋತರ ದಲೆ ಹೊರಟ ಮನಿಗೆ ತಿರುಗಿ ಬರಲಿಕ್ಕೆ ?

ರಾಮಣ್ಣ—ಬರೀ ಕೊಟ್ಟು ಮ್ಯಾಲ ಬರುಗಣಿ ಕೊಡತೀಯಲ್ಲವ ! ದಯಾ ಮಾಯಾ ಹಾಕಿಲ್ಲೇನು ನಿನ್ನ ಹೊಟ್ಯಾಗ ದೇವರು ? ನನ್ನ ಸಂಶಯ ನಿವಾರಣ ಆಗಿದ್ದರ ನಾ ಎಲ್ಲಿ ಹೋಗುತ್ತಿದ್ದೆ ಮನಿಬಿಟ್ಟು ?

ದುರುಗವ್ವ—ನಿವಾರಣಿ ಆಗೋ ಸಂಶಯೇನs ನಿಮ್ಮದು ? ನನ್ನ ಹೊಟ್ಟೀಲೆ ಹುಟ್ಟಿದ ಕೂಸು ನಿಮ್ಮದು ಹೌದೋ ಅಲ್ಲೋ ಅಂತ ಸಂಶಯ ಬಂದರ ನಾ ಏನು ಮಾಡೋದು ಅದಕ, ನಾನು !

ರಾಮಣ್ಣ—ಉಂ! ಇರ್ಲಿ ಬಿಡು ! ಮನಸ್ಸು ಸಡ್ಲ ಬಿಟ್ಟಂಗ ಬಾಯೀನು ಸಡ್ಲ ಬಿಡಬ್ಯಾಡ ! ಇವರ್ಯಾರು........ಇಲ್ಲಿ ಕೂತವರು........ ? ಅಯ್ಯೋ ! ಈಗಾರ ಏನಾತು ? ಇವನ್ನ ಮನಿಬಿಟ್ಟು ಹೊರಗಹಾಕು. ಅಂದ್ರರ ನಮ್ಮ ಸಂಸಾರ ಸಾಗೀತು ಮತ್ತ ?

ದುರುಗವ್ವ—ಹುಂ ! ಹೊರಗ ಹಾಕತೇನಿ ! ನನ್ನ ಬಿಟ್ಟಹೋದ ಬಸವನ್ನ

ಒಳಗತಗೋಬೇಕಂತ! ನನ್ನ ನಂಬಿಕೊಂಡಿರೋ ಚೆನ್ನಮ್ನ ಮನಿಬಿಟ್ಟು ಹೊರಗ ಹಾಕಬೇಕಂತ! ಚಲೋ ನ್ಯಾಯ, ಏನಾರ ಆಗಲಿ! ಇಕಾ! ಇಲ್ಲಿ ನೋಡು, ನೀ ನನ್ನ ಮದುವ್ಯಾದ ಗಂಡ. ನೀ ನನಗ ಕಟ್ಟಿದ್ದು ಇದೊಂದು ತಾಳಿಮಣಿ. ಅ....ದ ...ನ್ನ ಹರದು ಬಿಟ್ಟೆ? ತೊಗೊಂಡು ಹೋಗು! ನಾ ಹೆಂಡತಿ ಅಲ್ಲ! ನೀ ಗಂಡಲ್ಲ! ನಾ ಏನಿದ್ದೇನಿ ಗೊತ್ತದ ಏನು............... ?

ರಾಮಣ್ಣ—(ಸಿಡಿಲು ಬಡಿದವನಂತೆ) ಅಯ್ಯ! ಮಿಂಡಿ! ಮಿಂಡಿ! ಮಿಂಡಿ ಮನಿಗೆ ನಾಯಾಕ ಬಂದೆ! ಹೂಂ ಹೊಂಡು! (ಮುಂದೆ ನಡೆದು ಮಗಳನ್ನು ನೋಡಿ) ಏ! ತುಳಸಿ! ಈ ಮನ್ಯಾಗೆ ನೀ ಯಾಕ ನಿಂತಿ! ನಡಿ! ನನ್ನ ಬೆನ್ನು ಹತ್ತು!

(ತುಳಸಿಯು ಹೊರಡಲು ಅನುವಾಗುವಳು)

ದುರುಗವ್ವ—ನೀನೂ ಹೋಗತೀಯೇನs ?

ತುಳಸಿ—(ಕೆರಳಿದ ಕಣ್ಣುಗಳಿಂದ) ಹೌದs ಮತ್ತ! ಇಲ್ಲದಿದ್ದರ ನಿನ್ನ ಚೆನ್ನ ನನ್ನ ಬೆನ್ನ ಹತ್ಯಾನು! ಆಗ ಬಿದ್ದೀತು ನನಗೆ ನಿನಗ ಜಗಳ! ಅಪ್ಪನ ಕೂಡ ಊರು ತಿರಗೋದು ಬೇಕು, ನಿನ್ನ ಮನಿ ಹತ್ತಿರದ ಹವಾ ಬ್ಯಾಡಾ!

ದುರುಗವ್ವ—ಹೋಗು! ಹೋಗು! ನನಗೆ ಗೊತ್ತದ ನೀ ಏನಾಗತಿ ಅಂಬೋದು!

(ತುಳಸಿಯು ರಾಮಣ್ಣನನ್ನು ಹಿಂಬಾಲಿಸಿ ಹೋಗುತ್ತಾಳೆ.)

(ತೆರೆಯು ಬೀಳುತ್ತದೆ.)

---

## ಪ್ರವೇಶ ೨

(ಅದೇ ಊರಿನಲ್ಲಿ ನಾರಾಯಣರಾಯರ ಮನೆ. ಒಳಂಗಳದಲ್ಲಿ ಎಡಕ್ಕೆ ಒಂದು ಸಣ್ಣ ಕೋಣೆಯಿದೆ. ಒಳಂಗಳದ ಮಧ್ಯದಿಂದ ನೆಟ್ಟಗೆ ದಾರಿಯು ಡ್ರಾಯಿಂಗ್ ರೂಮಿಗೆ ಹೋಗಿದೆ. ಆ ರೂಮಿನ ನಾಲ್ಕೂ ಗೋಡೆಗಳನ್ನು ಚಿತ್ರ, ಛಾಯಾಚಿತ್ರ

ಗಳಿಂದ ವಿಧವಿಧವಾಗಿ ಶೃಂಗರಿಸಿದೆ. ಒಂದು ವಿರಾಮ ಕುರ್ಚಿಯ ಮೇಲೆ ನಾರಾಯಣರಾಯರು ತಮ್ಮ ಪೋಷಾಕಿನಲ್ಲಿಯೇ ಕುಳಿತುಕೊಂಡಿದ್ದಾರೆ.)

ನಾರಾಯಣರಾಯರು—ಏ ! ವಸಂತಾ !

ವಸಂತ—(ಒಳಗಿನಿಂದ) ಬಂದೆ ದ್ಯಾವ್ರೂ.

ನಾರಾಯಣರಾಯರು—ಈ ನನ್ನ ಟೆನಿಶ್ ಶೂ ಬಿಚ್ಚು. (ಬಿಚ್ಚುವನು) ಹೊಂ ಹೋಗಿನ್ನು, ಒಂದು ಕಪ್ಪು ಚಹಾ ತೊಗೊಂಡು ಬಾ.

ವಸಂತ—ಮೈಸೂರ ಅಂಗಡಿಯಿಂದ ತರಲೋ, ಏನು ಉಡುಪಿ ಓಟೆಲ್ನೊ, ರಾಯರ ?

ನಾರಾಯಣರಾಯರು—(ಸಿಟ್ಟಿನಿಂದ) ಮಾರ್ನಿಂಗ್ ಟೀ ಉಡುಪಿ.ಹಾಟೆಲ್ಲು, ಇವ್ನಿಂಗ್ ಕಾಫಿ ಮೈಸೂರು ರಿಸ್ತಾರಾಂ, ಎಷ್ಟು ಸಲ ಹೇಳ ಬೇಕೋ, ನಿನಗೆ ? ಸಾಕಾತು ಈ ಗೋಳು ! ಇನ್ನು ಲಗ್ನಾ ಆರ ಮಾಡಕೋತೀನಿ. ನೋಡಲಾರೆ, ಇದನ್ನು !!

ವಸಂತ—ನನ್ನ ಮ್ಯಾಲೆ ಸಿಟ್ಟಾಗಿ ಮಾಡಿಕೋಬ್ಯಾಡ್ರಿ, ರಾಯರ ! ಬರಾ ಬರಿ ಆಗಾತಿಲ್ಲ.

ನಾರಾಯಣರಾಯರು—ಇರ್ಲಿ ಹೋಗು, ತುಂಟಮಗನೆ ! ಚಾಷ್ಟಿ ಬ್ಯಾರೆ ಬೇಕು ನಿನಗ ! (ವಸಂತನು ಹೋಗುತ್ತಾನೆ) ಸಿಟ್ಟಾಗಿ ಮಾಡಿಕೊಳ್ಳದೇ ಇದ್ರ, ಪ್ರೀತಿ ಮಾಡ್ಯಾರs ಮಾಡಿಕೋ ಬೇಕs, ಲಗ್ನಾ ? ಆಮ್ಯಾಲಾರs ಏನು ? ಗಂಡ, ಹೆಂಡತೀ ಮ್ಯಾಲ ಸಿಟ್ಟು-ಹೆಂಡತಿ, ಗಂಡನ ಮ್ಯಾಲ ಸಿಟ್ಟು ! ಇನ್ನು ವಸಂತನ ಮ್ಯಾಲ ಸಿಟ್ಟಾಗೋದು ಬೇಕೂ ಅಂತ ಕಾಣತದ, ಅಂಗಡಿಗೆ ಹೋಗಿ ಹೇಳಿದಂಥ ಚಹಾ ಆರs ತಂದು ಕೊಟ್ಟಾನು. ಹೆಂಡತಿ ಸಿಟ್ಟಿಗೆದ್ರ, ಮನ್ಯಾಗ ಚಹಾ ಮಾಡೋ ಹಂಗಿಲ್ಲ ; ಅಂಗಡಿಯಿಂದ ತರಿಸಿದರ ಮತ್ತ ರಂಬಾಟ ! (ಕಾಲ ಕುಪ್ಪಸಗಳನ್ನು ತೆಗೆಯ ಹತ್ತುತ್ತಾನೆ. ಇಷ್ಟರಲ್ಲಿ ರಾಮಣ್ಣನು ಕುಂಟುತ್ತಾ ಓಡಿ ಬಂದು ಬಾಗಿಲಹತ್ತಿರ ಹಾಕಿದ್ದ ಬಾಕಿನ ಮೇಲೆ ಕುಳಿತು ಕೊಳ್ಳುವನು.) ಇವ ಯಾರಪ್ಪಾ! ಕಾಲು ಮುರಿದ ಕಾಮಣ್ಣಾ ! ಯಾರೊ ನೀನು !

ರಾಮಣ್ಣ—ನಾನು, ಹುಲಮುನಿ ರಾಮಣ್ಣ, ಧಣೇರ ! ನನ್ನ ಗುರುತು ಮರ್ತಿ

ರೇನು, ದೇವ್ರು !

ನಾರಾಯಣರಾಯರು—ನೀನs ? ಈಗ ಯಾಕಲಾ ಬಂದಿದ್ದು ? ಇತ್ತಿತ್ತಲಾಗ ಬಲು ಹಾರಾಡಲಿಕ್ಕ ಹತ್ತೀರಂತ, ನೀನು ನಿನ್ನ ಹೆಂಡತಿ ?

ರಾಮಣ್ಣ—ಹಾಂಗಲ್ಲ, ದೇವ್ರು ! ನಾ ಎಂದ ಹಾರ್‍ಯಾಡಿದ್ದು ? ಕಾಲು ಮುರಿದು ಕುಂಟತೇನಿ, ನಾ ಸೋಳೀಮುಗ !

ನಾರಾಯಣರಾಯರು— ನೀ ಇಲ್ಲ, ನಿನ್ನ ಹೆಂಡತಿ. ವಕೀಲರ ಕಡೆಗೆ ಹೋಗಿದ್ದಳಂತ ? ಕಾಯುದೇ ಸೀರ ಕೆಲಸಾ ನಡೆಸತೇನಂತ ಹೇಳತಿದ್ದಳಂತ ! ಅಬ್ಬಾ ! ಅಂಪೆ ನಾನು! ಹೆಂಗಸಿಗೆ ಯಾಕಣ್ಣಾ ಇಷ್ಟೊಂದು ಹಾರಾಟ? ಖಟ್ಲಿ ಮಾಡು ಹೋಗು, ನನ್ನ ಮ್ಯಾಲ, ಅಂದರ ತಿರುಗಿ ಸಿಗತದ ನಿಮ್ಮ ಮನಿ !

ರಾಮಣ್ಣ—ಹಾಂಗೆಲ್ಲಾ ಅಂದು ಬದುಕೇನs ನಾ, ರಾಯ್ರು ! ನನ್ನ ಹೆಣ್ತಿ ಅಂದಿದ್ದಾಳು ಈ ಮಾತು ! ನಿಮ್ಮ ಹೀರೇರಿಗೆ ಮನಿ ಒತ್ತೀ ಹಾಕಿ ಸಾಲಾ ತಗದಾಗs ಮನಿ ಆಸೇ ಬಿಟ್ಟೆ. ಆ ಬಡ್ಡಿ ಬಾಚೀ,— ಕೊಡೋದು ಆದೀತ್ರೆ ನನಗ ?

ನಾರಾಯಣರಾಯರು—ಈಗಾರ ಏನಾತು ? ಮತ್ತೊಮ್ಮೆ ಹೇಳ್ತೇನಿ ನೋಡು, ನಿನಗ. ಇಂಥಾ ನೂರು ಮನಿ, ನೂರು ಹೊಲ ಬಿದ್ದಾವ ನನ್ನ ಕಿಸೇದಾಗ, ಏನಪಾ, ಅಂದ್ರು. ಹಿರೇರ ಮಾಡಿಟ್ಟ ಆಸ್ತಿ ಕಾಯಕೊಂಡು ಹೋದ್ರ ಸಾಕು ನನಗ. ಇಂಥಾ ಅಡ್ಡಗಾಲು ಹಾಕೊ ಮಸ್ತು ಮಂದೀನ ಬಲ್ಲೆ ! ನಿನ್ನ ಮನಿ ಒತ್ತೀ ಬಿದ್ದು ಈಗ ೧೨ ವರ್ಷ ಆತು. ಸಾಲಾ ಬಡ್ಡಿ ಕೂಡಿ ಮೂರು ಸಾವಿರಕ್ಕ ಬಂದು ಮುಟ್ಟೇದ. ಇನ್ನ ದಾವೆ ಮಾಡ ಹೋಗು, ದಾವೆ ! ಸಿಗತದ, ನಿನ್ನ ಮನಿ! (ಮೀಸೆಯಿಲ್ಲದ ಮೇಲಿನ ತುಟಿಯ ಮೇಲೆ ಕೈಯೆಳೆಯುತ್ತಾನೆ. ಬಾಗಿಲ ಹೊರಗೆ ಮರೆಗೆ ನಿಂತ ತುಳಸಿಯು ಮೆಲುದನಿಯಿಂದ ಕರೆಯುತ್ತಾಳೆ.)

ತುಳಸಿ—ಆಪ್ಪಾ ! ನಡಿ, ಹೋಗೋಣಿನ್ನ !

ರಾಮಣ್ಣ—(ಗಡಿಬಿಡಿಯಿಂದೆದ್ದು) ನೀ ಯಾಕ ನಡುವ ಬಾಯಿಹಾಕಿದೀ ? ಮಾತಾಡಬ್ಯಾಡ ಅಂತ ಹೇಳಿದ್ದಿಲ್ಲ, ನಿನಗೆ ? ತುಸು ತಡಿ ಬಂದೆ. (ನಾರಾಯಣರಾಯನ ಕಡೆಗೆ ತಿರುಗಿ) ಇಲ್ಲಿ ನೋಡ್ರಿ-ಧಣೇರ !

ನಾರಾಯಣರಾಯರು—ಹೊರಗೆ ಯಾರನ ತರುಬಿ ನಿಂದ್ರಿಸೀಯಲ್ಲೀ, ಹೆಡ್ಡ ! ಅತಿಥಿ—ಸತ್ಕಾರ, ಏನು ಗೊತ್ತs ಇಲ್ಲ, ನಿನಗೆ ? ಕರಿ ಅವರ್ನ, ಒಳಗೆ ! (ಎದ್ದು ಹೊರಡಲು....)

ರಾಮಣ್ಣ—ಕೂಡ್ರಿ ! ಕೂಡ್ರಿ ! ದೇವ್ರು ! ಯಾರೂ ಇಲ್ಲ, ನನ್ನ ಮ........

ನಾರಾಯಣರಾವ್—ಎಲೇ ಇವನ !

ರಾಮಣ್ಣ—ಹಾಂಗಲ್ಲ, ಕೂಡ್ರಿ ರಾಯರ ! ಹೆಂಗಸೂರದೇನು, ಗಂಡಸೂರಾಗ!

ನಾರಾನಾಯಣರಾಯರು—ಎಲೇ ಇವನ ! ಮತ್ತು ತನ್ನ ಮಾತ ! ಹೆಂಗಸೂರೇನು ಒಂಟು ಕಾಲ ಮ್ಯಾಲ ನಿಂದಿರಬೇಕೂ ಅಂತ ಹೇಳೀದೇನು ಶಾಸ್ತ್ರದಾಗ? ಏನು ಘೋಷಾ ಹಾಕ್ಯಾಳೋ ಈ ಪ್ರಾಣಿ ? ಒಳಗೆ ಬಾರವಾ, ಕೂಡು ! (ತುಳಸಿಯು ಮೈ ಮುದುಡಿಕೊಂಡು ಒಳಗೆ ಬಂದು ಕೂಡುತ್ತಾಳೆ. ನಾರಾಯಣರಾಯನು ಅವಳನ್ನು ದಿಟ್ಟಿಸುತ್ತಲೇ ಇರುತ್ತಾನೆ.) ಹೂಂ ! ಹೇಳಿನ್ನ, ಏನೋ ಹೇಳ್ತಿದ್ದೆಲ್ಲ ?

ರಾಮಣ್ಣ—ನೀವs ಮಾತಾಡತಿದ್ರಿ, ರಾಯರ ! ಮನಿ ಸಂಬಂಧಿ ಬುದ್ಧಿ ಕಲಿಸತಿದ್ರಿ) (ಇಷ್ಟರಲ್ಲಿ ವಸಂತನು ಸರ್ವ್ಹಿಸ್ ಟೀಯನ್ನು ಹೋಟೆಲ್ಲಿನಿಂದ ತೆಗೆದುಕೊಂಡು ಬರುತ್ತಾನೆ. ಕಫವು ಗಂಟಲದಲ್ಲಿ ಹೆಚ್ಚಾಗಿ ರಾಮಣ್ಣನಿಗೆ ಕೆಮ್ಮು ಬರುತ್ತಿರುತ್ತದೆ.)

ನಾರಾಯಣರಾಯರು—ತಂದ್ಯಾ, ವಸಂತ ! ರಾಮಣ್ಣ, ನೀನೂ ಒಂದು ಕಪ್ಪ ಚಹ ತಗೊ, ದಮ್ಮಿಗೆ ಹಿತ ಇದು, ಏನಪಾ ಅಂದ್ರೆ ! ನೀ ಚಹಾ ತಗೋತಿಹೌದಲ್ಲವಾ.........ರಾಮಣ್ಣಾ ! ಈ ಹೆಣ್ಣಮಗಳ ಹೆಸರೇನು ?

ರಾಮಣ್ಣ—ತುಳಸಿರಿ !

ನಾರಾಯಣರಾಯರು—ತುಳಸಕ್ಕಾ ! ಚಹಾ ತಗೋ ನೀನೂ !

ತುಳಸಿ—(ನಾಚಿ) ನಾ ಒಲ್ರೀ !

ನಾರಾಯಣರಾಯರು—ಛೇ! ಒಲ್ಲೆ-ಗಿಲ್ಲೆ ಅನ್ನಬಾರದು. ನಿನ್ನ ಗಂಡ ತಂದು ಕೊಟ್ಟಷ್ಟು ನಾಚತೀಯಲ್ಲ ? ವಸಂತಾ ತಗೊಂಡು ಬಾ ಎರಡು ಕಪ್ಪ! (ವಸಂತನು ಒಳಗಿನಿಂದ ಎರಡು ಕಪ್ಪ-ಬಸಿಜೋಡಿಯನ್ನು ತಂದು ಚಹವನ್ನು ಸುರುವಿ ಮೂವರಿಗೂ ಕೊಡುತ್ತಾನೆ. ತುಳಸಿಯೂ ತುಸು ಕುಡಿದ ಹಾಗೆ ಮಾಡಿ ಕಪ್ಪನ್ನು ಬದಿಗೆ ಸರಿಸುತ್ತಾಳೆ.) ಹೂಂ ! ಕೇಳಪ್ಪಾ ಇನ್ನು

ಮನಿ ಸಂಬಂಧಿ ! ಹೇಳಿದೆನಲ್ಲಾ ನಾನು,—ದಾವೇ ಮಾಡ್ರೀ ಅಂತ ! ನಿನ್ನ ಕಿವ್ಯಾಗ ಏನ ಡಂಗೂರಾ ಹೊಡೀಲ್ಯಾ ಇನ್ನ !

ರಾಮಣ್ಣ—ಹಾಂಗಲ್ಲ, ನೋಡ್ರಿ ರಾಯರ, ನನ್ನ ಹೇಣ್ತೀ ಮಾತು ನನ್ನ ಮ್ಯಾಲ ಯಾಕ ಹಾಕತೀರಿ ? ಆರೇ ಪಾಪ ಆರೇ ಸುತ್ತ. ಆರೇ ಸಂಬಂಧ-ಸೂತ್ರ ಎಲ್ಲಾ ಕಡಕೊಂಡ ಬಂದೇನಿ. ನನಗೇನು ಈ ಮನಿ ಬೇಕಾಗಿಲ್ಲ, ದೇವ್ರು ! (ಕಫವು ಗಂಟಲದಲ್ಲಿ ಸಿಕ್ಕು ಕೆಮ್ಮುತ್ತಾನೆ.) ಈ ಕಾಲ-ಹುಣ್ಣು ಮಾಯೋ ತನಕ ಈ ಊರಾಗ ಇರಬೇಕೂ ಅಂತೇನಿ. ಈ ಕೈಸಾಲಿ ಖೋಲೀ ಒಂದು ಕೊಡ್ರಿ.

ನಾರಾಯಣರಾಯರು—ಹೂಂ ! ಹೌದಲಾ ! ಎಳೀ ಸಿಕ್ಕಮ್ಯಾಲ ಹಚಡಾ ನುಂಗಬೇಕಂತ ಮಾಡೀಯೆನು ! ಕೊಡೂದುಲ್ಲ, ಹೋಗು ! ಕಾಯದೇದ ಪ್ರಕಾರ ಆಗಲಿ ಏನಾಗತsದ !

ರಾಮಣ್ಣ—ಹೊಟ್ಟೀ ಮ್ಯಾಲ ಕಾಲು ಕೊಡಬ್ಯಾಡ್ರಿ, ರಾಯರ ! ಬೆನ್ನ ಮ್ಯಾಲ ಕಾಲು ಕೊಡ್ರಿ ! ನಾ ಬೇಡೋದು ಖೋಲಿ ಒಂದು ! ನನ್ನ ಹುಣ್ಣು ಮಾಯ್ದ ಮ್ಯಾಲ ಈ ಊರಾಗs ನಿಂದ್ರೂದುಲ್ಲ ! ಗೊರು ಹೆಚ್ಚಾಗಿ ಮಿತಿಮೀರಿ ಕೆಮ್ಮುವನು)

ನಾರಾಯಣರಾಯರು—ಥೂ ! ಸೂಳೀ ಮಗನೆ ! ಈ ಮನಿ ಎಲ್ಲಾ ಹೊಲಸು ಮಾಡೀ! ನಡಿ ಹೊರಗ ! ಅಂಗಳದಾಗ ಉಗುಳೀ ಮತ್ತೆ ? ಮುಂಚೆ ಬಾಗಲದ ಹೊರಗ ಹೋಗು.

(ರಾಮಣ್ಣನು ಅತಿಪ್ರಯಾಸದಿಂದ ಎದ್ದು ಹೊರಡುತ್ತಾನೆ. ಹೋಗುವಾಗ ತನ್ನ ಕೈ ಹಿಡಿದು ಕರೆದೊಯ್ಯಲೆಂದು ತುಳಸಿಗೆ ಸನ್ನೆ ಮಾಡುತ್ತಾನೆ. ಹೊರಡಲನುವಾಗು ವಂತೆ ಸರಿದಾಡಿ ತುಳಸಿಯು ಮತ್ತೆ ಕುಳಿತಲ್ಲಿಯೇ ಕುಳಿತುಕೊಳ್ಳುತ್ತಾಳೆ.)

ನಾರಾಯಣರಾಯರು—(ಮಿನುಗುನಗೆಯಿಂದ ತುಳಸಿಯ ಕಡೆಗೆ ನೋಡುತ್ತಾ) ನೀ ಯಾರ, ಹೂವಿನ ಚಾಣಿ !

ತುಳಸಿ—(ತುರುಬಿನ ಮೇಲೆ ಕೈಯಾಡಿಸಿಕೊಂಡು ಬಿಗುವಿನಿಂದ) ಯಾಕ, ಸಾಮೇರು ನನ್ನ ತುರುಬಿನ ಮ್ಯಾಲ ಹರಿ ಹಾಯೋದು ? ನಾ ಹೂವು ಸಿಗಿಸಿಕೊಂಡ್ರ ನಿಮ್ಮ ಕಣ್ಯಾಕ ಅದರ ಮ್ಯಾಲ ?

ನಾರಾಯಣರಾಯರು—ಓಹೋ ! ಇಷ್ಟು ಬಿಗುವು ಬಂದದೇನು ಈಗಾಗಲೇ ?

(ಬಗ್ಗಿ ನಿಂತು ತಿಳಿಸಿ ಹೇಳುವವರಂತೆ ಕೈ ಮುಂದೆ ಮಾಡಿ) ನೀನಾರು ನಾಗವೇಣಿ, ಸಕಲ ಕಲಾ ಪ್ರವೀಣೆ !

ತುಳಸಿ—(ಮೂಗು ಮುರಿದು) ಅವ್ವ ! ಇದೇನು ಕಂಪನಿ ಆಡೋ ನಾಟಕಾ ಅಂತ ತಿಳಿದದೇನs ಈ ಮಂಗ !

ನಾರಾಯಣರಾಯರು—(ನಕ್ಕು) ಇದೂ ಅಲ್ಲೇನು ? ಹೋಗಲಿ ಬಿಡು. (ಬೇರೆ ಧ್ವನಿಯಲ್ಲಿ) ನೀ ಯಾರವಾ ತಂಗಿ !

ತುಳಸಿ—ಹೂಂ ! ಹೀಂಗ್ರ ಕೇಳ್ರಿ : ಹೇಳತೇನಿ. ನಾ ರಾಮಣ್ಣನ ಮಗಳು....

ನಾರಾಯಣರಾಯರು—ತುಳಸಿ, ಅಲ್ಲs ನಿನ್ನ ಹೆಸರು ?

ತುಳಸಿ—ಹೂಂ ! ಯಾಕ ಹೆಸರು ದೆಶೆ ವಿಚಾರ ರಾಯರಿಗೆ ?

ನಾರಾಯಣರಾಯರು—ತುಳಸಿ ! ತುಳಸಿ ! ಭಲೆ ಏನು ಹೆಸರು ನಿಂದು ! ಮಲ ಮಲ ಅಂತೀ ನೋಡು ಚಿಗತ ಬಳ್ಳೀ ಹಂಗ !

ತುಳಸಿ—(ಓರೆಗಣ್ಣಿನಿಂದ ನಕ್ಕು) ಊಂ ! ತಾವು, ಧಣೇರು ! ಸಾಗವಾನಿ ಮರದ್ಹಂಗ ಬೆಳದೀರಿ ಅಡಮುಟ್ಟಾಗಿ !

ನಾರಾಯಣರಾಯರು — ಹೂಂ ! ವರ್ಣನಾ ಬೇರೆ ! ನೀ ಯಾಕ ಬಂದಿ, ತುಳಸಿ ! ನಿಮ್ಮಪ್ಪನ ಸಂಗತಿ ?

ತುಳಸಿ—ಮನಿ ಕೇಳಲಿಕ್ಕೆ.

ನಾರಾಯಣರಾಯರು—ವಾರೆವಾ ! ನಾ ಮನಿ ತುಂಬಿಸಿಗೊಳ್ಳಲಿಕ್ಕೆ ಕಬೂಲಿದ್ರ ಮನಿ ಕೇಳಲಿಕ್ಕೆ ನಿನಗ ಬಾಯಿ ! ಏನು ಒತ್ತೀ ಹಾಕಿದ್ದು ತಿರುಗಿ ಬಿಡ್ರಿ ಅಂತ ಬೇಡತಿಯೋ ?

ತುಳಸಿ—ಒತ್ತಿ-ಗಿತ್ತಿ ನಮಗೆಲ್ಲ ಗೊತ್ತಿಲ್ಲ ರಾಯರ ! ಆ ಹಿತ ಮತ್ತ ನಿಮಗs ಕೊಟ್ಟಾನ ದೇವ್ರು !

(ಅಷ್ಟರಲ್ಲಿ ರಾಮಣ್ಣನು ಸಂಶಯದಿಂದ ಎರಡೂ ಕಡೆಗೆ ನೋಡುತ್ತ ಬರುವನು)

ನಾರಾಯಣರಾಯರು - ಇಲ್ಲಿ ಬಾ, ರಾಮಣ್ಣ, ಕೂಡು. ದೇವರು ನನಗೂ ತುಸು ದಯಾಮಾಯಾ ಕೊಟ್ಟಾನ, ಏನಪಾ ಅಂದ್ರ. ಈ ಕೈ ಸಾಲಿ ಖೋಲಿ ಬೇಕೆಂದೆಲ್ಲಾ ? ತಗೋ, ಹದಿನೈದು ದಿವಸ್ಯಾಕ, ಒಂದು ತಿಂಗಳು ಇರು ಹೋಗಲಿ. ನಿನ್ನ ಹುಣ್ಣು-ಗಿಣ್ಣು ನೆಟ್ಟಗೆ ಮಾಡಿ ಕೊಡು ಹೋಗು. ಕೆಮ್ಮಿ ಉಗುಳಿ ಅಂಗಳಾ ಹೊಲಸು ಮಾಡೀ ಮತ್ತ!

ಫಿನಾಯಿಲ್ ಹಾಕಿ ತೊಳಸಲಿಕ್ಕೆ ರೊಕ್ಕಾ ಕೊಡಬೇಕಾದೀತು ನೀನs ! ಮಾಳಿಗೆ ಮ್ಯಾಲ ತುಸು ಹುಲ್ಲು-ಪಲ್ಲು ಬೆಳೀಲಿಕ್ಕೆ ಹತ್ತ್ಯೇದ. ನಿಚ್ಚಣಿಕೆ ಏರಿ ಕಳೀ ತಗಿ ಅಂದ್ರ, ತೀರ್ತು! ಬಡವರ್ನ ನೋಡ ಕೊಳ್ಳದೇ ಇದ್ದ ಜನಕ ಕೋತೀ ಬಾಲ ಯಾರೆಲ್ಲಾ ಅಂದ್ರಂತ ! ನಾ ಹಾಂಗಲ್ಲಾ ಏನಪಾ ಅಂದ್ರ !

ರಾಮಣ್ಣ—ಅಲ್ಲ ರಾಯರ, ಮತ್ತ .......

ನಾರಾಯಣರಾಯರು—ಥೂ ! ನಿನ ! ಇಂಥಾ ಹೊತ್ತಿನ್ಯಾಗ ನಡುವ ಬಾಯಿ ಹಾಕಬಾರದು ! ಮತ್ತ ನನ ಮನಸು ತಿರುಗೀತು ! ನಡಿ ಇನ್ನ ಕಸ-ಗಿಸ ಹೊಡಕೊ ! ಖೋಲೀದು ! ಇಲ್ಲಿಷ್ಟು ಸಗಣಿ ಅದ. ಹಸನಾಗಿ ಸಾರಿಸಿಕೋ ಹೂಂ ! ನಡೆಯಿನ್ನು ನಡಿ !

(ರಾಮಣ್ಣನು ಹೊರಡುತ್ತಾನೆ. ತುಳಸಿಯು ಅವನನ್ನು ಹಿಂಬಾಲಿಸುತ್ತಾಳೆ. ನಾರಾಯಣರಾಯನು ನಗೆಮೊಗದಿಂದ ಅವರನ್ನೇ ನೋಡುತ್ತಾ ನಿಲ್ಲುತ್ತಾನೆ.)

(ತೆರೆಯು ಬೀಳುವುದು.)

---

## ಪ್ರವೇಶ ೩

(ನಾರಾಯಣರಾಯನ ಡ್ರಾಯಿಂಗ್ ರೂಮಿನ ಎದುರಿನ ಮನೆಯಂಗಳ. ತೆರೆಯ ಎಡಕ್ಕಿರುವ ಬಾಗಿಲೇ ಕೈಸಾಲೆಯ ಖೋಲಿಯ ಬಾಗಿಲು. ಒಳಗೆ ಒಂದು ಕೈ ಚಿಮಣಿಯು ಬೆಳಕಿಗಿಂತ ಹೊಗೆಯನ್ನು ಹೆಚ್ಚಾಗಿ ಬೀರುತ್ತಲಿದೆ. ರಾಮಣ್ಣನು ನರಳುತ್ತ ಮಲಗಿದ್ದಾನೆ. ಬಾಗಿಲದಲ್ಲಿ ತುಸು ಮುಂದಕ್ಕೆ ತುಳಸಿಯು ವಿಚಾರ ಪರಳಾಗಿ ಕುಳಿತಿದ್ದಾಳೆ. ಡ್ರಾಯಿಂಗ್ ರೂಮಿನ ಎರಡೂ ಬಾಗಿಲುಗಳು ಇಕ್ಕಿಕೊಂಡಿದೆ.)

ರಾಮಣ್ಣ—(ನರಳುತ್ತ) ಅವ್ವಾ ! ಹಯ್ಯೋ ! ಕಾಲೆಲ್ಲಾ ಎಳೀತದ, ತುಳಸಕ್ಕ! ಚೈನಿಲ್ಲ ಮಯ್ಯಾಗ ! ಎಂಥ ಬಾಳೆವೋ ಏನೋ ! ದೇವರು ಹುಟ್ಟಿಸಿದ, ನಾವು ಹುಟ್ಟಿದಿವಿ. ಈಗ ಅನುಭೋಗಸಂತಾನು, ಅನುಭೋಗಸ್ತೇವಿ. ಮೈಯಾಗ ಎಣ್ಣಿದ್ದಾಗ ನೆಲಾ ಕೆಳಗ ಮೇಲ ಮಾಡಿ

ಬಿಡುತ್ತಿದ್ದೆ ಎರಡು ದಿವಸದಾಗ! ಈಗ! ಅಯ್ಯೋ! ಕಾಲು ಸೇದತದ! ಸೇದತದ! ದೇಶಾಂತರ ಹೋಗಿ ಬಂದೆ ನಿಮ್ಮವ್ವನ ಕಾಲಾಗ; ಕಾಶಿ ಆತು. ಪರಯಾಗ ಆತು. ಹುಣ್ಣು-ಹುಣ್ಣು-ಮುಂಡ್ಯಾಗ-ಉಳಕೊಂಡತೂ, ಉಳಕೊಂಡತು! ಇಲ್ಲಿ ತುಸು ಬಾ; ತುಳಸಕ್ಕಾ!

ತುಳಸಿ—(ಹತ್ತಿರ ಹೋಗಿ) ಅಪ್ಪಾ, ಯಾಕ?

ರಾಮಣ್ಣ—ಆಗಲೆ ಆ ಪ್ಯಾರಲ ಹಣ್ಣು ಕೊಟ್ಟಿಲ್ಲಾ, ತುಳಸಿ, ಎಲ್ಲಿಂದ ತಂದಿ ಅದನ್ನ

ತುಳಸಿ—ಎಲ್ಲಿಂದಾರ ತರ್ಲಿ, ನಿನಗೆ ಹೊಟ್ಟೆಗೆ ಹಿತ್ಯ ಆತೊ ಇಲ್ಲೊ?

ರಾಮಣ್ಣ—ಆತವ್ವಾ, ಆತು! ಯಾರು ಕೊಟ್ಟರು ಅದನ್ನು ನಿನಗ?

ತುಳಸಿ—ಯಾರಿಲ್ಲೇಳು. ಇಲ್ಲಿ ಧಣೇರು ಕೊಟ್ಟರು.

ರಾಮಣ್ಣ—ನಾರಪ್ಪನ?

ತುಳಸಿ—ಹೂಂ.

ರಾಮಣ್ಣ—ಅದಕ್ಯ ಅಂದೆ. ಒಂದು ಮಾತು ಹೇಳತೇನಿ ನೋಡು ತುಳಸಿ, ನಿನಗ ಸೆರಗಿನಾಗಿ ಗಂಟು ಹಕ್ಕೊ. ಹೆಣ್ಣು ಮಗಳ ಮಾರಿ-ಮೂಗು ತುಸು ಸಿವಳ ಇದ್ರ ತೀರ್ತು. ಜನ ಆಕಿನ್ನ ಸುಮ್ಮನ ಇರಗೊಡೂದುಲ್ಲ. ನಾರಪ್ಪನ ಕಣ್ಣಂದ್ರ ಹದ್ದಿನ ಕಣ್ಣು. ಎಚ್ಚರಿರು. ನಿಮ್ಮವ್ವನ್ಯ ಆಗಲಿಲ್ಲs ರಂಡಿ ಮುಂಡಿ, ನಾ ಇರಲಾಕೂನೂ? ಇಕಾ! ಇಲ್ಲಿ ನೋಡು s ಮುತ್ತಿನಂಥ ವರಾ ನೋಡಿ ಮದುವಿ ಮಾಡತೇನಿ ನಿನಗ. ಗರತೀ ಹಂಗ ಬಾಳೇವು ಮಾಡು. (ಕಣ್ಣೀರಿಡುವನು)

ತುಳಸಿ—ಮಲಕೋಳಪಾ, ನಿದ್ದೀ ಮಾಡು! ಸಸಾರದ ಚಿಂತೇನು, ಅವs ಅದ ಯಾರ ಬಾಸಿಂಗ ಬಲ ಯಾರು ಬಲ್ಲರು! ನಿನ್ನ ಹುಣ್ಣು ನೆಟ್ಟಗಾಗಲಿ. ಆ ಮ್ಯಾಲ ನನಗೆ ತಾಳಿಮಣಿ ಕಟ್ಟುವಂತಿ. ಇನ್ನೀಸು ಪ್ಯಾರಲಹಣ್ಣು ಕೊಡಲೇನು? ಇಲ್ಲೆ ಬುಟ್ಯಾಗ ಅವs?

ರಾಮಣ್ಣ—ಊಂಹೂಂ! ಮಲಕೋತೇನಿ ಇನ್ನ, ಕಣ್ಣ ಮುಚ್ಚತೇನಿ ಹಾಂಗ....ಅವ್ವಾ! ಆ ದೀಪ ದೊಡ್ಡದು ಮಾಡು, ತುಳಸಕ್ಕಾ, ಮಲಕೋ ಇನ್ನ ನೀನೂ.

(ತುಳಸಿಯು ಕೈ ಚಿಮಣಿಯನ್ನು ಆರಿಸಿ ಹೋಗಿ ತನ್ನ ಹಾಸಿಗೆಯ ಮೇಲೆ

ಒರಗುತ್ತಾಳೆ. ರಾಮಣ್ಣನಿಗೆ ತುಸು ಜಂಪು ಹತ್ತಲು ಮೆಲ್ಲನೆ ಸರಿದು ಬಾಗಿಲಿನ ಹತ್ತಿರ ಕುಳ್ಳಿರುತ್ತಾಳೆ. ತುಸು ಹೊತ್ತಿನ ಮೇಲೆ ಡ್ರಾಯಿಂಗ್ ರೂಮಿನ ಎರಡೂ ಬಾಗಿಲು ತೆರೆಯುವುವು. ನಾರಾಯಣರಾಯನು ಬಾಗಿಲಲ್ಲಿ ನಿಂತು ತುಳಸಿಯು ಕುಳಿತ ಕಡೆಗೆ ದಿಟ್ಟಿಸಿ ನೋಡಿ ಸನ್ನೆ ಮಾಡುವನು.)

ತುಳಸಿ—(ಮೆಲುದನಿಯಲ್ಲಿ) ಬರಲ್ಯಾ ?

ನಾರಾಯಣರಾಯರು—ಹೂಂ.

ತುಳಸಿ—(ಹತ್ತಿರ ಹೋಗಿ, ಮೆಲುನಗೆಯಿಂದ) ಯಾಕ, ನನ್ನ ಯಾಕ ಕರದರು ಧಣೇರು ?

ನಾರಾಯಣರಾಯರು—(ನಕ್ಕು) ಯಾಕೂ ಇಲ್ಲ, ನನ್ನ ಮನಿ ತೋರಿಸತೇನಿ, ಹ್ಯಾಂಗದ ! ಇಲ್ಲಿ ನೋಡು ! ನಾಕೂ ಗೋಡೀ ಮ್ಯಾಲ ಫೋಟೋ ಹಾಕ್ಯಾವ ಸಾಲಕ ! ಬಣಗಾರು ಬರೆದ ಚಿತ್ರ ಅಲ್ಲ ಮತ್ತ, ಇವು ! ಇದ್ದ ಮನಸೇರ ಫೋಟೋ ಇವು ! ಯಂತರಲೆ ತಗದಿದ್ದವು !

(ನಾರಾಯಣರಾಯನು ಮೆಲ್ಲನೆ ತುಳಸಿಯ ಕೈಹಿಡಿಯಲು ಪ್ರಯತ್ನಿಸುತ್ತಾನೆ.)

ತುಳಸಿ—(ತುಸು ನಾಚಿಕೆಯಿಂದ ಕೈಗೊಡುತ್ತ) ಪಿಶ್ಯಾ ! ನನಗ ಇಷ್ಟು ಗೊತ್ತಿಲ್ಲಂತ ತಿಳಿದಿರಾ ! ಹೆಳ್ಳಿ ! ಹುಡುಗಿನ್ನ ಮಾಡಿದಿರೇನು ನನ್ನ (ನಗುತ್ತಾಳೆ.)

ನಾರಾಯಣರಾಯರು—ನೀ ಯಾಕ ಹೆಳ್ಳಿ ಹುಡಗೀ ಆದೀಯ ! ಒಳ್ಳೆ ಹುಡುಗಿ ನೀನು ! ಇಲ್ಲಿ ನೋಡು ! ಇದು ನಾ ಟೇನಿಸ್ ಆಡಿದ ಫೋಟೋ ! ಹ್ಯಾಂಗ ನಿಂತೇನಿ ನೋಡು ರ್ಯಾಕೆಟ್ಟು ಹಿಡಿಕೊಂಡು. ಹೋದವರ್ಷ ಚ್ಯಾಂಪಿಯನ್ ಆಗಿದ್ದೆ ನಾನು, ಚಾಂಪಿಯನ್ !

ತುಳಸಿ—ಹಾಗೆಂದರೇನು ? ಇಂಗ್ಲಿಷು ಕಲಿಯೋದರ ಷ್ಯಕಿ ಏನು ಅದ್ಯೊ ?

ನಾರಾಯಣರಾಯರು—ಅಲ್ಲದ, ಮತ್ತ್ಯ ? ಝೂರಿ ಸವಟು ಅಂತ ತಿಳಿದೇನೂ ಅದು ? ಇದು ನೋಡು ! ಪಂಚಮ ಜಾರ್ಜರ ಫೋಟೋ ಪಂಚಮ ಜಾರ್ಜ !

ತುಳಸಿ—ಅಯ್ಯ ! ಹಾರೂರ ಮನ್ಯಾಗ್ಯಾಕ ಪಂಚಮರ ಫೋಟೋ ? ಮುಟಗೊಂಡಾರs ಮನ್ಯಾಗಿನ್ನ ಹೆಂಗಸೂರು ?

ನಾರಾಯಣರಾಯರು—ಛೀ ! ಮಳ್ಳಿ ಥೂಸಿಗೋ ಅನ್ನು ! ಇದು ರಾಜರ

ಫೋಟೋ, ರಾಜರದು "ರಾಜಾ ಪ್ರತ್ಯಕ್ಷ ದೇವತಾ" !

ತುಳಸಿ—ಅಯ್ಯ! ನನ್ನ ಶಿವನ! ಮಂತ್ರ ಬ್ಯಾರೆ ಹೇಳತೀರಲ್ಲ ನೀವು ಮ್ಯಲಗೀಲೆ?

ನಾರಾಯಣರಾಯರು - ಹಾ ! ಹಾ ! ಹಾ : ಮಂತ್ರ ಅಂತ ತಿಳಿದೇನು ನಾ ಹೇಳಿದ್ದು ಹ ! ಹ ! ಹ ! ನಾವೊಂದು ನಾಟಕಾ ಆಡಿದೆವು ; ಆ ನಾಟಕ ದಾಗಿನ ಗಾದೀ ಮಾತದು! ಇಲ್ಲಿ ನೋಡು! ಕೃಷ್ಣನ ಫೋಟೋ ! ಇದು ಕೃಷ್ಣ ಅಂತ ತಿಳದೀ ಮತ್ತ ! ಇದು ನನ್ನ ಫೋಟೋ ! ನಾನs ಕೃಷ್ಣಾ ಗಿದ್ದೆ ನಾಟಕದಾಗ; ಏನು ಮೋಜು ಆಗಿತ್ತsಂದಿ ಅವತ್ತ ! ಕೌರವ—ಪಾಂಡವರ ಕಥಿ ಕೂಡಿಸಿದವಿ, ಧರ್ಮರಾಜ, ಭೀಮಸೇನ, ಅರ್ಜುನ ಎಲ್ಲಾರು ಹೋಗಿರುತಾರ ದುರ್ಯೋಧನನ ಸಭಾಕ, ಸಂಧೀ ಮಾಡ ಲಿಕ್ಕ ; ಆಗ ಮನ್ಯಾಗ ದ್ರೌಪದೀ ಕೂಸು "ಅಪ್ಪಾ !" ಅಂತ ಅಳಲಿಕ್ಕೆ ಹತ್ತದ ! ಆರೆ ಎಷ್ಟು ರಮಿಸಿವರೂ ಎಲ್ಲೆಲ್ಲು ನಿಂದ್ರೂದುಲ್ಲ ! ಆಗ ಬರತ್ಯದ ನೋಡು ನನ್ನ ಪಾರ್ಟು ! ಅಳೋ ಕೂಸಿನ್ನ ಕರಕೊಂಡು ಅರ್ಜುನನ ಕಡಿಗೆ ಕಳಿಸಬೇಕೂ ಅಂತ ಕೃಷ್ಣ ಹೊರಡತಾನ ಆಗ ಸಭಾಕ ! ಅಂದ್ರ ನಾನs ಹೊರಡತೇನಿ, ನಾನು ! ಗೊತ್ತಾತs ?

ತುಳಸಿ—ಎಲ್ಲಾ ಗೊತ್ತದ ಬಿಡ್ರಿ !

ನಾರಾಯಣರಾಯರು—ಏನು ಹೇಳಲಂದಿ ಆದರ ಮೋಜು! ಹದಿನೈದು ದಿವಸ ರಾತ್ರೆಲ್ಲಾ ರಂಗತಾಲೀಮು ಆಡಿ ನಿದ್ರೆಗೆಟ್ಟಿತ್ತು. ನಮ್ಮ ಜನ! ಸ್ಟೇಜಿನ ಮ್ಯಾಲ ಹಿಂಗ ಕೌರವರು ಕೂಡಿದ್ರು, ಹೀಂಗ ಪಾಂಡವರು ಕೂತಿದ್ರು. ಸಂಧೀ ಮಾಡೋದು ಬಿಟ್ಟು ತೂಕಡಿಸಲಿಕ್ಕೆ ಹತ್ತಿಬಿಟ್ರು ! ಹೊsರಗ ದುಃಶ್ಯಾಸನನ ತೊಡಿ ಮ್ಯಾಲ ಉಳ್ಳದನs ದುರ್ಯೋಧನ ! ಆ ಶಕುನಿ ಮಾಮಾ ?—ಆ ನಮ್ಮ ಗೋಧೀ ವೆಂಕ್ಯಾ ? ಜಾಗರಣಿ ಮಾಡಲಿಕ್ಕೆ ಹಿರದಲ್ಲs ಅವ ? —ಕೂತಲ್ಲೆ ಘೋಲೀ ಹೊಡಿಲಿಕ್ಕೆ ಹತ್ತಿದ ಸೆರೆಗುಡಕರ್ಹಂಗೇ !

ತುಳಸಿ—'ಪಾಪ ! ನಿದ್ದಿಗೆಟ್ಟು ದಣಿದಿದ್ದರು' ಅಂದಿದ್ದಾರು ಜನ! ಇದಕ್ಹೆಚ್ಚು ಏನಂದಾರು ?

ನಾರಾಯಣರಾಯರು—ಶಾಹಣೇಕಿ ಕಾಣತಿದಿ ಎಲ್ಯಾರ? ತಿಕೀಟು ತಗೊಂಡು

ಬಂದಿರತಾರವರು, ನಿದ್ದಿಗೆಟ್ಟು? ಏನು ಮಂದಿ ಗೊರಕೀ ಹೊಡಿಯೋದು ನೋಡಲಿಕ್ಕೆ ಬರತಾರೇನು ನಾಟಕಕ್ಕ? ಮುಂದೆ ಹೇಳ್ತೇನಿ ಕೇಳು, ಆಗ ಬಂತು ನನ್ನ ಪಾರ್ಟು; ನಾ ಕೃಷ್ಣ ಆದವ ಹೋಗಿ ನೋಡತೇನಿ, ಹುಚ್ಚ ಮಂಗ ಆದೆ, ಹುಚ್ಚ ಮಂಗ! ತಲಿ ಒಡಕೊಂಡು ಸಂದ್ಯಾಗ ಬಿದ್ದಾರ ನನ್ನ ಮಕ್ಕಳು! ಹೋಗಿ ಮಂದಿಗೆ ಕಾಣದ್ಹಂಗ ಝಾಡಿಸಿ ಒದ್ದೆ ಶಕುನಿಗೆ! ಕುಂಯ್ಗುಡುಗೋತ ಎದ್ದ ನೋಡು ಹಾಂಗ!

ತುಳಸಿ—ಹೊಂ! ಆಗಿದ್ದೀತು. ಸ್ವಲ್ಪ ಹೊಡಿಯೋದು, ಬಡಿಯೋದು ಜಾಸ್ತೀ ಕಾಣತದ ನಿಮ್ಮಲ್ಲೆ?

ನಾರಾಯಣರಾಯರು—ಮತ್ತೇನು ಮಾಡಬೇಕಿತ್ತು ಹೇಳು ಆವಾಗ? ಗೋಧಿ ವೆಂಕ್ಯಾನು ಬಲು ಹುಷಾರಿ, ನೋಡು! ಎಚ್ಚರಾದ ಕ್ಷಣಕ "ಎಲ್ಲಾರಿಗೂ ನಿದ್ದಿ ಹತ್ತೇದs, ಘಾತಾತು" ಅಂತ ಅನಿಸಿತು. ಅವಗ "ಮಹಾರಾಜ! ಯಾದವೇಶ್ವರನು ಆಗಮಿಸಿದ್ದಾನೆ. ಇನ್ನು ವಿಶ್ರಾಂತಿ ಸಾಕು. ಸಂಧಿಯ ಮಾತನ್ನು ಚಿತ್ತೈಸಬೇಕು ಅಂತ ಜಂತಿ ಹಾರೋ ಹಂಗ ಕೂಗಿಕೊಂಡ! ಒಬ್ಬೊಬ್ಬರs ಕಣ್ಣು ತಗೆದರು ನೋಡು ಭೂಪತಿ ಗೋಳು! "ಅಪ್ಪಾ! ಅಪ್ಪಾ! ಅಂತ ಒದರಲಿಕ್ಕೆ ಹತ್ತಿತ್ತು ಕೂಸು. ಆಗ ಎಚ್ಚರಿಕೆ ಪಾಂಡವರಿಗೆ!

ತುಳಸಿ—(ನಗುತ್ತ) ಮುಂದೇನಾತು, ಹೇಳ್ರಿ?

ನಾರಾಯಣರಾಯರು - ಮುಂದೇನು ನಾಟಕ ಸಾಗಿತ್ತು ಮತ್ತ! ನಿದ್ದೀನು ಪಾರ್ಟ್‌ನ ಸ್ಟೈಕೀ ಅಂತ ತಿಳಿತು ಜನ ಎಲ್ಲಾ! ) ನಗುತ್ತಾ ತುಳಸಿಯ ಗಲ್ಲವನ್ನು ಚಿವುಟಲು ಹೋಗುವನು.)

ತುಳಸಿ—(ತುಸು ಸಿಟ್ಟಿನಿಂದ) ನಾ ಒಲ್ಲೇ ಅಂದ್ರ! ನೀವೆಲ್ಲಾ ಹೀಂಗ ಮಾಡಬ್ಯಾಡ್ರಿ!

ನಾರಾಯಣರಾಯರು—ಇನ್ನೂ ನೋಡಿಲ್ಲ ತುಳಸಿ ನೀನು, ಆ ಒಳಗಿನ, ಖೋಲೀನ ಇಲ್ಲಿ ಬಾ, ನಾ ತಗದದ್ದು ಚಿತ್ರಾ ತೋರಸತೇನಿ!

ತುಳಸಿ—(ಮೆಲ್ಲಗೆ ಕೈ ಕೊಸರಿಕೊಂಡು) ಈ ಸಣ್ಣ ಕೂಸಿನ ಚಿತ್ರ ಯಾರದು ನಾರಣ್ಣ?

ನಾರಾಯಣರಾಯರು—ನಂದೂನs ಅದೂ, ಹುಡುಗಿ! ಎಷ್ಟಂತ ಹೇಳ ಬೇಕು ನಿನಗೆ! ನಾ ಕೂಸಿದ್ದಾಗಿಂದು! (ಒಮ್ಮೆಲೆ ತೀಕ್ಷ್ಣದೃಷ್ಟಿ ಯಿಂದ ನೋಡಿ ಎದುರಿಗೆ ಹೋಗಿ ನಿಂತು) ಅದಿರಲಿ, ನೀ "ನಾರಣ್ಣ" ಅಂತ ಯಾಕ ನನಗೆ ಕರೆದಿದ್ದು? ಮೊದಲು ದ್ಯಾವ್ರು, ಆ ಮ್ಯಾಲ ರಾಯ್ರು, ಈಗ ನಾರಣ್ಣ! "ನಾರಣ್ಣ" ಅಂತ ಯಾಕ ಕರದೀ! (ಒದರುವನು.)

ತುಳಸಿ—(ಅಟ್ಟಹಾಸದಿಂದ ನಕ್ಕು) ಬಲೇ ಪ್ರಶ್ನೆ ರಾಯರದ್ದು! (ಅದೇ ದನಿ ಯಲ್ಲಿ) ನೀವು ಒಳಗ್ಯಾಕ ನನಗೆ ಕರೆದಿದ್ದು? ಮೊದಲು ಮನಿ ಬಿಟ್ಟು ಹೊರಗ, ಆಮ್ಯಾಲ ಪಡಸಾಲಿ ಖೋಲ್ಯಾಗ, ಈಗ ಇಲ್ಲಿ ನಡುಮ ನ್ಯಾಗ, ನೀವು ಒಳಗ್ಯಾಕ ಕರದಿರಿ ನನ್ನ. (ನಗುವಳು.)

(ತೆರೆ ಬೀಳುವುದು.)

---

## ಪ್ರವೇಶ ೪

[ಹಿಂದಿನ ಪ್ರವೇಶವು ಸಂಘಟಿಸಿ ಸುಮಾರು ನಾಲ್ಕು ದಿನಗಳಾದ ಮೇಲೆ, ಸಮಯ ಮಧ್ಯರಾತ್ರಿಯ ಸುಮಾರು. ಕೈಸಾಲೆಯ ಕೋಣೆಯಲ್ಲಿ ಹಾಸಿಗೆಯ ಮೇಲೆ ನರಳುತ್ತ ರಾಮಣ್ಣನು ಎದ್ದು ಕುಳಿತಿದ್ದಾನೆ. ಡ್ರಾಯಿಂಗ್ ರೂಮಿನ ಕಡೆಗೆ ನೋಡುವನು. ಬಾಗಿಲುಗಳು ಹಾಗೆಯೆ ತುಸು ಮುಂದಕ್ಕೆ ಮಾಡಿದ್ದವಿದ್ದು ಒಳಗಿಂದ ಮಂದವಾಗಿ ಉರಿಯುತ್ತಿರುವ ಒಂದು ದೀಪದ ಬೆಳಕು ಹೊರಚೆಲ್ಲುತ್ತಿರುತ್ತದೆ.]

ರಾಮಣ್ಣ—ಮಿಂಡಿ! ಮಿಂಡಿ! ಮಿಂಡಿ! ನನ್ನ ಹೇಣ್ತಿ ಆ ಅಕ್ಷರ ನುಡಿದಾಗ ಕಿವ್ಯಾಗ ವಿಷಾನs ಹಿಂಡಿದಳೇನೋ ಅಂತೇನಿ. ಹಗಲು-ರಾತ್ರಿ, ಚಕ್ರ ತಿರುಗಿದ್ಹಂಗ ತಿರುಗತದ ತಲ್ಯಾಗ. ಅದರ ಮ್ಯಾಲ ಈ ಮುಂಡಿ ಹುಣ್ಣು ಮಿಂಡಿ-ಹುಣ್ಣು-ಮುಂಡಿ-ಹುಣ್ಣು........ಸಿವನೇ! (ಅಳುತ್ತಾ) ಯಾಕ ಬದಕಿಸದಿ! ಯಾಕ ಬದಕಿಸದಿ!....... ತುಳಸಕ್ಕಾ! ನೀರೀಸು ಕೊಡು! ಬಾಯಿ ಮುಕ್ಕಳಿಸತೇನಿ!........ಎಲಾ, ಇವನ! ಓನ್s! ಕೊಡುವಳ್ಯಲ್ಲೊ ಘನ ನಿದ್ದಿ ಈ ಹೆಣ್ಣು ಜಾತಿಗೆ! (ತುಳಸಿಯ

ಹಾಸಿಗೆಯ ಕಡೆಗೆ ಕೈ ನೀಡಿ ಎಬ್ಬಿಸಲು ಪ್ರಯತ್ನಿಸುವನು. ಅವಳು ಅಲ್ಲಿ ಇಲ್ಲದಿರುವುದನ್ನು ಕಂಡು ಎದೆಯು ಧಸಕ್ಕೆನ್ನುವದು) ತುಳಸಿ! ತುಳಸಿ! ಎಲ್ಲಿ ಹೋದಿ! ಏ ಬೇಬರಸಿ ತುಳಸಿ! (ಡ್ರಾಯಿಂಗ್ ರೂಮಿನ ಕಡೆಗೆ ಹೊರಳಿ ನೋಡಿ) ನನ್ನ ಮಗಳು—ನನಕ ಬಂದ ಸಂಶಯಾನ ಖರೆ ಇದ್ರ....ನಾ ಯಾಕಾ ಇಲ್ಲಿದ್ದೇನು! (ಎದ್ದು ಕುಂಟುತ್ತಾ ಡ್ರಾಯಿಂಗ್ ರೂಮಿನ ಕಡೆಗೆ ಸಾಗುವನು.. ಮುಂದಕ್ಕೆ ಮಾಡಿದ ಬಾಗಿಲನ್ನು ತೆರೆದು ಒಳಗೆ ಇಣಕಿ ನೋಡಿ ಸಿಡಿಲು ಬಡಿದವನಂತೆ ಹಿಂತಿರುಗುವನು. ಹಾವು ಕಚ್ಚಿದವನಂತೆ ಅವನ ಮೋರೆಯು ಹುಚ್ಚಿಟ್ಟಿರುವದು) (ಘೋಲಿ ಹೊಡೆಯುತ್ತ) ಅ....ಯ್ಯೋ! ನನ್ನ ಮಗಳು! ಮಿಂ....ಡಿ! (ನಿಶ್ಚೇಷ್ಟಿತನಾಗಿ ನೆಲಕ್ಕೆ ಬೀಳುವನು.)

(ಒಳಗಿನಿಂದ ನಾರಾಯಣರಾಯರೂ ತುಳಸಿಯೂ ಗಾಬರಿಯಾಗಿ ಬರುವರು.)

ನಾರಾಯಣರಾಯರು—(ಹೆದರಿಕೆಯಿಂದ) ಸತ್ತ, ನಿಮ್ಮಪ್ಪ ಸತ್ತು ಹೋದ, ತುಳಸಿ!

ತುಳಸಿ—(ಗಂಭೀರಳಾಗಿ ವಿಚಾರಿಸುತ್ತ) ಸಾಯಲಿ, ಸಾಯಲಿ, ಸಾವ್ಯಾರಿಗೆ ಬಿಟ್ಟಿದ್ದ? ತಾನಾಗಿ ಬರೋ ಸಾವು........ ಔತಣ ಕೊಟ್ಟರ ಬಿಟ್ಟೀತs?

ನಾರಾಯಣರಾಯರು—ಹಿಡಿ ಇಲ್ಲೆ, ಖೋಲ್ಯಾಗ ಒಯ್ದು ಇರಿಸೋಣ.. ಹುಣ್ಣಿನ ನೋವಿಗೆ ಸತ್ತಾ ಅಂತ ಹೇಳಬೇಕು ನೋಡು ನಾಳೆ. ಆವನ್ನ ಕೊಂದ ನೋವು ಬ್ಯಾರೇನ ಕಾಣತದ! (ಮೃತದೇಹದ ಮೇಲೆ ಒಂದು ದೋತರವನ್ನು ಹೊಚ್ಚುತ್ತಾನೆ.)

ತುಳಸಿ—ಇದು ಎಂಥ ಪುಕ್ಕತನ, ರಾಜ್ಯಾಕ ಹೊರ್ತರ್ು? ನಾ ಮಗಳು, ಕಲ್ಲೆದಿ ಮಾಡಿಕೊಂಡು ಇದ್ರ ಇವರು ಇಲ್ಲದ್ದೊಂದು ಹೆಚ್ಚಾರ ರಗಳೆ!

ನಾರಾಯಣರಾಯರು—ಪಾಪ! ಮುದುಕ! ನನಗ ಒತ್ತೀ ಒದ್ದದ್ದು ಅರ್ಧ ಮನಸ್ಸಿಗೆ ಹತ್ತಿತ್ತೋ ಏನೋ ಯಾರು ಬಲ್ಲರು!

ತುಳಸಿ—ಬರೇ ಮನೀನ ಬೇಕಿದ್ರು ಇಂಥ ಹತ್ತು ಮನಿ ಕೊಡುತ್ತಿದ್ದೆ ನಮ್ಮಪ್ಪಗ! ಅಲ್ಲ....ಅದು ಮನೀ ಅಲ್ಲ, (ರೊಚ್ಚಿಗೆದ್ದು) ಒತ್ತೀ ಬಿದ್ದದ, ಒತ್ತೀ ಬಿದ್ದದ ಅಂತ ಒತ್ತಿ ಒತ್ತಿ ಹೇಳತೀರಿ? ಹೇಳರಿ ಇದು ಯಾರ

ಮನಿ ? ನಂದೋ ನಿಮ್ಮದೊ (ನಾರಾಯಣರಾಯನ ಕೈಯನ್ನು ಬಲವಾಗಿ ಹಿಡಿಯುವಳು.)

ನಾರಾಯಣರಾಯರು—(ಬೆಚ್ಚಿಬಿದ್ದು) ನಂ ....ದು ಅಲ್ಲ, ಅಲ್ಲ, ನಿಂದು !

ತುಳಸಿ—(ಕೈಬಿಟ್ಟು) ಸಂಸಾರ....ಅವ್ವ....ಬಲು ತ್ರಾಸ ಕೊಟ್ಟವು ಅಪ್ಪಗ. ನಂದೂ ಲಗ್ನ ಮಾಡಬೇಕಂತಿದ್ದ, ಅಪ್ಪ ! ನಾ ಲಗ್ನ ಮಾಡಿಕೊಂಡು ಬಾಳೇವು ಮಾಡೋದು ನೋಡಬೇಕಂತಿದ್ದ !

ನಾರಾಯಣರಾಯರು—(ಪ್ರೀತಿಯಿಂದ) ಈಗಾರ ಏನಾತು ! ತುಳಸಾ ! ನಿನ್ನೀ ದಿವಸದಿಂದ ನನ್ನ ವಿಚಾರ ಒಂದದ. ನಾನೂ ಸುಧಾರಕರ ಪೈಕಿ, ಏನವಾ ಅಂದ್ರ ! ಬೆಳೆದ ಕುಲದಾಗ ಬಳಸಿಕೊಂಡ್ರ ಕುಲ ಕೆಡತsದ ಅಂಬೋವ ನಾನು ! ನಂದೂ ನಿಂದೂ ಲಗ್ನ ಆಗಿ ಬಿಡ್ಲಿ ! ಸಮಾಜಕ್ಕೆ ಒಂದು ಹೊಸ ಕಿತ್ತೇನs ಹಾಕಿ ಕೊಡೋಣ !

ತುಳಸಿ— (ತಿರಸ್ಕಾರದಿಂದ) ಛೀ ! ಮಳ್ಳs ಹೋಗು ! (ಸಾವಧಾನವಾಗಿ) ಅಲ್ಲರೀ, ಲಗ್ನದ ವಿಚಾರ ಯಾಕ ಬಂತು ನಿಮ್ಮ ತಲ್ಯಾಗ ? ನಾ ಲಗ್ನ ಮಾಡಕೋತಿದ್ರ ನಮ್ಮಪ್ಪ ಯಾಕ ಸಾಯುತ್ತಿದ್ದ ? ಗೊತ್ತ ದನೋ ಇಲ್ಲೋ ! ನಾ....ಮಿಂಡಿ ! ಮಿಂಡಿ ಆಗೋದು ಮಾಮೂಲು.

ನಾರಾಯಣರಾಯರು— (ಸಂಶಯದಿಂದ) ಹಾಂಗಾದರೆ ನಿನ್ನ ನೆಚ್ಚಿಗೇನು ನನಗ, ತುಳಸಾ !

ತುಳಸೀ—(ಗಟ್ಟಿಯಾಗಿ ನಕ್ಕು) ಯಾಕ ? ಲಗ್ನಾದರ ಕಟ್ಟಿ ಹಾಕಿದ್ಹಂಗಂತ ತಿಳಿದೀರೇನು ? ಕಾಯುದೆ ಭಂಗ ಮಾಡಿದವರು ಎಷ್ಟು ಜನ ಇಲ್ಲ ? ನೀವೊಂದು ನನ್ನ ನೆಚ್ಚಿಕೊಂಡು ಇರ್ರಿ. ನನ್ನ ನೆಚ್ಚಿಗಿ ಯಾರಿಗದs ನನ್ನ ನೆಚ್ಚಿಗಿ !

(ತೆರ ಬೀಳುವುದು.)

---



# ಗೋಕಾಕರ ನಾಟಕಗಳು

ಇದು ವಿನಾಯಕ ಕೃಷ್ಣ ಗೋಕಾಕರ ನಾಟಕಗಳ ಸಂಕಲನ. 'ವಿಮರ್ಶಕ ವೈದ್ಯ', 'ಯುಗಾಂತರ', 'ಜನನಾಯಕ', 'ಮುನಿದ ಮಾರಿ'-ಇವು ಇಲ್ಲಿ ಸೇರಿರುವ ನಾಟಕಗಳು.

'ವಿಮರ್ಶಕ ವೈದ್ಯ' ಸಾಹಿತ್ಯಿಕ ಪ್ರವೃತ್ತಿಗಳನ್ನೇ ವಸ್ತುವಾಗಿಟ್ಟುಕೊಂಡು ಆಧುನಿಕ ಪದ್ಯಕಾವ್ಯದ ವಿವಿಧ ಪ್ರಕಾರಗಳನ್ನು ಪರೀಕ್ಷಿಸುವ ಮತ್ತು ಹಾಸ್ಯ ವಿಡಂಬನಗಳ ಮೂಲಕ ಸತ್ಯ ಹಾಗೂ ಔಚಿತ್ಯದ ಪಕ್ಷವನ್ನು ಸಮರ್ಥಿಸುವ ನಾಟಕ.

'ಯುಗಾಂತರ'ವೊಂದು ಹೊಸ ಬಾಳಿನ ಸುಕುಮಾರ ಪ್ರಯೋಗ. ಇಂದು ಜಗತ್ತನ್ನು ಎದುರಿಸುತ್ತಿರುವ ಜಟಿಲ ಸಮಸ್ಯೆಗೆ ಮಾರ್ಕ್ಸ್‌ವಾದ ಹಾಗೂ ಅನುಭಾವಗಳ ಸಮನ್ವಯವೇ ಸಮರ್ಪಕ ಉತ್ತರವಾಗಬಲ್ಲುದು; ಆ ಸಮನ್ವಯವನ್ನು ಚಿತ್ರಿಸುತ್ತದೆ ಈ ನಾಟಕ.

ಸಾಮಾಜಿಕ ಪ್ರಜ್ಞೆಯನ್ನು ಅಭಿವ್ಯಕ್ತಿಸುವ ನಾಟಕ 'ಜನನಾಯಕ'. ಜನನಾಯಕನಾಗುವ ಯೋಗ್ಯತೆ ಯಾರಿಗಿದೆ ಎಂಬುದನ್ನು ಚರ್ಚಿಸುವ ಈ ನಾಟಕದಲ್ಲಿ ಹಲವು ತೆರನಾದ ಘರ್ಷಣೆಗಳ ಚಿತ್ರಣವಿದೆ; ಒಳಿತು-ಕೆಡುಕುಗಳ ಸಾರ್ವತ್ರಿಕ ಹೋರಾಟವೂ ಇಲ್ಲಿ ರೂಪಗೊಂಡಿದೆ.

ವಿಶೇಷ ಕಾಂತಿಯುಳ್ಳ ಸ್ವಭಾವಗ್ರಹಣ ಹಾಗೂ ಸನ್ನಿವೇಶ ಪ್ರಜ್ಞೆಯನ್ನು ಪ್ರಕಟಿಸುವ 'ಮುನಿದ ಮಾರಿ' ಏಕಾಂಕದಲ್ಲಿ, ಸ್ತ್ರೀಯು ರಾಕ್ಷಸಿಯಾದರೆ ಹೇಗಿರಬಲ್ಲಳೆಂಬುದನ್ನು ಸ್ಪಷ್ಟಪಡಿಸಲಾಗಿದೆ.

ಈ ನಾಟಕ ಚತುಷ್ಟಯದ ಕರ್ತೃಗಳಾದ ಗೋಕಾಕರು ಈಗ ಸಿಮ್ಲಾದ 'ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್‌ಡ್ ಸ್ಟಡೀಸ್' ಸಂಸ್ಥೆಯ ನಿರ್ದೇಶಕರು.

ಸಾಧಾರಣ ಪ್ರತಿ : 6-50

ಉತ್ತಮ ಪ್ರತಿ : 10-00

---

ಸುರುಚಿ ಪ್ರಕಾಶನ : : ಸರಸ್ವತೀಪುರಂ : : ಮೈಸೂರು-೯